ಧಾರವಾಡ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ

ಸಾಹಿತ್ಯಸಮಿತಿಯ ಪ್ರಕಟನೆ : ೩

ಪ್ರಧಾನ ಸಂಪಾದಕ: ಶಿ. ಶಿ. ಬಸವನಾಳ, ಎಮ್. ಎ.

# ಶಬರಶಂಕರವಿಳಾಸಂ

ಮಹಾಕವಿ ಶ್ರೀ ಷಡಕ್ಷರಿದೇವ

ವಿರಚಿತ

# ಕಿರಾತರುದ್ರಲೀಲೆ

ಅಥವಾ

# ಶಬರಶಂಕರವಿಳಾಸಂ




ಸಂಪಾದಕ:

ಶಿ. ಶಿ. ಬಸವನಾಳ, ಎಮ್. ಎ.



೧೯೪೯

ಧಾರವಾಡ

ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ

ಸಾಹಿತ್ಯಸಮಿತಿ



**ಅರ್ಜುನನ ಮಣಲಲಿಂಗದ ಪೂಜೆ**
( ಶಬರಶಂಕರವಿಳಾಸ : ಆಶ್ವಾಸ ೪, ಪದ್ಯ ೧೦೦ )

ಲಿಂಗರಾಜ ಪ್ರೆಸ್, ಧಾರವಾಡ

# ಮುನ್ನುಡಿ

**ಧಾ**ರವಾಡದ ವಿದ್ಯಾಭಿವೃದ್ಧಿ ಸಂಸ್ಥೆಯ **ಸಾಹಿತ್ಯ ಸಮಿತಿ**ಯವರು ಪ್ರಕಟಿಸಲು ಕೈಕೊಂಡ ವೀರಶೈವ ಸಾಹಿತ್ಯಕ್ಕೆ ಸಂಬಂಧಪಟ್ಟ ಗ್ರಂಥಗಳಲ್ಲಿ **ಶಬರಶಂಕರ ವಿಳಾಸ**ವು ಮೂರನೆಯದು. ಸರ್ವರಿಗೂ ಆದರಣೀಯವಾದ ಭಾರತದ ಕಥಾವಸ್ತುವಿನೊಳಗಿನ ಪ್ರಸಿದ್ಧಭಾಗವೊಂದನ್ನು ಆಯ್ದುಕೊಂಡು ಕವಿಯು ಈ ಕಾವ್ಯವನ್ನು ಚಿಕ್ಕದಾಗಿಯೇ ರಚಿಸಿರುವುದರಿಂದ ಸಾಹಿತ್ಯಪ್ರೇಮಿಗಳಿಗೆ ಆದರಣೀಯವಾಗಿರುವುದಲ್ಲದೆ, ಮಹಾವಿದ್ಯಾಲಯ (ಕಾಲೇಜ್) ಮೊದಲಾದ ಉಚ್ಚಶಿಕ್ಷಣ ಸಂಸ್ಥೆಗಳಲ್ಲಿಯೂ ಪಠ್ಯಪುಸ್ತಕವನ್ನಾಗಿ ನಿಯಮಿಸಲು ಅನುಕೂಲವಾಗಿರುವುದೆಂದು ಬಗೆದು ಪ್ರಸ್ತುತ ಸಂಸ್ಕರಣವನ್ನು ಹೊರಡಿಸಲಾಗಿದೆ. ಷಡಕ್ಷರದೇವನ ಕಾವ್ಯಗಳು ಲೋಕಪ್ರಿಯವಾಗಿದ್ದರೂ ಆಯ್ದ ಪಾಠಾಂತರಗಳನ್ನೊಳಗೊಂಡ ಶುದ್ಧವಾದ ಮುದ್ರಿತ ಪ್ರತಿಗಳ ಅಭಾವವಿದ್ದುದರಿಂದ, ಆ ಕೊರತೆಯನ್ನು ಹೋಗಲಾಡಿಸುವ ಪ್ರಥಮ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಈ ಸಂಸ್ಕರಣಕ್ಕಾಗಿ ಹಲವು ತಾಳೆವೋಲೆ, ಮುದ್ರಿತ ಹಾಗು ಕೈಬರೆಹದ ಪ್ರತಿಗಳನ್ನು ಉಪಯೋಗಿಸಕೊಳ್ಳಲಾಗಿದೆ. ಶ್ರೀ. ಶಿವಯೋಗಮಂದಿರದ ಚಾಲಕರು ತಾಳೆವೋಲೆಯ ಮೂರು ಪ್ರತಿಗಳನ್ನು ಎರವು ಕೊಟ್ಟುದಕ್ಕಾಗಿ ಅವರಿಗೆ ಸಮಿತಿಯು ಋಣಿಯಾಗಿದೆ.

ಇದರಲ್ಲಿ ಸೇರ್ಪಡೆಯಾಗಿರುವ ತ್ರಿವರ್ಣಚಿತ್ರಗಳಲ್ಲಿ — 'ಅರ್ಜುನನ ಮಣಲ ಲಿಂಗದ ಪೂಜೆ'ಯ ಚಿತ್ರವನ್ನು — ಶ್ರೀಮಾನ್ ದಾನಪ್ಪ ಹಾಲಬಾವಿ, ಎ. ಎಮ್., ಜಿ. ಡಿ. ಆರ್ಟ (ಮುಂಬೈ), ಮುಖ್ಯಾಧ್ಯಾಪಕ, ಕಲಾಮಂದಿರ, ಧಾರವಾಡ ಇವರು ಚೆನ್ನಬಸವ ಪುರಾಣಕ್ಕೆ ( ಸಾ. ಸ. ಮೊದಲನೆಯ ಪ್ರಕಟನೆ ) ಸಿದ್ಧಪಡಿಸಿಕೊಟ್ಟದ್ದನ್ನೇ — ಇಲ್ಲಿ ಪುನಃ ಉಪಯೋಗಿಸಕೊಳ್ಳಲಾಗಿದೆ. ಇದಲ್ಲದೆ ಈ ಗ್ರಂಥಕ್ಕಾಗಿಯೇ 'ಕಿರಾತವೇಷದಲ್ಲಿಯ ಶಿವ-ಪಾರ್ವತಿಯರು ಮಂದಾರವೃಕ್ಷದ ನೆರಳಲ್ಲಿ ವಿಶ್ರಮಿಸಿರುವ' ಚಿತ್ರವನ್ನು ಪ್ರತ್ಯೇಕವಾಗಿ ಸಿದ್ಧಪಡಿಸಿಕೊಟ್ಟದ್ದಕ್ಕಾಗಿ ಸಮಿತಿಯವರು ಅವರ ಉಪಕಾರವನ್ನು ಸ್ಮರಿಸುವರು. ಇನ್ನುಳಿದ, ಷಡಕ್ಷರದೇವರ ಜೀವನಕ್ಕೆ ಸಂಬಂಧಪಟ್ಟ — ೧. ಷಡಕ್ಷರಿಯ ಗುರುಗಳ ಸಮಾಧಿ ೨. ಷಡಕ್ಷರಿ ಕವಿಯ ತಪೋಭೂಮಿ ೩. ಷಡಕ್ಷರಿ ಕವಿಯ ಮಠ ೪. ಷಡಕ್ಷರಿ ಕವಿಯ ಸಮಾಧಿ—

ಈ ಚಿತ್ರಗಳ ಪಡಿಯಚ್ಚನ್ನು ಸಕಾಲಕ್ಕೆ ಒದಗಿಸಿಕೊಟ್ಟ ಬೆಂಗಳೂರಿನ 'ಶರಣಸಾಹಿತ್ಯ' ಮತ್ತು 'ಸ್ವತಂತ್ರ ಕರ್ನಾಟಕ' ಪತ್ರಿಕೆಗಳ ಸಂಪಾದಕರಾದ ಕೀರ್ತನಕೇಸರಿ ಬಿ. ಶಿವಮೂರ್ತಿ ಶಾಸ್ತ್ರಿಗಳಿಗೆ ಸಮಿತಿಯವರು ಕೃತಜ್ಞರಾಗಿದ್ದಾರೆ.

ಗ್ರಂಥದ ಶುದ್ಧಪ್ರತಿಯನ್ನು ಬರೆದು ಕೊಟ್ಟ ಶ್ರೀಮಾನ್ ಶಿವಲಿಂಗಯ್ಯನವರು ಮರಡೂರ, ನಿವೃತ್ತ ಕನ್ನಡ ಶಾಲಾಧಿಕಾರಿ, ಜಿಲ್ಲಾ ಲೋಕಲ್ ಬೋರ್ಡ್, ಧಾರವಾಡ ಇವರಿಗೂ, ಅಚ್ಚಿಗೆ ಯೋಗ್ಯವಾಗುವಂತೆ ಪಾಠಾಂತರಗಳನ್ನೊಳಗೊಂಡ ಮಾತೃಕೆಯನ್ನೂ ಪದ್ಯಗಳ ಅಕಾರಾದಿ, ಕಠಿಣ ಶಬ್ದಗಳ ಕೋಶವನ್ನೂ ಸಿದ್ಧಪಡಿಸುವಲ್ಲಿ ನೆರವಾದ ಶ್ರೀಮಾನ್ ಕೇಪು ಶಂಕರನಾರಾಯಣರಾಯರು, ಲಾಯಬ್ರೇರಿಯನ್, ಲಿಂಗರಾಜ ಮಹಾವಿದ್ಯಾಲಯ, ಬೆಳಗಾವಿ ಇವರಿಗೂ ಸಮಿತಿಯವರು ತುಂಬ ಉಪಕೃತರಾಗಿದ್ದಾರೆ.

ಇನ್ನು, ಈ ಗ್ರಂಥದ ಪ್ರಕಟನೆಯು ನಡೆದಾಗ ಕಾಲಕಾಲಕ್ಕೆ ಸೂಕ್ತ ಸಲಹೆಗಳನ್ನಿತ್ತ ಶ್ರೀಮಾನ್ ವೀರಭದ್ರಪ್ಪನವರು ಹಾಲಬಾವಿ, ಬಿ. ಎ., ಎಲೆಲ್, ಬಿ., ನಿವೃತ್ತ ಒಂದನೆಯ ವರ್ಗ ಸಬ್-ಜಜ್, ಧಾರವಾಡ; ಶಿವಮೂರ್ತಿ ಬುದ್ಧಯ್ಯಸ್ವಾಮಿಗಳು ಪುರಾಣೀಕ, ಧಾರವಾಡ; ಶ್ರೀಮಾನ್ ವೀರಭದ್ರಪ್ಪನವರು ಕೊಪ್ಪಳ, ಎಮ್. ಎ., ಬಿ. ಟಿ., ಅಧ್ಯಾಪಕ, ರಾಜಾ ಲಖಮಗೌಡ ಸರದೇಸಾಯಿ ಹಾಯಸ್ಕೂಲ, ಧಾರವಾಡ — ಇವರುಗಳಿಗೆ ಸಮಿತಿಯವರು ಕೃತಜ್ಞತೆಯನ್ನು ಸೂಚಿಸುತ್ತಾರೆ.

ಈ ಗ್ರಂಥದ ಮುದ್ರಣವು ಮುಗಿಯುತ್ತ ಬಂದಿರಲು, ಮುಂಬೈ ವಿಶ್ವವಿದ್ಯಾಲಯದ ಕನ್ನಡ ಪಠ್ಯ ಪುಸ್ತಕ ಸಮಿತಿಯವರು ೧೯೪೮ರ ಕಾಲೇಜ ಪರೀಕ್ಷೆಗೆ ಇದರಲ್ಲಿಯ ಕೆಲವು ಭಾಗಗಳನ್ನು ಆಯ್ದು ಪಠ್ಯ ಪುಸ್ತಕವನ್ನಾಗಿ ಮಾಡಿರುವರೆಂದು ತಿಳಿದು ಬಂದಿತು. ಇದಕ್ಕಾಗಿ ಸಮಿತಿಯವರು ಅದರ ಅಧಿಕಾರಿಗಳಿಗೆ ಕೃತಜ್ಞರಾಗಿದ್ದಾರೆ.

ಕರ್ನಾಟಕದಲ್ಲಿ ಪುಸ್ತಕಗಳನ್ನು ಅಂದವಾಗಿ, ಸುಂದರವಾಗಿ, ಅಚ್ಚುಕಟ್ಟಾಗಿ ಮುದ್ರಿಸಿ, ಪ್ರಕಟಿಸುವ ಕಾರ್ಯದಲ್ಲಿ ಸಮಿತಿಯವರು ಮೊದಲಿನಿಂದಲೂ ಒಂದು ವೈವಿಧ್ಯತೆಯನ್ನು ತೋರಿಸುತ್ತ ಬಂದಿರುವರೆಂಬುದು ಇಲ್ಲಿಯವರೆಗೂ ಪ್ರಕಟವಾದ ಅವರ ಗ್ರಂಥಗಳ ಅವಲೋಕನೆಯಿಂದ ಕಂಡುಬರುವಂತಿದೆ. ಈ ದೃಷ್ಟಿಯ ಹಿನ್ನೆಲೆಯಿಂದೊಡಗೂಡಿ ಸಂಪಾದಕರು ಕೊಟ್ಟ ಶ್ರಮವನ್ನು ಸಹಿಸಿ, ಮೋಹಕವಾದ ಮುದ್ರಣದಿಂದಲೂ ಅದಕ್ಕೆ ತಕ್ಕ ವೈಕಟ್ಟಿನಿಂದಲೂ ಚಿತ್ತಾಕರ್ಷಕವಾಗುವಂತೆ ಈ ಗ್ರಂಥವನ್ನು ಸಿದ್ಧಪಡಿಸಿಕೊಟ್ಟ ಧಾರವಾಡ ತೋಂಟದಾರ್ಯ ಮುದ್ರಣಾಲಯದ ಕಾರ್ಯಕರ್ತೃಗಳಾದ ಶ್ರೀಯುತರಾದ ಶಿ. ಬ. ಹರಿಹರ ಮತ್ತು ಎಂ. ಜಿ. ವಿರೂಪಾಕ್ಷನ್ ಇವರಿಗೆ ಸಮಿತಿಯು ತನ್ನ ಧನ್ಯವಾದಗಳನ್ನು ಸಲ್ಲಿಸುತ್ತದೆ.

ತಾ. ೯-೫-೧೯೪೦ನೆಯ ಗುರುವಾರ ದಿವಸ, ಧಾರವಾಡದ ವೀರಶೈವ ತರುಣರ ಕೂಟದಿಂದ ಜರುಗಿಸಲ್ಪಟ್ಟ ಬಸವಜಯಂತ್ಯುತ್ಸವದ ಶುಭಸಮಯದಲ್ಲಿ, ಸಮಯೋಚಿತ ಸವಿಮಾತಿನಿಂದೊಡಗೂಡಿ ತಮ್ಮ ಅಮೃತಹಸ್ತದಿಂದ ಈ ಪುಸ್ತಕವನ್ನು ಪ್ರಸಿದ್ಧಿಸುವ ಕಾರ್ಯವನ್ನು ನೆರವೇರಿಸಿದ ನವಲಗುಂದ ಗವಿಮಠದ ಪ್ರಣವಸ್ವರೂಪಿ ಶ್ರೀಮನ್ನಿರಂಜನ ಬಸವಲಿಂಗ ಸ್ವಾಮಿಗಳಿಗೆ ಸಮಿತಿಯವರು ತಮ್ಮ ಹೃತ್ಪೂರ್ವಕವಾದ ಅಭಿನಂದನೆಗಳನ್ನು ಅರ್ಪಿಸುವುದಲ್ಲದೆ, ಈ ಸುಸಮಯವನ್ನು ಒದಗಿಸಿಕೊಟ್ಟ ವೀರಶೈವ ತರುಣರ ಕೂಟದ ಅಧಿಕಾರಿಗಳಿಗೂ ಆಭಾರಿಯಾಗಿದ್ದಾರೆ.

ಸಾಹಿತ್ಯಸಮಿತಿಯಿಂದ ಪ್ರಕಟವಾದ ಹಿಂದಿನ ಎರಡೂ ಗ್ರಂಥಗಳನ್ನು ಆದರದಿಂದ ಬರಮಾಡಿಕೊಂಡಂತೆ, ಇದಕ್ಕಾದರೂ ಕನ್ನಡಿಗರು ಪ್ರೇಮಾದರದ ಸ್ವಾಗತವನ್ನಿತ್ತು, ಸಮಿತಿಯ ಮುಂದಿನ ಪ್ರಕಟನೆಗಳಿಗೆ ನೆರವಾಗುವರೆಂದು ನೆರೆ ನಂಬಿದ್ದೇವೆ.

**ಧಾರವಾಡ — ತಾ. ೯-೫-೧೯೪೦**
**ಶಾಲಿವಾಹನ ಶಕೆ ೧೮೬೨,**
**ವೈಶಾಖ ಶು. ೩ (ಬಸವ ಜಯಂತಿ)**

**ಶಿ. ಶಿ. ಬಸವನಾಳ,**
**ಅಧ್ಯಕ್ಷ,**
**ಲಿಂ. ವಿ. ಸಂ. ಸಾಹಿತ್ಯ ಸಮಿತಿ**

## ಶಬರಶಂಕರವಿಳಾಸದ ಶುದ್ಧ ಪ್ರತಿಯನ್ನು ಸಿದ್ಧಪಡಿಸಲಿಕ್ಕೆ ಉಪಯೋಗಿಸಿದ ಮಾತೃಕೆಗಳು



| | ಸಂಕೇತ |
|---|---|
| **ತಾಳೆವೋಲೆಯ ಪ್ರತಿಗಳು :** | |
| (ಅ) ಶಿವಯೋಗಮಂದಿರದಿಂದ ಬಂದುವು : | |
| ೧. ೧೪೭ ನೆಯ ಸಂಖ್ಯೆಯ ಪ್ರತಿ | ಕ |
| ೨. ೮೦ ,, ,, | ಚ |
| ೩. ೧೩೨ ,, ,, | ತ |
| (ಆ) ಬೇರೆ ತಾಳೆವೋಲೆಯ ಪ್ರತಿಗಳು : | |
| ೧ ನೆಯದು | ಗ |
| ೨ ನೆಯದು | ಜ |
| **ಕೈಬರೆಹದ ಕಾಗದದ ಪ್ರತಿ :** (ಹುಳಹತ್ತಿ ಬಹಳ ಖಿಲವಾಗಿದೆ) | ವ |
| **ಮುದ್ರಿತ ಪ್ರತಿಗಳು :** | |
| ೧ ಶ್ರೀ ಪಿ. ಆರ್. ಕರಿಬಸವಶಾಸ್ತ್ರಿಗಳಿಂದ ಸಂಪಾದಿತವಾದ ಪ್ರತಿ (೧೯೧೩) | ಯ |
| ೨ ಧಾರವಾಡದ ಸಗರ ಇವರಿಂದ (೧೮೯೨) ಮುದ್ರಿತವಾದ ಪ್ರತಿ | ರ |
| ೩ ಬಳ್ಳಾರಿಯ ಶಾರದಾ ಬುಕ್ ಡಿಪೋ ಇವರಿಂದ ಪ್ರಕಟವಾದ ಪ್ರತಿ (ಸಟೀಕ) | ಲ |
| ೪ ಬಳ್ಳಾರಿಯ ಕರ್ಣಾಟಕ ಬುಕ್ ಡಿಪೋ ಇವರಿಂದ (೧೯೧೪) ಪ್ರಕಟವಾದ ಪ್ರತಿ (ಸಟೀಕ) | ಸ |

**ಸೂಚನೆ :** ಇನ್ನೆರಡು ವ್ಯಾಖ್ಯಾನವುಳ್ಳ ಪ್ರತಿಗಳನ್ನೂ ಅಲ್ಲಲ್ಲಿ ಉಪಯೋಗಿಸಿಕೊಳ್ಳಲಾಗಿದೆ. ಆದರೆ ಇವು ಶುದ್ಧಪ್ರತಿಗಳಲ್ಲವಾದುದರಿಂದ ಇವುಗಳೊಳಗಿನ ಪಾಠಾಂತರಗಳನ್ನು ಕೊಟ್ಟಿಲ್ಲ.



# ವಿಷಯಾನುಕ್ರಮಣಿಕೆ





‡ ಈ ಗುರುತು ಇದ್ದ ಚಿತ್ರಗಳು ( Copyright, Archaeological Survey of India ) ‘ ಭಾರತ ಪ್ರಾಚ್ಯ ಕೋಶಾಲಯ ’ ದವರ ಕೃಪೆಯಿಂದ ದೊರೆತಿವೆ. ಅವನ್ನು ಉಪಯೋಗಿಸಿಕೊಳ್ಳಲು ಅನುಮತಿ ಕೊಟ್ಟುದಕ್ಕಾಗಿ ನಾವು ಅವರಿಗೆ ಉಪಕೃತರಾಗಿದ್ದೇವೆ.

— ಸಂ.

# ಪೀಠಿಕೆ

To him no author was unknown
Yet what he wrote was all his own
—*Sir John Denham*

## (೧)

'ಕಿರಾತರುದ್ರಲೀಲೆ' ಅಥವಾ 'ಶಬರಶಂಕರವಿಳಾಸ' ಎಂಬ ಕನ್ನಡ ಚಂಪೂ ಕಾವ್ಯವನ್ನು ರಚಿಸಿದ ಕವಿ ಶ್ರೀಷಡಕ್ಷರದೇವ[೧]ನೆಂಬವನು. ಈತನ ಜನ್ಮಸ್ಥಳವು ಮೈಸೂರ ಪ್ರಾಂತದೊಳಗಿನ ದನುಗೂರು ಎಂಬುದು. ಇದು ಈಗ ಮೈಸೂರು ಜಿಲ್ಲೆಯ ಮಳವಳ್ಳಿ ತಾಲೂಕಿಗೆ ಸೇರಿರುವುದು. ಈತನು ತನ್ನ ತಾಯಿ-ತಂದೆಗಳ ಹೆಸರನ್ನು ಹೇಳದೆ ಗುರುಪರಂಪರೆಯನ್ನು ಮಾತ್ರ:

ಶಿವವಕ್ಷೋರೇಣುಪ್ರಭವನಾದ ರೇಣುಕಾಚಾರ್ಯ, ಆತನ ಪುತ್ರ ನಿಗಮಾಗಮಸಾಗರನಾದ ರುದ್ರಮುನೀಂದ್ರ, ಆತನ ವಂಶೋದ್ಭವನಾದ ಉದ್ದಾನಯೋಗಿ, ಆತನ ಶಿಷ್ಯ ಅನ್ನದಾನೀಶ್ವರ, ಆತನ ಶಿಷ್ಯ ರೇವಣಸಿದ್ಧ, ಆತನ ಶಿಷ್ಯ ಚಿಕವೀರದೇಶಿಕ, ಆತನ ಶಿಷ್ಯ ತಾನು —

ಎಂದು[೨] ಹೇಳಿಕೊಂಡಿರುವನು. ಇದರಿಂದ ಈತನು ವೀರಶೈವ ಪೂರ್ವಾಚಾರ್ಯರಲ್ಲಿ ಸುಪ್ರಸಿದ್ಧರಾದ ರೇಣುಕಾಚಾರ್ಯರ ಗುರುಸಂಪ್ರದಾಯಕ್ಕೆ ಸೇರಿದವನೆಂದೂ ಚಿಕವೀರದೇಶಿಕೇಂದ್ರರ ಕರಸಂಜಾತ (=ಶಿಷ್ಯ) ನೆಂದು ತಿಳಿದು ಬರುವುದು; ಅಲ್ಲದೆ ಈತನು ಬ್ರಹ್ಮಚಾರಿಯಾಗಿ ಗುರುಸ್ಥಲದ ಮಠದ ಪಟ್ಟಾಧಿಕಾರಿಯಾಗಿದ್ದನೆಂದೂ[೩] ಊಹಿಸಬಹುದು. ಷಡಕ್ಷರದೇವನು ದನುಗೂರನ್ನು ಬಿಟ್ಟು ಎಳಂದೂರು ಎಂಬ ಇನ್ನೊಂದು ಗ್ರಾಮದಲ್ಲಿಯ ಮಠಕ್ಕೆ ಸ್ವಾಮಿಯಾಗಿದ್ದುಕೊಂಡು ಅಲ್ಲಿಯೆ ಲಿಂಗೈಕ್ಯನಾದುದರಿಂದ ಈತನು ಎಳಂದೂರ ಷಡಕ್ಷರದೇವನೆಂಬ ಹೆಸರಿನಿಂದಲೆ

೧ ಕೈಬರೆಹದ ಪ್ರತಿಗಳಲ್ಲಿ ' ಷಡಕ್ಷರಿದೇವ ' ಯೆಂದೂ ಸಿಕ್ಕುತ್ತದೆ. ೨ ರಾಜಶೇಖರವಿಳಾಸ: ಆ. ೧, ಪದ್ಯ ೫೩ರಿಂದ ೬೮. ೩ ರಾಜಶೇಖರವಿಳಾಸ: ಆ. ೧, ಪದ್ಯ ೭೦, ೭೨, ೮೮, ಮೊದಲಾದುವುಗಳು ಈ ಊಹೆಗೆ ಸಾಧಕಗಳಾಗಿವೆ. ಈತನು ವೀರಶೈವನೆನ್ನಲು ರಾಜಶೇಖರವಿಳಾಸ: ಆ. ೧, ಪ. ೧೭, ೧೮, ೬೭, ೬೮ ಮುಂತಾದುವು ಆಧಾರವಾಗಿರುವುವು.

ಪ್ರಸಿದ್ಧನಾಗಿರುವನು. ದನುಗೂರನ್ನು ಬಿಟ್ಟು ಎಳಂದೂರಿಗೆ ಹೋಗಲಿಕ್ಕೆ ಈತನಿಗೆ ಏನು ಕಾರಣವಾಯಿತೆಂಬುದು ನಿಶ್ಚಿತವಾಗಿ ತಿಳಿಯುವಂತಿಲ್ಲ. ದೇವಚಂದ್ರನು (೧೮೩೮ರಲ್ಲಿ ರಚಿಸಿದ) ತನ್ನ ರಾಜಾವಳೀಕಥೆಯಲ್ಲಿ :

'ಷಡಕ್ಷರಿ ಚಿಕದೇವರಾಜನ ತಾಯಿಯಾದ ಎಳವಂದೂರ ಅಮೃತಾಂಬೆಯ ತವರು ಮನೆಗೆ ಗುರುವಾದ ಆರಾಧ್ಯರ ಪುತ್ರನು. ಅಂತಃಪುರಜನಪ್ರೇರಣೆಯಿಂ ಇವನಂ ಬರಿಸೆ ಈತಂ ಲೀಲಾವತಿ, ಕಾದಂಬರಿ ಮೊದಲಾದ ಅನೇಕವಸ್ತುಕಕಾವ್ಯದೊಳ್ ನಿಪುಣನೆನಿಸಿ ಕವಿಶೇಖರನಾದುದಱಿಂ ರಾಜಶೇಖರಮೆಂಬ ಪೊಸತೊಂದು ಕೃತಿಯಂ ಮಾಡಿ ಮೆಚ್ಚಿಸಿ ಕೆಲಕೆಲವು ಮಠಂಗಳಂ ಮಾನ್ಯಮಂ ಬಿಡಿಸಿ ಷಡ್ಭುಸವಾದಮೆಂದು ಅದ್ಭುತಂಗಳಂ ತೋಱಿಸಿದಂ.'

ಎಂದು[೧] ಬರೆದಿರುವನು. ಆದರೆ ಮೈಸೂರ ಮಹಾರಾಜಾ ಕಾಲೇಜಿನ ಕನ್ನಡ ಪಂಡಿತರಾಗಿದ್ದ ಪಿ. ಆರ್. ಕರಿಬಸವಶಾಸ್ತ್ರಿಗಳವರು ರಾಜಶೇಖರವಿಳಾಸಕ್ಕೆ ಬರೆದ ತಮ್ಮ ಪೀಠಿಕೆಯಲ್ಲಿ :

'ದನುಗೂರು ಮಠದ ಸ್ವಾಮಿಯ ಶಿಷ್ಯನಾದ ಷಡಕ್ಷರದೇವನು ಎಳಂದೂರಲ್ಲಿ ವಾಸಿಸುವುದಕ್ಕೆ ಕಾರಣವೇನಂದರೆ :— ಆ ಕಾಲದಲ್ಲಿ ಹದಿನಾಡೆಂಬ ದೇಶವನ್ನು ಪಾಲನಮಾಡುತ್ತಿದ್ದ ಮುದ್ದುರಾಜನು ತನ್ನ ಹೆಂಡತಿಯ ತೌರುಮನೆಯ ಗುರುವಾಗಿದ್ದ ಷಡಕ್ಷರದೇವನನ್ನು ಕರೆಸಿ ತನ್ನ ಹೆಂಡತಿಯ ತೌರೂರಾದ ಎಳಂದೂರಲ್ಲಿಯೇ ಒಂದು ಮಠವನ್ನು ಕಟ್ಟಿಸಿ ಅನುಕೂಲತೆ ಪಡಿಸಿದ್ದನು.'

ಎಂದು[೨] ಬರೆದಿರುವರು. ಕೆಲಮಟ್ಟಿಗೆ ಭಿನ್ನವಾದ ಈ ಎರಡು ಲೇಖನಗಳ ಮೇಲಿಂದ ಬಹುತರವಾಗಿ ಸಮಂಜಸವೆನ್ನಬಹುದಾದ ಒಂದೆರಡು ಊಹೆಗಳನ್ನು ನಾವು ಮಾಡಬಹುದು: (೧) ಷಡಕ್ಷರದೇವನು ಮೈಸೂರ ಚಿಕದೇವರಾಯನ ತಾಯಿಯಾದ ಅಮೃತಾಂಬೆಯ ಇಲ್ಲವೆ ಹದಿನಾಡ ಮುದ್ದುರಾಜನ ಹೆಂಡತಿಯ ತವರುಮನೆಯ ಗುರುವಂಶಕ್ಕೆ ಸೇರಿದವನೆನ್ನಲು ಅಡ್ಡಿಯಿಲ್ಲ. ಒಂದು ವೇಳೆ ಅಮೃತಾಂಬೆಯ ತವರುಮನೆಯೂ ಮುದ್ದುರಾಜನ ಹೆಂಡತಿಯ ತವರುಮನೆಯೂ ಒಂದೇ ಆಗಿದ್ದರೂ ಆಗಿರಬಹುದು; ಇಲ್ಲವೆ ಒಂದೇ ಗುರುವಂಶದ ಶಿಷ್ಯವರ್ಗಕ್ಕೆ ಸೇರಿರಬಹುದು. (೨) ರಾಣಿವಾಸದ ಪ್ರೇರಣೆಯಿಂದ ಮೈಸೂರ ಅರಸನಾಗಲಿ ಹದಿನಾಡ ಮುದ್ದುರಾಜನಾಗಲಿ ಷಡಕ್ಷರದೇವನನ್ನು ಎಳಂದೂರಿಗೆ ಕರೆಸಿಕೊಂಡು ಅಲ್ಲಿ ಆತನಿಗಾಗಿ ಮಠ-ಮಾನ್ಯಗಳನ್ನು ಕಟ್ಟಿಸಿಕೊಟ್ಟಿರಬೇಕು. ಇಬ್ಬರೂ ರಾಜರು ಬೇರೆ ಬೇರೆಯಾಗಿಯೆ ಮಠ-ಮಾನ್ಯಗಳನ್ನು ಮಾಡಿಸಿ ಕೊಟ್ಟಿರಬಹುದು. ಈತನು 'ಬಾಲೇಂದುಪುರವರಾಧೀಶ ಮುದ್ದುಭೂಮಿಪನ ಕುಲಗುರು'ವಾಗಿದ್ದನೆಂಬುದು ಈತನಿಂದ ರಚಿತವಾದ 'ಶಿವಾಧಿಕ್ಯರತ್ನಾವಳಿ' 'ಭಕ್ತಾಧಿಕ್ಯರತ್ನಾವಳಿ' ಎಂಬ ಗ್ರಂಥಗಳ ಕೊನೆಯ ಗದ್ಯದಿಂದ ತಿಳಿದು ಬರುತ್ತದೆ.

೧ ಕರ್ಣಾಟಕ ಕವಿಚರಿತೆ : ಭಾಗ ೨, ಪುಟ 442. ೨ ಪುಟ ; (೧೯೩೦ನೆಯ ಸಂಸ್ಕರಣ)

## ಮಹಾಕವಿ ಷಡಕ್ಷರಿದೇವರಿಗೆ ಸಂಬಂಧಪಟ್ಟ ಚಿತ್ರಗಳು : ೧

(ಬೆಂಗಳೂರಿನ ಶರಣ ಸಾಹಿತ್ಯ ಪತ್ರಿಕೆಯ ಸಂಪಾದಕರ ಕೃಪೆಯಿಂದ)



ಷಡಕ್ಷರಿಕವಿಯ ಗುರುಗಳ ಸಮಾಧಿ, ದನುಗೂರು

## ಮಹಾಕವಿ ಷಡಕ್ಷರಿದೇವರಿಗೆ ಸಂಬಂಧಪಟ್ಟ ಚಿತ್ರಗಳು : ೧

(ಬೆಂಗಳೂರಿನ ಶರಣ ಸಾಹಿತ್ಯ ಪತ್ರಿಕೆಯ ಸಂಪಾದಕರ ಕೃಪೆಯಿಂದ)



ಷಡಕ್ಷರಿಕವಿಯ ತಪೋಭೂಮಿ, ದನುಗೂರು

ಷಡಕ್ಷರದೇವನು ಜನ್ಮವೆತ್ತಿದ ದಿನವಾಗಲಿ ಲಿಂಗೈಕ್ಯನಾದ ದಿನವಾಗಲಿ ಗೊತ್ತಾಗುವಂತಿಲ್ಲ. ಆದರೆ ಈತನು ರಾಜಶೇಖರವಿಳಾಸವನ್ನು ಕ್ರಿ. ಶ. ೧೬೫೪-೫೫ ರಲ್ಲಿಯೂ[೧] ವೃಷಭೇಂದ್ರವಿಜಯವನ್ನು ಕ್ರಿ. ಶ. ೧೬೭೭ರಲ್ಲಿಯೂ[೨] ರಚಿಸಿದನೆಂದು ಆಯಾ ಗ್ರಂಥಗಳಿಂದಲೆ ತಿಳಿದು ಬರುವುದರಿಂದ ಈತನು ಬಾಳಿದ ಕಾಲವು ಕ್ರಿ. ಶ. ೧೭ನೆಯ ಶತಮಾನದ ಉತ್ತರಾರ್ಧವೆಂದು ಸ್ಥೂಲಮಾನವಾಗಿ ಹೇಳಬಹುದು. ಕವಿ ರಾಜಶೇಖರವಿಳಾಸವನ್ನು ರಚಿಸುತ್ತಿದ್ದ ಕಾಲದಲ್ಲಿ ಹದಿನಾಡು ಪ್ರಾಂತವನ್ನು ಮುದ್ದುರಾಜನೆಂಬವನು ಆಳುತ್ತಿದ್ದನೆಂದು ಎಳಂದೂರ ಗೌರೀಶ್ವರಾಲಯದ ಶಾಸನದಿಂದ ತಿಳಿದು ಬರುವುದು.[೩] ಕವಿ ವೃಷಭೇಂದ್ರವಿಜಯವನ್ನು ರಚಿಸಿರಬಹುದಾದ ಕಾಲದಲ್ಲಿ ಚಿಕದೇವರಾಯನು (ಕ್ರಿ. ಶ. ೧೬೭೨-೧೭೦೪) ಮೈಸೂರು ಪ್ರಾಂತವನ್ನು ಆಳತೊಡಗಿ ಐದು ವರ್ಷಗಳು ಸಂದಿದ್ದುವು. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಚಿಕದೇವರಾಯನ ಕಾಲವು ಸುವರ್ಣಾಕ್ಷರಗಳಿಂದ ಬರೆದಿಡಲು ತಕ್ಕುದಾಗಿದೆ. ಈ ರಾಜನು ಸ್ವತಃ ಸಾಹಿತ್ಯ-ಸಂಗೀತ-ಕಲಾಭಿಜ್ಞನಾಗಿದ್ದನಲ್ಲದೆ ಒಳ್ಳೆಯ ಸಾಹಿತ್ಯಪೋಷಕನೂ ಆಗಿದ್ದನು. ಈತನ ಆಳಿಕೆಯ ಅವಧಿಯಲ್ಲಿ ಮೈಸೂರ ಪ್ರಾಂತದಲ್ಲಿ ಪ್ರಸಿದ್ಧರಾದ ಅನೇಕ ಕವಿಗಳೂ ಪಂಡಿತರೂ ಈತನ ಪ್ರೋತ್ಸಾಹದಿಂದಲೆ ಬೆಳಕಿಗೆ ಬಂದರೆಂಬುದು ಆ ಕಾಲದ ಸಾಹಿತ್ಯೇತಿಹಾಸದಿಂದ ಗೊತ್ತಾಗುವುದು. ವಿಶಾಲಾಕ್ಷ, ತಿರುಮಲಾರ್ಯ, ಚಿಕುಪಾಧ್ಯಾಯ ಮುಂತಾದ ಸಾಹಿತ್ಯಕೋವಿದರೂ ಕವಿವರ್ಯರೂ ಈತನ ಆಸ್ಥಾನದಲ್ಲಿಯೆ ಇದ್ದುಕೊಂಡು ಈತನ ಪ್ರತ್ಯಕ್ಷ ಆಶ್ರಯದಿಂದಲೆ ಬಾಳಿ ಬದುಕಿದರು. ವಿಶಾಲಕ್ಷನೂ ಆತನ ಹಿಂದೆ ತಿರುಮಲಾರ್ಯನೂ ಚಿಕದೇವರಾಯನ ಮಂತ್ರಿಗಳಾಗಿ ರಾಜ್ಯಶಾಸನದಲ್ಲಿಯೂ ಈತನಿಗೆ ನೆರವಾಗಿದ್ದರು. ಸಾಹಿತ್ಯಚೂತವನವನ್ನು ಚೈತ್ರದಂತೆ ಪೋಷಿಸಲು ಸದಾ ಉತ್ಸುಕನಾಗಿದ್ದ ಈ ರಾಜನಿಗೆ ಕನ್ನಡ-ಸಂಸ್ಕೃತಗಳೆರಡಲ್ಲಿಯೂ ಮಹಾಕಾವ್ಯ

೧ ರಾಜಶೇಖರವಿಳಾಸ: ಆ ೧೪, ಪ. ೧೮೪. 'ಜಯ' ವರ್ಷವು ಕ್ರಿ. ೧೬೫೪ ರಲ್ಲಿ ಆರಂಭವಾಗುತ್ತದೆ. ಆ ವರ್ಷದ ಮಾಘ ಶುದ್ಧ ತೃತೀಯೆ ಕ್ರಿ. ಶ. ೧೬೫೫ ಜಾನ್ಯುವರಿ ೩೦ ನೆಯ ದಿನ ಬರುತ್ತದೆ. ಅದು ಮಂಗಳವಾರವಾಗುತ್ತದೆ. ಕವಿಯು ಬುಧವಾರ ಎಂದು ಹೇಳಿದ್ದಾನೆ. ಆದರೆ ಅದರ ಹಿಂದಿನ ವಿಜಯ ಸಂವತ್ಸರದಲ್ಲಿ ಮಾಘ ಶುದ್ಧ ತೃತೀಯೆ ಬುಧವಾರ ಬರುತ್ತದೆ. ಕವಿ ಹೇಳಿದ 'ರತ್ನ' ವೆಂಬುದು 'ಪಂಚ' ಅಥವಾ 'ನವ' ಎಂಬ ಸಂಖ್ಯೆಗಳ ಸಂಕೇತವೆಂದು ತಿಳಿದು ಇಲ್ಲಿ 'ಪಂಚ' ಎಂಬುದನ್ನು ತೆಗೆದುಕೊಂಡರೆ ಆಗ ಶಾಲಿವಾಹನ ಶ. ೧೫೫೫ ಎಂದು ಆಗುವುದರಿಂದ ಸಂವತ್ಸರವು 'ವಿಜಯ' ವಾಗುತ್ತದೆ; ತಿಥಿ, ವಾರಗಳು ಸರಿಹೋಗುತ್ತವೆ. 'ಜಯ' ಸಂವತ್ಸರವೆಂದು ತೆಗೆದುಕೊಂಡರೆ 'ರತ್ನ' ಕ್ಕೆ 'ಆರು' ಎಂದು ಅರ್ಥಮಾಡಬೇಕಾಗುತ್ತದೆ; ವಾರದ ವ್ಯತ್ಯಾಸವೂ ಆಗುವುದು. ಆರರ ಪರ್ಯಾಯ 'ರತ್ನ' ವೆಂದು ರೂಢಿಯಿಲ್ಲ. ೨ ವೃಷಭೇಂದ್ರವಿಜಯ: ಆ ೪೨, ಪ. ೧೧೨. ಇಲ್ಲಿಯೂ ವಾರ ತಪ್ಪುತ್ತದೆ. ೩ ಈ ಶಾಸನದ ಕೆಲವು ಪಂಕ್ತಿಗಳು ಈ ವಿಷಯಕ್ಕೆ ಸಂಬಂಧಪಟ್ಟುವು ಪಿ. ಆರ್. ಕರಿಬಸವಶಾಸ್ತ್ರಿಗಳ ಪೀಠಿಕೆ ಪು. iii ರಲ್ಲಿ ಉದಾಹೃತವಾಗಿವೆ.

ಗಳನ್ನು ರಚಿಸಿ ಅದಾಗಲೆ ಹೆಸರುವಡೆದಿದ್ದ ಷಡಕ್ಷರದೇವನು ಸುಪರಿಚಿತನಾಗಿದ್ದ ನೆನ್ನಲು ಸಂದೇಹವಿಲ್ಲ. ದೇವಕವಿ ತನ್ನ ರಾಜಾವಳೀ ಕಥೆಯಲ್ಲಿ ಆ ಕಾಲದ ನಾಮಾಂಕಿತ ಸಾಹಿತಿಗಳನ್ನು ಕುರಿತು :

'ಚಿಕದೇವರಾಯಂ ಕೋವಿದಶಿಖಾಮಣಿಯೆನಿಸಿದಂ; ತಿರುಮಲಾರ್ಯಂ ವಿದ್ಯಾವಿಶಾರದನೆನಿಸಿದಂ; ವಿಶಾಲಾಕ್ಷಂ ಸಾಹಿತ್ಯಭಾರತಿಯೆನಿಸಿದಂ; ಷಡಕ್ಷರಿ ಕವಿಶೇಖರನೆನಿಸಿದಂ'

ಎಂದು[೧] ಉಲ್ಲೇಖಿಸಿರುವುದನ್ನು ವಿವೇಚಿಸಿದರೆ ಇವರೆಲ್ಲರು ಒಬ್ಬರನ್ನೊಬ್ಬರು ಬಲ್ಲವರಾಗಿದ್ದರೆಂಬುದಷ್ಟೇ ಅಲ್ಲ, ಒಬ್ಬೊಬ್ಬರೂ ಒಂದೊಂದು ಗುಣದೊದವಿನಿಂದ ನೆಗಳ್ತೆವಡೆದಿದ್ದರೆಂಬುದೂ ನಮ್ಮ ಅರಿತಕ್ಕೆ ಬರುವುದು. ಮೇಲಾಗಿ ಆ ಕಾಲದ ಕನ್ನಡ ಕವಿಗಳ ಗೋಷ್ಠಿಯಲ್ಲಿ ಅಗ್ರಪೂಜೆಗೆ ಸಲ್ಲುವವನು ಷಡಕ್ಷರದೇವನೇ ಆಗಿದ್ದನೆಂಬುದೂ ಇದರಿಂದ ಸ್ಪಷ್ಟವಾಗಿ ಧ್ವನಿತವಾಗುವುದು.

ಈ ಸಂದರ್ಭದಲ್ಲಿ ಒಂದು ಪ್ರಶ್ನೆ ತಲೆಯೆತ್ತುವುದು. ಅದಾವುದೆಂದರೆ—ಷಡಕ್ಷರದೇವನು ಚಿಕದೇವರಾಯನ ಇಲ್ಲವೆ ಇನ್ನಾವನಾದರೂ ರಾಜನ ಆಸ್ಥಾನ ಕವಿಯಾಗಿ ಆತನ ಆಶ್ರಯದಲ್ಲಿ ಜೀವಿಸಿಕೊಂಡಿದ್ದನೆ? ಇದಕ್ಕೆ ಉತ್ತರರೂಪವಾಗಿ ಈ ಕವಿಯು ಯಾವ ರಾಜನ ಹಂಗಿನೊಳಗೂ ಇದ್ದಿಲ್ಲವೆಂದು ಸಂಕ್ಷೇಪವಾಗಿ ಹೇಳಬಹುದಾದರೂ, ಈ ಊಹೆಗೆ ಆಧಾರಗಳಾದ ಕಾರಣಗಳನ್ನು ಮಾತ್ರ ವಿಶದವಾಗಿಯೇ ಹೇಳಬೇಕಾಗುವುದು.

ಕವಿತಾಶಕ್ತಿಯು ಅಮೋಘವಾದುದು; ಅದರಿಂದಲೆ ಕವಿಗಳು 'ಅಘಟಿತಘಟನಾನೂತನಬ್ರಹ್ಮ'ರೆನಿಸಿಕೊಳ್ಳುವರು. ಪ್ರಭುಶಕ್ತಿ–ಸನ್ನಾಹಗಳಿಂದ ಕೂಡಿದ ಅರಸರಿಗೂ ಅಸಾಧ್ಯವಾದ ಕಾರ್ಯವನ್ನು ಇವರು ನಿರಾಯಾಸವಾಗಿ ಎಸಗುವರು. ತಮ್ಮ ಈ ಅಮಿತಶಕ್ತಿಯ ಅರಿವು ಕವಿಗಳಿಗೂ ಉಂಟು. ಶೇಕ್ಸ್‌ಪಿಯರ್ ಎಂಬ ಆಂಗ್ಲ ಮಹಾಕವಿಯು :

Not marble, nor the guilded monuments
Of princes, shall outlive this powerful rime.

ಎಂಬ[೨] ಪಂಕ್ತಿಗಳಲ್ಲಿ ರಾಜರು ಕಟ್ಟಬಹುದಾದ ಸ್ಮಾರಕ ಕಟ್ಟಡಗಳಿಂದಲೂ ಹೆಚ್ಚಾಗಿ ತನ್ನ ಕವಿತೆಯೆ ಚಿರಜೀವಿಯಾಗುವುದೆಂದು ಹೆಮ್ಮೆಪಟ್ಟಿರುವನು. ಅಷ್ಟೇ ಏಕೆ? ಒಂದು ಬಗೆಯಿಂದ ರಾಜರಿಗೂ ಕೂಡ ಅಮರತ್ವವನ್ನು ದಯಪಾಲಿಸುವ ಶಕ್ತಿ ಕವಿಗಳಲ್ಲಿರುವುದೆಂದು ಸಂಸ್ಕೃತ ಮಹಾಕವಿಯಾದ ದಂಡಿಯು :

ಆದಿರಾಜಯಶೋಬಿಂಬಮಾದರ್ಶಂ ಪ್ರಾಪ್ಯ ವಾಙ್ಮಯಂ
ತೇಷಾಮಸನ್ನಿಧಾನೇಽಪಿ ನ ಸ್ವಯಂ ಪಶ್ಯ ನಶ್ಯತಿ

೧ ಕರ್ಣಾಟಕ ಕವಿಚರಿತೆ ಭಾಗ ೨, ಪುಟ 462 ೨ *Sonnet LV*

ಎಂಬ ಶ್ಲೋಕದಲ್ಲಿ ಸೂಚಿಸಿರುವನು.೧ ಆದುದರಿಂದ ಮಹಾಕವಿಗಳಾದವರನ್ನು ತಮ್ಮ ಆಸ್ಥಾನದಲ್ಲಿಟ್ಟುಕೊಂಡು ಸಲಹುವುದು 'ಗುಣಗಳ್ಳ'ರಾದ ರಾಜರಿಗೆ ಸ್ವಾಭಾವಿಕವಾದುದು. ಅದಕ್ಕಾಗಿ ಅವರಿಗೆ ಕೃತಜ್ಞರಾಗುವುದು ಕವಿಗಳಿಗೂ ಸಹಜವಾದುದು. ಅಲ್ಲದೆ ತಾವು ನೆಗಳ್ದ ಕೃತಿಗಳಲ್ಲಿ ಉಚಿತ ಕಂಡ ಎಡೆಗಳಲ್ಲಿ ತಮ್ಮ ಪೋಷಕರನ್ನು ಕೊಂಡಾಡುವುದು ಲೌಕಿಕರೀತ್ಯಾ ಯುಕ್ತವೂ ಅಹುದು. ಇಂತಹ ಉದಾಹರಣೆಗಳನ್ನು ಅನೇಕ ಭಾಷೆಗಳ ಸಾಹಿತ್ಯ ಚರಿತ್ರೆಗಳಲ್ಲಿ ಕಾಣಬಹುದು. ಕನ್ನಡ ಸಾಹಿತ್ಯವು ಈ ಸಾಮಾನ್ಯ ನಿಯಮಕ್ಕೆ ಅಪವಾದವಲ್ಲ. ಆದರೆ ಕೆಲ ಕನ್ನಡ ಕವಿಗಳು ತಮ್ಮ ಪೋಷಕರಿಗಾಗಿ ತಮಗಿದ್ದ ಕೃತಜ್ಞತೆಯನ್ನು ಬಿತ್ತರಿಸುವ ರೀತಿಯಲ್ಲಿ ಮಿತಿಮೀರಿದ್ದಾರೆ. ಆದಿಕವಿ ಪಂಪನು ವಿಕ್ರಮಾರ್ಜುನವಿಜಯದಲ್ಲಿ ತನ್ನ ಪೋಷಕನಾದ ಅರಿಕೇಸರಿಯನ್ನು ಗುಣಾರ್ಣವನಾದ ಅರ್ಜುನನೊಡನೆ 'ತಗುಳ್ಚಿ ಪೇಳ್ದು'ದೂ ಮಹಾಕವಿ ರನ್ನನು ಸಾಹಸಭೀಮವಿಜಯದಲ್ಲಿ ತನ್ನ ಆಶ್ರಯದಾತನಾದ ಸತ್ಯಾಶ್ರಯನನ್ನು ಭೀಮನೊಡನೆ ಹೋಲಿಸಿದುದೂ—

'To take liberties with history in the name of art is a privilege of the writers of fiction, but only the glamour of a great name can hypnotise us into perceiving aestheticism in abject adulation'.

ಎಂಬಂತೆ— ಅದೊಂದು ದೋಷವೇ ಆಗಿದ್ದರೂ ಮಹಾಕವಿಗಳಾದ ಇವರ ಗುಣಸನ್ನಿಪಾತದಲ್ಲಿ ಆ ದೋಷವು ನಿಮಜ್ಜನವಾಗಿ ಹೋಯಿತು. ಆದರೆ ಇವರು ದಕ್ಕಿಸಿಕೊಂಡರೆಂದು ಮತ್ತಿನ ಕಿರುಕುಳ ಕವಿಗಳು ಇವರ ಅನುಕರಣ ಮಾಡತೊಡಗಿ ಇಲ್ಲದ ಸಲ್ಲದ ಗುಣಗಳನ್ನು ತಮ್ಮ ಪೋಷಕರಲ್ಲಿ ಆರೋಪಿಸಿ ಸಾಹಿತ್ಯವನ್ನೇ ಹಸಗೆಡಿಸಿದರೆಂದು ತೋರುತ್ತದೆ. ಕಾಲಾತಿಕ್ರಮದಿಂದ ಇದೊಂದು ಅಸಹ್ಯ ಪರಂಪರೆಯಾಗಿ ಬಳೆದು ಬಂದುದರಿಂದಲೇ ರತ್ನಾಕರವರ್ಣಿಯೆಂಬ ಕವಿ೨ :

ಹೊಲ್ಲದ ನೃಪರಿಗಿಲ್ಲದ ಗುಣಗಳಿಟ್ಟು
ಸೊಲ್ಲಿಪ ಕೃತಿಮಾರ್ಗವಲ್ಲ

ವೆಂದು ಅದನ್ನು ಸ್ಪಷ್ಟವಾಗಿ ಖಂಡಿಸಿ,

ಉಳ್ಳ ಸದ್ಗುಣಗಳ ಕಡೆಗಂಡು ಬಣ್ಣಿಸ
ಬಲ್ಲನಾವನಾ ನೃಪನ

ಎಂದು ತನ್ನ ಕೃತಿನಾಯಕನನ್ನು ಪ್ರಶಂಸಿಸಿದ್ದಾನೆ. ಅಂತೂ ಸದ್ಗುಣಗಳುಳ್ಳವನಾಗಿದ್ದರೆ ರಾಜನನ್ನು ಹೊಗಳುವುದು ಸರಿಯಾದುದೆಂದೇ ರತ್ನಾಕರವರ್ಣಿಯ ಅಭಿಪ್ರಾಯ.

ಷಡಕ್ಷರದೇವನಾದರೊ ತನ್ನ ಆವ ಕೃತಿಯಲ್ಲಿಯೂ ಆವ ರಾಜನನ್ನೂ ಬಣ್ಣಿಸಲಿಲ್ಲ. ಆವನಾದರೊಬ್ಬ ರಾಜನ ಪ್ರತ್ಯಕ್ಷ ಆಶ್ರಯದಲ್ಲಿ ಈತನು ಇದ್ದುದೇ

೧ ಕಾವ್ಯಾದರ್ಶ: ಪರಿಚ್ಛೇದ ೧, ಪ. ೫. ೨ ಭರತೇಶವೈಭವ: ಸಂಧಿ ೧, ಪ. ೨೨.

ಆಗಿದ್ದರೆ ಅವನನ್ನು ಹೆಸರಿಸುವುದರಲ್ಲಿ ಹಿಂದೆಗೆಯುತ್ತಿರಲಿಲ್ಲ. ಅಲ್ಲದೆ ಕವಿಯು ತನ್ನ ಕವಿತಾಸಾಮರ್ಥ್ಯದ ಬಗೆಯೆಯೂ ತನ್ನ ಕಾವ್ಯಧ್ಯೇಯದ ಬಗೆಯೆಯೂ ಉದಾತ್ತ ಕಲ್ಪನೆಗಳನ್ನು ಮಾಡಿಕೊಂಡಿದ್ದನು. ತಾನೇ ವರ್ಣಿಸಿದಂತೆ[೧]

ಬರಿಬರಿದಂತದಂ ತೊಡೆದು ತೊಟ್ಟನೆ ನಿಟ್ಟಿಸಿ ಮೆಲ್ಲನೊಂದುಮಂ
ಸರಸಪದಾರ್ಥಮಂ ತಡಿಕಿ ಕಾಣದೆ ಕಳ್ದು ಪರೋಕ್ತಿಯುಕ್ತಿಯಂ
ವಿರಚಿಸುತಂತುಮಿಂತುಮಳಿಗಬ್ಬಮಂ —

ಆಗಿಸುವ ಅಳಿಗವಿಗಳ ಮಾಲಿಕೆಗೆ ತಾನು ಸೇರಿದವನಲ್ಲವೆಂಬ ಅಭಿಮಾನವೂ, 'ಆಲೋಕಿತಕಾವ್ಯಬೃಂದದೊಳಗಿಲ್ಲದ ಮಂಜುಳಯುಕ್ತಿಪುಂಜ '[೨] ದಿಂದ ತನ್ನ ಕೃತಿಯನ್ನು ಭಾರತಿಗೆ ನವಸೀಮಂತರತ್ನವಾಗುವಂತೆ ಮಾಡಬಲ್ಲನೆಂಬ ಆತ್ಮವಿಶ್ವಾಸವೂ ಷಡಕ್ಷರದೇವನಲ್ಲಿ ನೆಲೆಗೊಂಡಿದ್ದುವು. ಈತನಿಗೆ ಆಂಗ್ಲ ಕವಿ ಪೋಪನಂತೆ ಕವಿತಾಶಕ್ತಿಯು ಎಳವರಯದಲ್ಲಿಯೆ ಪ್ರಾಪ್ತವಾಗಿದ್ದಿತೆಂಬುದು

ಎಳವರಯದೊಳಖಿಳಕಳಾ
ವಿಳಾಸಮಂ ಕಂಡು ಮುಟ್ಟಿ ಬರೆ ಕವಿತಾಕೋ
ಮಳೆಯವಳ್ಗೆರ್ದೆಯಿತ್ತಂ ಯತಿ
ತಿಳಕಂ ನೀನೆನಿಪುದಿಳೆಗಿದಚ್ಚರಿಯಲ್ತೇ

ಎಂಬ ಪದ್ಯದಿಂದ[೩] ಗೊತ್ತಾಗುತ್ತದೆ. ಎಳವರಯವೆಂದರೆ ಹನ್ನೊಂದನೆಯ ವರ್ಷವೆಂಬುದು ಆತನ

ನೆರೆದೇಕಾದಶವರ್ಷದ
ಹರಯದೊಳಭವಪ್ರಸಾದಬಲದಿಂ ಕವಿತಾ
ತರುಣಿ ಷಡಕ್ಷರದೇವನ
ನೆರವಿಲ್ಲದೆ ವರಯಿಸಿರ್ದಳರಿದೆನೆ ವಿಬುಧರ್

ಎಂಬ ಪದ್ಯದಲ್ಲಿ[೪] ತಾನೇ ಹೇಳಿದ್ದಾನೆ. ಆದರೆ ಆಂಗ್ಲಕವಿ ಪೋಪನು:

Why did I write? What sin to me unknown
Dipp'd me in ink, my parents', or my own?
As yet a child, nor yet a fool to fame
I lisp'd in numbers, for the numbers came.

ಎಂದು[೫] ತನಗೆ ಚಿಕ್ಕಂದಿನಲ್ಲಿ ಬಂದ ಕವಿತ್ವಶಕ್ತಿಯು ತನ್ನ ಇಲ್ಲವೆ ತನ್ನ ತಾಯ್ತಂದೆಗಳ ಪಾಪಕರ್ಮದ ಫಲವಾಗಿರಬಹುದೇ ಎಂದು ಸಂದೇಹಪಟ್ಟಂತೆ ಷಡಕ್ಷರದೇವನು ತನ್ನ ಕವಿತಾಶಕ್ತಿಯನ್ನು ಕಡೆಗಣಿಸುವ ಬುದ್ಧಿಯಿಂದ ನೋಡಲಿಲ್ಲ. ಆ ಶಕ್ತಿಯು ತನಗೆ ಈ ಜನ್ಮದಲ್ಲಿ ನಿಸರ್ಗಜನಿತವಾಗಿ ಲಭಿಸಿದ್ದರೂ ಅದು 'ಬಹುತರಜನ್ಮಕೋಟಿಗಳೊಳಾರ್ಜಿಸಿದುತ್ತಮಪುಣ್ಯದೇಟಿಗ್ಗಿಯಿಂ '[೬] ಕೈಸಾರ್ದ 'ಸತ್ಕವಿತ್ವದಿವಿ

೧ ರಾಜಶೇಖರವಿಳಾಸ: ಆ ೧, ಪ. ೨೩. ೨ ರಾಜಶೇಖರವಿಳಾಸ : ಆ ೧, ಪ. ೭೮.
೩ ರಾಜಶೇಖರವಿಳಾಸ : ಆ ೧, ಪ. ೭೦. ೪ ಶಬರಶಂಕರವಿಳಾಸ: ಆ ೫, ಪ. ೬೦.
೫ *Epistle to Dr. Arbuthnot*: ll 125-8. ೬ ಶಬರಶಂಕರವಿಳಾಸ: ಆ ೫, ಪ. ೬೧.

ಮಹಾಕವಿ ಷಡಕ್ಷರಿದೇವರಿಗೆ ಸಂಬಂಧಪಟ್ಟ ಚಿತ್ರಗಳು : ೩

(ಬೆಂಗಳೂರಿನ ಶರಣ ಸಾಹಿತ್ಯ ಪತ್ರಿಕೆಯ ಸಂಪಾದಕರ ಕೃಪೆಯಿಂದ)



ಷಡಕ್ಷರಿಕವಿಯ ಮಠ, ದನುಗೂರು

## ಮಹಾಕವಿ ಷಡಕ್ಷರಿದೇವರಿಗೆ ಸಂಬಂಧಪಟ್ಟ ಚಿತ್ರಗಳು : ೪

(ಬೆಂಗಳೂರಿನ ಶರಣ ಸಾಹಿತ್ಯ ಪತ್ರಿಕೆಯ ಸಂಪಾದಕರ ಕೃಪೆಯಿಂದ)



ಷಡಕ್ಷರಿಕವಿಯ ಸಮಾಧಿ, ಎಳಂದೂರು

ಷಣ್ಮಣಿ'[೧]ಯೆಂದು ತಿಳಿದುಕೊಂಡಿದ್ದನು. ಪೂರ್ವಜನ್ಮಗಳಲ್ಲೆಸಗಿದ ಪುಣ್ಯಮಾತ್ರವಲ್ಲದೆ ಈ ಜನ್ಮದಲ್ಲಿಯ ಪರಮಾತ್ಮನ ಕೃಪಾದೃಷ್ಟಿಯೂ ಈ ಶಕ್ತಿಗೆ ಕಾರಣವಾಗಿದ್ದಿತೆಂಬ ದೃಢವಾದ ನಂಬಿಗೆಯನ್ನು

ಆರಾರೇಱರ್ ಶಾಸ್ತ್ರ
ಶ್ರೀರೋಹಣಗಿರಿಯನಲ್ಲಿ ನವಕವಿತಾಚಿಂ
ತಾರತ್ನಂ ದೊರೆಗುಮೆ ಮಾ
ರಾರಿಯ ಕೃಪೆಯಿಲ್ಲದಂಗೆ ಧರಣೀತಳದೊಳ್

ಎಂಬ ಪದ್ಯದಲ್ಲಿ[೨] ಪ್ರಕಟಿಸಿದ್ದಾನೆ. ಆದುದರಿಂದ ಹೀಗೆ ಅಮೋಘವೂ ಅಮೌಲ್ಯವೂ ಪುರಾಕೃತಪುಣ್ಯಜನಿತವೂ ಪರಶಿವಕೃಪಾಪೋಷಿತವೂ ಆದ ಕವಿತಾಶಕ್ತಿಯನ್ನು ಅಪಾತ್ರದಲ್ಲಿ ವಿನಿಯೋಗ ಮಾಡಬಾರದೆಂಬ ದೃಢ ಸಂಕಲ್ಪವನ್ನು ಕವಿಯು ಮಾಡಿಕೊಂಡುದು ಯಥಾಯೋಗ್ಯವೆಂದೇ ಬಗೆಯಬೇಕು. ಅಂತೆಯೇ ಕವಿಯು

ರಸೆಯೊಳ್ ರಸವತ್‌ಕವಿತೆಯ
ನುಸಿರಲ್ ಪಡೆದಸಮನಯನನಂ ಪೊಗೞದೆ ಮಾ
ನಿಸರಂ ಸುರರಂ ಪೊಗೞ್ವುದು
ಕಸವರಮಂ ಕಳೆದು ಕಸವನಾಂತವೊಲಕ್ಕುಂ

ಎಂದು[೩] ಭಾವಿಸಿ,

ವರ್ಣತತಿಮಾತೃಜನಕರ
ಪರ್ಣಾಪರಮೇಶರೆಂಬ ನಿಗಮೋಕ್ತಿಯನಾ
ಕರ್ಣಿಸಿ ತನ್ನುತಿಗೆಯ್ಯದ
ದುರ್ಣರಕೃತಿಕರನೆ ಲಬ್ಧವರ್ಣವರಾಕಂ

ಎಂದು[೪] ಕವಿತಾಶಕ್ತಿಯನ್ನು ಕೇವಲ ಲೌಕಿಕಪ್ರಯೋಜನಕ್ಕಾಗಿ ಬಳಸುವವರನ್ನು ತಿರಸ್ಕರಿಸಿ, ತಾನು ಮಾತ್ರ :

ಆದಱಿಂದೆ ಮಹಿತಮಹಿಮಾ
ಸ್ಪದನಂ ಶಿವನಂ ತದೀಯಶರಣವ್ರಜಮಂ
ಪದೆದು ಮುದವೊದವೆ ಬಲ್ಲಂ
ದದೆ ನುತಿಪೆಂ ನುತಿಸೆನುೞಿದ ಸುರರಂ ನರರಂ

ಎಂದು[೫] ನಿರ್ಧಾರಮಾಡಿಕೊಂಡೆ ಕಾವ್ಯರಚನೆಗೆ ಕೈಹಾಕಿರುವನು. ಆದರೆ ಹೀಗೆ

೧ ಶಬರಶಂಕರವಿಳಾಸ: ಆ ೫, ಪ. ೬೧. ೨ ರಾಜಶೇಖರವಿಳಾಸ: ಆ ೧, ಪ. ೨೯. ಇದರೊಡನೆ ನಾಗವರ್ಮನ ಕಾವ್ಯಾವಲೋಕನದ ೪೫೨ ನೆಯ ಪದ್ಯವಾದ:

ಶ್ರುತಿವಾರಿನಿಧಿಯ ಪಾರಮ
ನತಿಪ್ರಬಂಧಾಭಿಯೋಗರಾರೆಯ್ದಿದೊಡಂ
ಕೃತಪುಣ್ಯಂಗಲ್ಲದೆ ವಿ
ಶ್ರುತಕವಿತಾರತ್ನಮಲ್ಲಿ ಸಂಭವಿಸುಗುಮೇ— ಎಂಬುದನ್ನು ಹೋಲಿಸಿರಿ.

೩ ರಾಜಶೇಖರವಿಳಾಸ: ಆ ೧, ಪ. ೨೧. ೪ ರಾಜಶೇಖರವಿಳಾಸ: ಆ ೧, ಪ. ೨೦.
೫ ,, ,, ,, ಆ ೧, ಪ. ೨೨.

ಪ್ರೊಣ್ದು ನುಡಿದು ಛಲದಿಂದ ಕವಿತೆಯನ್ನು ಬರೆದವರಲ್ಲಿ ಷಡಕ್ಷರದೇವನೆ ಮೊದಲಿಗನಲ್ಲ. ಇವನಿಗಿಂತ ಮೊದಲು ಸುರಂಗಕವಿಯು ತನ್ನ ' ನಾಲಗೆಯುಂ ಗಿರಿಶಂಗೆ ಮಾಱಿದೆ' ನೆಂದು[೧] ಹೇಳಿಕೊಂಡಿರುವನು. ಅದರಂತೆ ಆತನಿಗಿಂತಲೂ ಮೊದಲಿನವರಾದ ಚಾಮರಸ, ರಾಘವಾಂಕ ಮುಂತಾದವರೆಲ್ಲ ಇದೇ ವಿಧದ ಪ್ರೊಣ್ಕೆಯನ್ನು ಮಾಡಿರುವರು[೨]. ಇವರೆಲ್ಲರಿಗಿಂತಲೂ ಮುಂಚೆಯೆ ಹರಿಹರದೇವನು ' ದೇವದೇವೋತ್ತಮನ ಶರಣರಂ ಪಾಡಿ ಕೈವಲ್ಯವರನಾದ'ನೆಂದು[೩] ಷಡಕ್ಷರದೇವನೆ ಹೇಳಿದ್ದಾನೆ. ಇವರೆಲ್ಲರೂ ವೀರಶೈವ ಕವಿಗಳು. ಆದುದರಿಂದ ಇದೊಂದು ವೀರಶೈವ ಸಂಪ್ರದಾಯವೆಂದೂ ಹರಿಹರನಿಂದ ಬಳೆದು ಬಂದುದೆಂದೂ ನಾವು ಗ್ರಹಿಸಬೇಕು.

ಈ ಸಂದರ್ಭದಲ್ಲಿ ಇನ್ನೊಂದು ಪ್ರಶ್ನೆಯು ತಲೆಯೆತ್ತುವುದು. ಪಂಪಭಾರತವನ್ನು ಬರೆದ ಆದಿಪಂಪನೂ-ಬೇರೊಬ್ಬ ಪಂಪನೊ-ಎಂಬಂತೆ ತನ್ನ ಆದಿಪುರಾಣದಲ್ಲಿ:

ಕವಿತೆಯೊಳಾಸೆಗೆಯ್ವ ಫಲವಾವುದೊ ಪೂಜೆ ನೆಗೞ್ತೆ ಲಾಭಮೆಂ
ಬಿವೆ ವಲಮಿಂದ್ರಪೂಜೆ ಭುವನಸ್ತುತಮಪ್ಪ ನೆಗೞ್ತೆ ಮುಕ್ತಿ ಸಂ
ಭವಿಸುವ ಲಾಭಮೆಂಬಿವೆ ಜಿನೇಂದ್ರಗುಣಸ್ತುತಿಯಿಂದೆ ತಾಮೆ ಸಾ
ರವೆ ಪೆಱರೀವುದೇಂ ಪೆಱರ ಮಾಡುವುದೇಂ ಪೆಱರಿಂದಮಪ್ಪುದೇಂ

ಎಂದೂ[೪] ಹರಿಹರನ ಸಮಕಾಲೀನನಾಗಲಿ ಆತನ ತರುವಾಯದವನೇ ಆಗಲಿ ಆದ ಜನ್ನ ಮಹಾಕವಿಯೂ :

ಕವಿತಾಶಕ್ತಿ ಸುರೇಂದ್ರಧೇನುವದು ಪುಣ್ಯಾಯತ್ತಮಾ ಕಾಮಧೇ
ನುವೆ ಕೆಯ್ಸಾರ್ದೊಡಮಾ ವಚಸ್ಸುಧೆಯನನ್ಯರ್ಗಿತ್ತು ಕಾೞ್ಬೆಕ್ಕಿಗೂ
ಡುವವೊಲ್ ತುಯ್ಯಲನಿಂದ್ರವಂದಿತನನರ್ಹದ್ದೇವನಂ ಭರ್ತೃಮಾ
ಡುವುದಾತಂ ಕೞಿದಾತನಲ್ತೆ ತಳೆಯೊಳ್ ಪಾಲಂ ಭವದ್ವಂದ್ವದಾ

ಎಂದೂ[೫] ಅಭಿಪ್ರಾಯಪಟ್ಟು ತಮ್ಮ ಧರ್ಮದ ಗ್ರಂಥಗಳನ್ನು ರಚಿಸಿರುವರಲ್ಲಾ ? ಇವರಿಗೂ ವೀರಶೈವರಿಗೂ ಕಾವ್ಯಧ್ಯೇಯದಲ್ಲಿ ವ್ಯತ್ಯಾಸವೆಲ್ಲಿಂದ ಬಂತು ? ಕೊನೆಯಲ್ಲಿ ಎಲ್ಲವೂ ಒಂದೇ ಎಂದು ಹೇಳಬಹುದಲ್ಲವೇ ? ಅಹುದು; ಭಾರತದ ಸಾಹಿತ್ಯವೇ ಒಟ್ಟನಲ್ಲಿ ಮತಪ್ರಚೋದಿತವೆಂದು ಬಲ್ಲವರು ಹೇಳುತ್ತಿರುವಾಗ ಕನ್ನಡ ಸಾಹಿತ್ಯವು ಅದಕ್ಕೆ ಅಪವಾದವೆಂದು ಹೇಳಲಾಗುವುದಿಲ್ಲ. ಈ ಮಾತು ಜೈನ, ವೀರಶೈವ, ಬ್ರಾಹ್ಮಣ—ಎಲ್ಲ ಮತಗಳ ಸಾಹಿತ್ಯಕ್ಕೂ ಅನ್ವಯಿಸುವುದೆಂಬುದರಲ್ಲಿ ಸಂದೇಹವಿಲ್ಲ. ಆದರೂ ಆಯಾ ಮತಗಳಲ್ಲಿ ಕಂಡುಬರುವ ಸ್ಥೂಲ-ಸೂಕ್ಷ್ಮ ಭೇದಗಳು ಅವರವರ ಸಾಹಿತ್ಯಗಳ ಧ್ಯೇಯ-ಧೋರಣೆಗಳಲ್ಲಿ ವ್ಯತ್ಯಾಸವನ್ನು ಉಂಟುಮಾಡಿವೆಯೆಂಬುದನ್ನು ನಾವು ಮರೆಯಬಾರದು. ಉದಾಹರಣೆಗಾಗಿ —

೧ ತ್ರಿಷಷ್ಟಿಪುರಾತನವಿಲಾಸ : ಆ ೧, ಪ. ೨೯. ೨ ಚಾಮರಸನ ಪ್ರಭುಲಿಂಗಲೀಲೆ: ಗತಿ ೧, ಪ. ೧೧-೧೩; ರಾಘವಾಂಕನ ಹರಿಶ್ಚಂದ್ರಕಾವ್ಯ: ಸ್ಥಲ ೧, ಪ. ೩೨. ೩ ರಾಜಶೇಖರವಿಲಾಸ : ಆ ೧, ಪ. ೧೯. ೪ ಆದಿಪುರಾಣ : ಆ ೧, ಪ. ೩೬. ೫ ಅನಂತನಾಥಪುರಾಣ : ಆ ೧, ಪ. ೬೦; ಹೀಗೆಯೇ ಸುರಂಗಕವಿ ತ್ರಿಷಷ್ಟಿಪುರಾತನವಿಲಾಸದಲ್ಲಿ ಆ ೧, ಪ. ೨೪ರಲ್ಲಿ ಹೇಳಿದ್ದಾನೆ.

ತಮ್ಮ ಪೂರ್ವಕರ್ಮದ ಪಾಪಪುಣ್ಯಗಳ ಫಲಗಳನ್ನು ಅನುಭವಿಸುತ್ತ ಅನೇಕಭವಗಳಲ್ಲಿ ಜೀವಾತ್ಮಗಳು ತೊಳಲುವುವೆಂಬ ನಂಬುಗೆ ಜೈನರಿಗೂ 'ಹಿಂದೂ' ಮತಾನುಯಾಯಿಗಳಿಗೂ ಸಾಮಾನ್ಯವಾಗಿದೆ; ಇಷ್ಟೇ ಅಲ್ಲ, ಆಯಾ ಧರ್ಮಗಳನ್ನು ಅವಲಂಬಿಸಿರುವುದರಿಂದ ಒಂದೇ ಜನ್ಮದಲ್ಲಿ ಮುಕ್ತಿ ಸಂಭವಿಸುವ ಲಾಭವಿರುವುದೆಂಬ ಭರವಸೆಯೇನೂ ಇರುವುದಿಲ್ಲ. ಆದರೆ ವೀರಶೈವರ ನಂಬುಗೆ ಇದಕ್ಕೆ ವಿಪರೀತವಾಗಿದೆ. ವೀರಶೈವ ದೀಕ್ಷೆಯಾದೊಡನೆ ಪ್ರತಿಯೊಬ್ಬನು ಭವವನ್ನು ನೀಗುವನೆಂದೂ, ಮುಂದೆ ಆ ಮತದ ಪ್ರಕಾರ ನಡೆ-ನುಡಿಗಳನ್ನು ಇಟ್ಟುಕೊಂಡರೆ ಇದೇ ಜನ್ಮವೆ ಅವನಿಗೆ ಕಡೆಯದಾಗುವುದೆಂದೂ ಅವರು ನಂಬುತ್ತಾರೆ. ಅವರಿಗೆ ಪರಲೋಕದ ಅಂಜಿಕೆಯಿಲ್ಲದಿರುವುದರಿಂದಲೆ ಮರಣವನ್ನು 'ಲಿಂಗೈಕ್ಯ'ವೆಂದು ಬಗೆಯುತ್ತಾರೆ. ಉಳಿದ ಧರ್ಮಗಳ ಉಪಾಸ್ಯದೇವತೆಗಳಿಗೂ ಕೂಡ ಭವವು ಬಿಟ್ಟಿಲ್ಲವೆಂಬುದು ಆವರವರ ಮತಗ್ರಂಥ, ಪುರಾಣ ಮುಂತಾದುವುಗಳಿಂದ ಕಂಡು ಬರುವುದರಿಂದ ಪರಮತೀಯರನ್ನೆಲ್ಲ ವೀರಶೈವರು 'ಭವಿ'ಗಳೆಂದೇ ಸಂಬೋಧಿಸುತ್ತಾರೆ. ಶಿವನೊಬ್ಬನೆ ಭವರಹಿತನು, ಭವರೋಗವೈದ್ಯನು; ಇತರ ದೇವತೆಗಳಂತೆ ಧರ್ಮಸಂಸ್ಥಾಪನಕ್ಕಾಗಿ ಬಗೆಬಗೆಯ ಜನ್ಮಗಳನ್ನೆತ್ತುವುದು ಶಿವನಿಗೆ ಅವಶ್ಯವಾಗಿಲ್ಲ; ತನ್ನ 'ಲೀಲಾ' ಮಾತ್ರದಿಂದಲೆ ಪ್ರಪಂಚವನ್ನು ಸರಿಪಡಿಸಬಲ್ಲನು. ಆದುದರಿಂದಲೆ ಆತನೂ ಆತನ ಭಕ್ತರೂ ಇನ್ನುಳಿದ ದೇವಮಾನವರಿಂದಲೂ ಮಿಗಿಲಾದವರು. ಅಂತೆಯೆ ಶಿವನ, ಶಿವಶರಣರ ಹೆಚ್ಚುಗಳವನ್ನು ಪ್ರಕಟಿಸುವುದರಲ್ಲಿ ಕವಿತಾಶಕ್ತಿಯನ್ನು ವಿನಿಯೋಗಿಸುವುದೇ ಯೋಗ್ಯವಾದುದೆಂದು ವೀರಶೈವ ಕವಿಗಳ ನಂಬುಗೆ. ಸಾಹಿತ್ಯಕ್ಷೇತ್ರದಲ್ಲಿ ಈ ನಂಬುಗೆಯು ಹರಿಹರದೇವನಿಂದ ಷಡಕ್ಷರದೇವನ ವರೆಗೆ ಬಳೆದು ಬಂದಿರುವುದು ಅವರಿರ್ವರ ಕೆಳಗಣ ಪದ್ಯಗಳಿಂದ ಕಂಡು ಬರುವುದು. ಹರಿಹರನು ತನ್ನ ಪಂಪಾಶತಕದಲ್ಲಿಯ :

ಮನುಜರ ಮೇಲೆ ಸಾವವರ ಮೇಲೆ ಕನಿಷ್ಟರ ಮೇಲೆ ಪದ್ಯಮಂ
ತನತನಗಿಂದ್ರ ಚಂದ್ರ ರವಿ ಕರ್ಣ ದಧೀಚಿ ಬಲೀಂದ್ರನೆಂದು ತಾ
ನನವರತಂ ಪೊಗೞ್ದು ಕೆಡಬೇಡೆಲೆ ಮಾನವ ನೀನಹರ್ನಿಶಂ
ನೆನೆ ಪೊಗೞರ್ಚಿಸೆಮ್ಮ ಕಡುಸೊಂಪಿನ ಪೆಂಪಿನ ಪಂಪೆಯಾಳ್ದನಂ

ಎಂಬ[1] ಪದ್ಯದಲ್ಲಿ 'ವಿಪುಳಯಶೋವಿತಾನಗುಣಮಿಲ್ಲದನಂ ಪ್ರಭುಮಾಡಿ ಪೂರ್ವಭೂಮಿಪರಂ ಪುಗಿಸಿ ಪೋಲಿಸುವ'[2] ರೂಢಿಯನ್ನು ಅಲ್ಲಗಳೆದಿರುವನು. ಈ ವಿಚಾರವನ್ನೆ ಇನ್ನಿಷ್ಟು ಬಲಪಡಿಸಿ ಷಡಕ್ಷರದೇವನು :

ಭವದೊಳ್ ಬರ್ಪಮರರ್ಕಳಂ ಭವವಿಮುಕ್ತ್ಯರ್ಥಂ ಶರಣ್ಬೊಕ್ಕೊಡೇ
ನವರೇನೀವರೆ ಮುಕ್ತಿಯಂ ಭವಹರಂ ನೀನಲ್ಲದಿಷ್ಟಾರ್ಥಮಂ
ತವೆ ಮಾಡಲ್ ಸುರಪಾದಪಂ ನೆರಗುಮಿ ಬರ್ಬೂರವೃಕ್ಷಂಗಳೀ
ವುವೆ ಕೇಳಿಂತಿರೆ ನೀನೆ ಮೋಕ್ಷವರದಂ ಶ್ರೀಶೈಲಜಾವಲ್ಲಭಾ

೧ ಪಂಪಾಶತಕ : ಪ. ೮೨. ೨ ಪಂಪಭಾರತ : ೪ ೧, ಪ. ೧೪.

ಎಂದು[೧] ಅನ್ಯಮತಗಳ ಪುರಾಣಪುರುಷರನ್ನೂ ಆರಾಧ್ಯದೇವರನ್ನೂ ಕಡೆಗಣಿಸಿದ್ದಾನೆ. ಪರಮತಸಹಿಷ್ಣುತೆಯ ದೃಷ್ಟಿಯಿಂದ ಈ ರೀತಿ ಸ್ವಮತಶ್ರೇಷ್ಠತೆಯನ್ನು ಪ್ರತಿಪಾದಿಸುವುದು ತಪ್ಪೋ ಒಪ್ಪೋ ಎಂಬ ಚರ್ಚೆಯು ಇಲ್ಲಿ ಅಪ್ರಸ್ತುತವಾದ ವಿಷಯ; ಆದರೆ ಮತಪ್ರಸಾರಣ ಕಾರ್ಯದಲ್ಲಿ ಈ ಬಗೆಯ ನಂಬುಗೆಯು ಬಹುಮಟ್ಟಿಗೆ ಉಪಕಾರಿಯಾಗಿತ್ತೆಂಬುದು ಸಾಹಿತ್ಯಚರಿತ್ರೆಯಲ್ಲಿ ನೆನಪಿಡತಕ್ಕ ಒಂದು ಅಂಶ. ಈ ನಂಬುಗೆಯ ಮೂಲಕವಾಗಿಯೆ ವೀರಶೈವ ಕವಿಗಳು ರಾಮಾಯಣ-ಮಹಾಭಾರತಗಳ ಕಥೆಗಳನ್ನು ಬದಿಗಿಟ್ಟು ಪುರಾತನರೂ ನೂತನರೂ ಆದ ಶಿವಶರಣರನ್ನು ಕುರಿತು ಸ್ಫೂರ್ತಿದಾಯಕ ಚರಿತ್ರೆಗಳನ್ನು ಪುರಾಣರೂಪದಲ್ಲಿ ರಚಿಸತೊಡಗಿದರು; ಆಗಾಗ ಪುರಾಣಪ್ರಸಿದ್ಧವಾದ ಈಶ್ವರನ ಪಂಚವಿಂಶತಿಲೀಲೆಗಳನ್ನು ಸ್ವತಂತ್ರವಾಗಿಯೋ ಅವಾಂತರವಾಗಿಯೋ ಬಣ್ಣಿಸುವ ಸಂಧಿಗಳನ್ನು ಕಲ್ಪಿಸಿಕೊಂಡರು. ಒಮ್ಮೊಮ್ಮೆ (ಪ್ರಸ್ತುತ ಗ್ರಂಥವಾದ) ಕಿರಾತರುದ್ರಲೀಲೆ, ಹರಿಶ್ಚಂದ್ರಕಾವ್ಯ ಮುಂತಾದ ಕೆಲ ಕೃತಿಗಳಲ್ಲಿ ಹಳೆಯ ಕಥಾವಸ್ತುಗಳನ್ನು ಆಯ್ದುಕೊಂಡರೂ ಅವುಗಳಲ್ಲಿಯೂ ಶಿವಪಾರಮ್ಯವನ್ನು ಸ್ಥಾಪಿಸುವುದೇ ಅವರ ಮುಖ್ಯಧ್ಯೇಯವಾಗಿರುವುದು. ಈ ದೃಷ್ಟಿಯ ಮೂಲಕವಾಗಿ ಇವರು ರಾಜಾಶ್ರಯವನ್ನು ಕೋರದೆ ಲೋಕಶಿಕ್ಷಣ ಕಾರ್ಯವನ್ನು ಕೈಕೊಂಡರು. ಈ ಧ್ಯೇಯವನ್ನು ಸಾಧಿಸುವುದಕ್ಕೆಂದೇ ಪಂಡಿತರಿಗೆ ಮಾತ್ರ ಮೆಚ್ಚಿಗೆಯಾಗುವ ಕ್ಲಿಷ್ಟ ಶೈಲಿಯನ್ನು ಅಲ್ಲಗಳೆದು ಸಾಮಾನ್ಯ ಜನರಿಗೂ ತಿಳಿಯುವಂತಹ ಸರಳಶೈಲಿಯನ್ನು ಅಳವಡಿಸಿಕೊಂಡರು. ಇದರ ಪರಿಣಾಮವಾಗಿ ಇದುವರೆಗೆ ಸ್ವರ್ಣಾಲಂಕಾರಮಂಡಿತೆಯಾಗಿ ಕೇವಲ ರಾಜಾಸ್ಥಾನದಲ್ಲಿ ಉಚ್ಚಪೀಠದಲ್ಲಿ ಸದಾ ಕೈಕಾಲು ಮುದುಡಿಕೊಂಡು ಕುಳಿತಿದ್ದ ಸಾಹಿತ್ಯಸರಸ್ವತಿಯು ಲೋಗರ ಮನೆಮನೆಗಳಲ್ಲಿಯೂ ಸುಳಿದಾಡತೊಡಗಿದಳು; ಸಲುಗೆಯಿಂದ 'ಚಾಪೆಯ ಮೇಲೆಯೆ' ಕುಳಿತುಕೊಂಡಳು. ಈ ರೀತಿ ವಿಚಾರಮಾಡಿದಲ್ಲಿ ಷಡಕ್ಷರದೇವನಿಗೆ ಚಿಕದೇವರಾಯನ ಇಲ್ಲವೆ ಇನ್ನಾವನಾದರೂ ರಾಜನ ಆಸ್ಥಾನದಲ್ಲಿ ಪ್ರವೇಶ ದೊರಕಿದುದು ಆತನು ಕವಿಯೆಂಬ ಲೆಕ್ಕದಿಂದಲ್ಲ. ಆದರೆ ಆತನು ವೀರಶೈವ ಮತದ ಮೇರೆಗೆ ರಾಜಮನೆತನಗಳಿಗೇ ಧರ್ಮಗುರುವಾಗಿದ್ದುದರಿಂದ ಆ ಗುರುತ್ವದ ಮೂಲಕವಾಗಿಯೆ ಆತನಲ್ಲಿ ರಾಜರು ಮೊದಲಿಂದಲೂ ಶಿಷ್ಯತ್ವವನ್ನು ವಹಿಸಿದ್ದರು. ಆತನ ಕವಿತಾಸಾಮರ್ಥ್ಯವು ಆಸ್ಥಾನದಲ್ಲಿಯೂ ರಾಜಮನ್ನಣೆಯನ್ನು ಪಡೆದು 'ಇಳಾಪತಿಪೂಜಿತ ಪಾದಪಂಕಜ'[೨] ನಾಗಲು ಆತನಿಗೆ ಸಹಾಯಕಾರಿಯಾಯಿತು. ಇದಲ್ಲದೆ ಚಿಕದೇವರಾಯನು ರಾಜ್ಯಾರೂಢನಾಗುವ ಮೊದಲೆ ಷಡಕ್ಷರದೇವನು ಉದ್ದಾಮ ಕವಿಯೆಂದು ನಾಮಾಂಕಿತನಾಗಿದ್ದನು.

೧ ರಾಜಶೇಖರವಿಳಾಸ: ಆ ೩, ಪ. ೪೨. ೨ ರಾಜಶೇಖರವಿಳಾಸ: ಆ ೧, ಪ. ೭೨. ಈ ಕವಿಯು ವೀರಶೈವರಾದ ಕೆಳದಿರಾಜರ ಆಸ್ಥಾನದಲ್ಲಿಯೂ ಪೂಜೆವಡೆದಿದ್ದನೆನ್ನುವುದಕ್ಕೆ ಆತನ ವೀರಭದ್ರೋದಾಹರಣಗದ್ಯವು ಆಧಾರವಾಗಿರುವುದು.

## (೨)

ಷಡಕ್ಷರದೇವನು ಕನ್ನಡ-ಸಂಸ್ಕೃತಗಳೆರಡರಲ್ಲಿಯೂ ಅದ್ವಿತೀಯ ಪಾಂಡಿತ್ಯವನ್ನು ಸಂಪಾದಿಸಿದ್ದನು; ಎರಡು ಭಾಷೆಗಳಲ್ಲಿಯೂ ಮಹಾಕಾವ್ಯಗಳನ್ನು[೧] ರಚಿಸುವ ಅಗಾಧ ಸಾಮರ್ಥ್ಯವು ಆತನಲ್ಲಿದ್ದಿತು. ಪೊನ್ನ ಮಹಾಕವಿಯಂತೆ 'ಸಕ್ಕದಂ ಕನ್ನಡಮೆಂಬೆರಡುಂ ಕವಿತೆಯನಮಳ್ವೆತ್ತರಂತಿರೊಡನಡಪಿದ[೨]'ನೆಂಬುದು ಉಭಯ ಕವಿತಾವಿಶಾರದ (-ವಿಚಕ್ಷಣ) ಎಂಬ ಆತನ ಬಿರುದಿನಿಂದಲೆ ಕಂಡು ಬರುವುದು. ಈ ಕವಿಯು ಸಂಸ್ಕೃತದಲ್ಲಿ ಶಿವಭಕ್ತನಾದ ಚೋಳಭೂಪಾಲನೊಬ್ಬನನ್ನು ಕುರಿತು 'ಕವಿಕರ್ಣರಸಾಯನ' ಎಂಬ ಮಹಾಕಾವ್ಯವನ್ನೂ, ಶಿವನ ಸರ್ವೋತ್ತಮತೆಯನ್ನು ಪ್ರತಿಪಾದಿಸುವ 'ಶಿವಾಧಿಕ್ಯರತ್ನಾವಳಿ,' ಭಕ್ತನ ಆಧಿಕ್ಯವನ್ನು ಸ್ಥಾಪಿಸುವ 'ಭಕ್ತಾಧಿಕ್ಯರತ್ನಾವಳಿ' ಎಂಬೆರಡು ಮತಗ್ರಂಥಗಳನ್ನೂ ಬರೆದಿರುವನಲ್ಲದೆ, ಶಿವಸ್ತವಮಂಜರಿ, ವೀರಭದ್ರೋದಾಹರಣಗದ್ಯ, ಬಸವಾಷ್ಟಕ, ನೀಲಾಂಬಿಕಾಸ್ತೋತ್ರ ಇವೇ ಮೊದಲಾದ ಹಲವು ಸ್ತೋತ್ರಗಳನ್ನೂ ರಚಿಸಿದ್ದಾನೆ. ಸಂಸ್ಕೃತದಲ್ಲಿ ಇಷ್ಟೊಂದು ಧಾರಾಳವಾಗಿ ಕಬ್ಬಗಳನ್ನು ರಚಿಸಿದ್ದರೂ ಸಂಸ್ಕೃತಕಿಂತಲೂ ಕನ್ನಡದಲ್ಲಿಯೇ ಈತನಿಗೆ ಅಭಿಮಾನವೂ ಅನುರಾಗವೂ ಇದ್ದುವೆಂಬುದು:

... ... ... ಮೊದಲ<br>
ಗ್ಗದಸಕ್ಕದಮಿರೆ ಕನ್ನಡ<br>
ಮುದಯಿಸಿ ರಂಜಿಸದೆ ಕರ್ಣಕಮುಸೀಯತೆಯಿಂ

ಎಂಬ[೩] ಪದ್ಯಭಾಗದಿಂದ ಊಹಿಸಬಹುದಾಗಿದೆ. ಈ ಕಾರಣದ ದೆಸೆಯಿಂದಲೂ ಈತನ ಸಂಸ್ಕೃತ ಕೃತಿಗಳನ್ನು ಸಾದ್ಯಂತವಾಗಿ ವಿವೇಚಿಸುವುದು ಇಲ್ಲಿ ಅಪ್ರಕೃತವಾದುದರಿಂದಲೂ ಈತನ ಕನ್ನಡ ಕೃತಿಗಳ ಕಡೆಗೆ ಹೊರಳುವ.

ಷಡಕ್ಷರದೇವನು ಕನ್ನಡದಲ್ಲಿ ರಾಜಶೇಖರವಿಳಾಸ, ವೃಷಭೇಂದ್ರವಿಜಯ, ಶಬರಶಂಕರವಿಳಾಸ ಎಂಬ ಮೂರು ಚಂಪೂ ಗ್ರಂಥಗಳನ್ನು ರಚಿಸಿದ್ದಾನೆ. ಇವುಗಳಲ್ಲಿ **ರಾಜಶೇಖರವಿಳಾಸವೇ** ಮೊದಲು ರಚಿತವಾದ ಗ್ರಂಥ. ಈ ಕಾವ್ಯದ ಕಥಾವಸ್ತುವನ್ನು ಗುಬ್ಬಿಯ ಮಲ್ಲಣಾರ್ಯ (ಕ್ರಿ. ಶ. ೧೫೧೩)ರ ಭಾವಚಿಂತಾರತ್ನದಿಂದ ಎತ್ತಿಕೊಂಡುದಾಗಿದೆಯೆಂದು ಕವಿಯೇ ಹೇಳಿದ್ದಾನೆ[೪]. ಮಲ್ಲಣಾರ್ಯರು 'ವರ್ಣಕ' ದಿಂದ (ಎಂದರೆ ಷಟ್ಪದಿ ರೂಪದಲ್ಲಿ) ಹೇಳಿದುದನ್ನೇ ತಾನು 'ವಸ್ತುಕ' ವಾಗಿ (ಎಂದರೆ ಚಂಪೂ ರೂಪವಾಗಿ) ರಚಿಸಿರುವೆನೆಂದೂ ಹೇಳಿದ್ದಾನೆ. ಪಂಚಾಕ್ಷರೀ ಮಂತ್ರದ ಮಹಿಮೆಯನ್ನು ಬಣ್ಣಿಸುವುದೇ ಈ ಕಥೆಯ ಉದ್ದೇಶ. ಭಾವಚಿಂತಾರತ್ನದಲ್ಲಿಯೂ ಅದಕ್ಕೆ ಆಧಾರವಾದ ಪಿಳ್ಳೈನೈನಾರರ ತಮಿಳು ಗ್ರಂಥ

೧ ಶಬರಶಂಕರವಿಳಾಸ : ಆ ೧, ಪ. ೬೨. ೨ ಶಾಂತೀಶ್ವರಪುರಾಣ : ಆ ೧, ಪ. ೧೦.
೩ ರಾಜಶೇಖರವಿಳಾಸ : ಆ ೧, ಪ. ೪೦. ೪. ರಾಜಶೇಖರವಿಳಾಸ: ಆ ೧, ಪ. ೭೪.

ದಲ್ಲಿಯೂ ಈ ಕಥೆಗೆ ಚೋಳಮಂಡಳದ ಅಧಿಪತಿಯಾದ ಸತ್ಯೇಂದ್ರಚೋಳನೆ ಕಥಾನಾಯಕನು. ಆತನ ಶಿವಭಕ್ತಿಯ ಪರಾಕಾಷ್ಠತೆಯನ್ನು ಚಿತ್ತರಿಸುವುದ ರೊಡನೆ ಆತನ ಸತ್ಯಸಂಧತೆಯನ್ನೂ ನ್ಯಾಯನಿಷ್ಠುರತೆಯನ್ನೂ ಚಿತ್ತರಿಸುವುದು ಮೂಲಗ್ರಂಥಕರ್ತನ ಉದ್ದೇಶವಿರಬಹುದು. ಆದರೆ ಷಡಕ್ಷರದೇವನು ಕಥಾಸಂವಿಧಾನದಲ್ಲಿ ತಕ್ಕ ಮಾರ್ಪಾಟುಗಳನ್ನು ಮಾಡಿಕೊಳ್ಳುವ ಮೂಲಕ ಸತ್ಯೇಂದ್ರಚೋಳನನ್ನು ಹಿನ್ನೆಲೆಗೆ ನೂಂಕಿ ಆತನ ಮಗನಾದ ಮಂತ್ರಲಕ್ಷಣನನ್ನು ರಾಜಶೇಖರನೆಂಬ ಹೆಸರಿನಿಂದ ಕಥಾನಾಯಕನನ್ನಾಗಿ ಮಾಡಿಕೊಂಡಿರುವನು. ಇದರಿಂದ ಮೂಲ ಕಥೆಗೆ ಒಂದು ಹೊಸಪರಿಯ ಕಳೆಯೇರುವಂತೆ ಮಾಡಿದುದಲ್ಲದೆ ಮಹಾಕಾವ್ಯದ ಅಂಗಗಳೆಂದು ಪರಿಗಣಿತವಾದ ಅಷ್ಟಾದಶವರ್ಣನೆಗಳನ್ನು ಕಥೆಯ ಬೆಳವಣಿಗೆಗೆ ಪೋಷಕವಾಗುವ ತೆರದಲ್ಲಿ ಉಪಯೋಗಿಸುವುದಕ್ಕೆ ತಕ್ಕ ಎಡೆಗಳನ್ನೂ ಕಲ್ಪಿಸಿಕೊಂಡು ತನ್ನ ಪ್ರತಿಭೆಯನ್ನು ತೋರ್ಪಡಿಸಿದ್ದಾನೆ. ಇದರ ಪರಿಣಾಮವಾಗಿ ಬೇರೆ ರಸಗಳು ಅಲ್ಲಲ್ಲಿ ಉಚಿತ ರೀತಿಯಲ್ಲಿ ಪ್ರಕಟವಾಗಿದ್ದರೂ ರಾಜಶೇಖರ ವಿಳಾಸವು ಶೃಂಗಾರಪ್ರಚುರವಾದ ಕಾವ್ಯವಾಗಿದೆಯೆಂದು ಹೇಳಬಹುದು.

ರಾಜಶೇಖರವಿಳಾಸವ ಪ್ರಶಸ್ತಿಯನ್ನು ಕುರಿತ ಒಂದು ಆಖ್ಯಾಯಿಕೆಯನ್ನು ಲಿಂ. ಪಿ. ಆರ್. ಕರಿಬಸವಶಾಸ್ತ್ರಿಗಳು ತಮ್ಮ ಉಪೋದ್ಘಾತದಲ್ಲಿ[೧] ಹೇಳಿದ್ದಾರೆ :

'ಈ ಕವಿಯ ಕಾಲದಲ್ಲಿ ಒಂದಾನೊಂದು ದಿನ ಜೈನಮತಸ್ಥರು ನೇಮಿಚಂದ್ರನಿಂ ಮಾಡಲ್ಪಟ್ಟ ಲೀಲಾವತಿ ಎಂಬ ಕರ್ಣಾಟಕ ಚಂಪೂಗ್ರಂಥವನ್ನು ಆನೆಯ ಮೇಲೆ ಅಂಬಾರಿಯಲ್ಲಿರಿಸಿ ಆನೆಯ ಹೊಟ್ಟೆಗೆ ಒಂದು ಬೆಳ್ಳಿಯ ತೊಟ್ಟಿಲನ್ನು ಕಟ್ಟಿ ಬೀದಿಯಲ್ಲಿ ಮೆರವಣಿಗೆ ಮಾಡಿಕೊಂಡು ಬರುತ್ತಾ ಷಡಕ್ಷರದೇವನ ಮಠದ ಮುಂದೆ ನಿಲ್ಲಿಸಲು, ಆತನ ಶಿಷ್ಯರು ನೋಡಿ ಆ ಗುಂಪಿನಲ್ಲಿ ಮುಖ್ಯರಾದವರನ್ನು – ಇದೇನು ಮೆರವಣಿಗೆ ಎಂದು ಕೇಳಲಾಗಿ, ಇದು ಕರ್ಣಾಟಕ ಗ್ರಂಥ ಶಿರೋಮಣಿಯಾದ ಕವಿಕುಂಜರಲೀಲಾವತಿಯ ಮೆರವಣಿಗೆ ಎಂದು ಹೇಳಿದರು. ಅದು ಸರಿ, ಈ ಆನೆಯ ಹೊಟ್ಟೆಗೆ ತೊಟ್ಟಿಲನ್ನು ಕಟ್ಟಿರುವುದಕ್ಕೆ ಕಾರಣ ವೇನೆಂದು ಪ್ರಶ್ನೆಮಾಡಲು — ನಗುತ್ತಾ ಓಹೋ ನಿಮಗೆ ಗೊತ್ತಿಲ್ಲವೋ ? ಈ ಗ್ರಂಥವು ರಸಭರಿತವಾದುದು. ಆ ರಸವು ಸ್ರವಿಸಿ ನೆಲದಲ್ಲಿ ಬಿದ್ದೀತೆಂದು ಊಹಿಸಿ ತೊಟ್ಟಿಲನ್ನು ಕಟ್ಟಿದ್ದೇವೆ — ಎಂದು ಕುಚೇಷ್ಟೆಯ ಮಾತುಗಳನ್ನಾಡಿದರು. ಶಿಷ್ಯರು ಒಳಗೆ ಹೋಗಿ ಆ ಸಂಗತಿಯನ್ನು ಷಡಕ್ಷರದೇವನಿಗೆ ತಿಳಿಸಿದರು. ಆತನು ಕೇಳಿ — ಇದಕ್ಕಿಂತಲೂ ರಸಭರಿತವಾದ ಗ್ರಂಥವಿರುವಲ್ಲಿ ಈ ಗ್ರಂಥಕ್ಕೆ ಇಷ್ಟು ಬಹುಮಾನವು ಸಲ್ಲುವುದಿಲ್ಲ. ಆದುದರಿಂದ ಮೆರವಣಿಗೆಯನ್ನು ಹಿಂತಿರುಗಿಸಬೇಕೆಂದು ಶಿಷ್ಯರ ಕೂಡ ಹೇಳಿ ಕಳುಹಿಸಿ ಮುಂದಕ್ಕೆ ಹೋಗದ ಹಾಗೆ ತಡೆಸಿದನು. ಈ ಸಂಗತಿಯನ್ನು ಅವರು ಅರಮನೆಯ ಆಸ್ಥಾನದಲ್ಲಿ ದೂರಲಾಗಿ ಅಧಿಕಾರಿಗಳು ವಿಚಾರಮಾಡುವ ಸಂದರ್ಭದಲ್ಲಿ ಷಡಕ್ಷರದೇವನು — ಇನ್ನೊಂದು ವರ್ಷದೊಳಗಾಗಿ ರಸಭರಿತವಾದ ಗ್ರಂಥವನ್ನು ಕಾಶಿಯಿಂದ ತರಿಸುತ್ತೇವೆ. ಆದಕ್ಕಿಂತ ಲೀಲಾವತಿಯು ರಸಭರಿತವಾದುದೆಂದು ವಿದ್ವಾಂಸರಿಗೆ ತೋರಿದರೆ ಆಗ ಮೆರವಣಿಗೆಯನ್ನು

೧ ರಾಜಶೇಖರವಿಳಾಸದ ಉಪೋದ್ಘಾತ : ಪು. i. ಮತ್ತು ii.

ಮಾಡಬಹುದೆಂದು ಹೇಳಿದುದಕ್ಕೆ ವಾದಿಗಳೆಲ್ಲರೂ ಒಪ್ಪಿಕೊಂಡರು. ಅನಂತರ ಷಡಕ್ಷರ ದೇವನು ರಾಜಶೇಖರವಿಳಾಸವೆಂಬ ಗ್ರಂಥವನ್ನು ರಚಿಸುವುದಕ್ಕೆ ಪ್ರಾರಂಭಿಸಿ, ಒಂದು ವರ್ಷ ದೊಳಗಾಗಿ ಪೂರ್ಣಮಾಡಿ ವಿದ್ವಾಂಸರನ್ನು ಕೂಡಿಸಿ ಸಭೆಯಲ್ಲಿ ಮೊದಲು ಕವಿಕುಂಜರ ಲೀಲಾವತಿಯ ಮುಖ್ಯಭಾಗಗಳನ್ನು ಓದಿಸಿದ ಮೇಲೆ ರಾಜಶೇಖರದಲ್ಲಿ ಆಯಾ ವರ್ಣನಾಂಶ ಗಳನ್ನು ಓದಿ ತಾನೇ ಅರ್ಥವನ್ನು ಹೇಳಿ — ಎರಡರಲ್ಲಿ ಯಾವುದು ರಸಭರಿತವಾದುದೆಂದು ಕೇಳಲು, ವಿದ್ವಾಂಸರೆಲ್ಲರೂ — ಲೀಲಾವತಿ ಕನ್ನಡದಲ್ಲಿ ಪ್ರೌಢವಾದಾಗ್ಯೂ ರಾಜಶೇಖರ ವಿಳಾಸದಷ್ಟು ರಸಪುಷ್ಟಿಯುಳ್ಳುದಲ್ಲವೆಂದು ಹೇಳಿ, ಒಟ್ಟಾಗಿ ಷಡಕ್ಷರದೇವನ ಕವಿತಾ ವಿಷಯವಾಗಿ —

ಜಿಹ್ವಾಂತರ್ನಟದಂಬುಜಾಸನವಧೂಪಾದಪ್ರವಾಳಸ್ಫುರನ್
ಮಂಜೀರದ್ವಯಮಂಜುನಾದವಿಭವಶ್ರೀಗರ್ವಸರ್ವಂಕಷಾಃ
ಜೀಯಾಸುರ್ಭವತಃ ಷಡಕ್ಷರವಿಭೋಃ ಕುಂದಾರವಿಂದಾವಲೀ
ಮಂದಾರದ್ರುಮಮಂಜರೀ ಮಧುಝುರೀ ಮಾಧುರ್ಯಧುರ್ಯಾಗಿರಃ

ಎಂದು ಯೋಗ್ಯತಾಪತ್ರವಂ ಕೊಟ್ಟರೆಂಬ ಬಹುಕಾಲದಿಂದಲೂ ಒಂದು ಐತಿಹ್ಯವು ಜನಜನಿತ ವಾಗಿ ಬಂದಿರುವುದು.'

ಇದೇ ಲೀಲಾವತಿಯ ಪ್ರಶಸ್ತಿಯನ್ನು ಕುರಿತು ಇಂತಹದೇ ಒಂದು ಇತಿಹಾಸವು— ಎಂದರೆ ಕವಿರಾಜಕುಂಜರನಾದ ನೇಮಿಚಂದ್ರನು (ಬಾಣ) ಕಾದಂಬರಿಯನ್ನು ಸುಡಿಸಿ ತನ್ನ ಲೀಲಾವತಿಗೆ ಕಪ್ಪನಿಡಿಸಿದನು ಎಂಬುದು— ಉಂಟೆಂದು ದೊಡ್ಡಯ್ಯ (ಸು. ಕ್ರಿ. ೧೫೫೦), ಬಾಹುಬಲಿ (ಕ್ರಿ. ೧೫೬೦), ಕುಸುಮಾವಳಿಯನ್ನು ಬರೆದ ದೇವಚಂದ್ರ (ಕ್ರಿ. ೧೮೩೮) ಇವರ ಗ್ರಂಥಗಳಿಂದ ತಿಳಿಯುವುದೆಂಬ ವಿಷಯವನ್ನು ಕವಿಚರಿತೆಕಾರರು ಉಲ್ಲೇಖಿಸಿದ್ದಾರೆ[೧]. ಇದೇ ರೀತಿಯ ಇನ್ನೊಂದು ಐತಿಹ್ಯವು ಷಡಕ್ಷರದೇವನನ್ನು ಒಂದೆಡೆ (ಸು. ಕ್ರಿ. ೧೧೮೦ ರಲ್ಲಿ ಜೀವಿಸಿದ) ಜಗನ್ನಾಥವಿಜಯದ ಕರ್ತೃವಾದ ರುದ್ರಭಟ್ಟನೊಡನೆಯೂ ಇನ್ನೊಂದೆಡೆ (ಸು. ಕ್ರಿ. ೧೭೦೦ರಲ್ಲಿದ್ದ) ಜೈಮಿನಿಭಾರತದ ಕರ್ತೃವಾದ ಲಕ್ಷ್ಮೀಶನೊಡನೆಯೂ ಸಂಬಂಧಿಸುತ್ತಿದೆಯೆಂಬುದು ಕೆಳಗಣ[೨] ಪದ್ಯಗಳಿಂದ ಕಂಡು ಬರುತ್ತದೆ:

ಶಿವಕಲಾಬ್ದ ಶಕ ಶುಕ್ಲವರ್ಷವಾ
ಧವಸಿತಾರ್ಕದಿನಜೀವವಾರದೊಳ್
ಭವಿಗಳೆಲ್ಲ ವರರುದ್ರಭಟ್ಟನೇ
ಕವಿಯೆನಲ್ಕೊರೆದನೊಂದು ಕಾವ್ಯಮಂ

ಅರಸಲ್ ಜಗನ್ನಾಥವಿಜಯಮೆನಿಪಾ ಕಬ್ಬ
ಮುರುದೋಷಪೂಗಪರಿಚಿತಮಾಗೆ ಲಾಕ್ಷಣಿಕ
ವರರದಂ ರಾಜಶೇಖರವಿಲಾಸಕೆ ಪಡಿಯನೊರೆಯದಿರೆ ರುದ್ರಭಟ್ಟಂ

೧ ಕರ್ನಾಟಕ ಕವಿಚರಿತೆ: ಭಾಗ ೧, ಪು. ೨೫೯-೬೦.

೨ ಮೆ. ಕೈಸರವರು ಪ್ರಕಟಿಸಿದ ಕರ್ನಾಟಕ ಭಾಷಾಭೂಷಣದ(ಕ್ರಿ. ೧೮೮೪)ಪ್ರಸ್ತಾವನೆ: ಪು. xxxii

ಪರಿಭವಕೆ ಗುರಿಯಾದನೆಂದು ಸಭಿಕರ್ ಪೇಳ್ದ
ಪರಿಯರಿತು ಕರುಣದಿಂದಾ ಷಡಕ್ಷರದೇವ
ಬಿರುದುಗಳ ಕೊಂಡು ಮಗುಳಿತ್ತು ಮನ್ನಿಸಿ ಪೊರೆದನದ ಕೇಳಿ ಲಕ್ಷ್ಮೀಶನು

ಹರಿಚರಿತದಿಂ ಕೂಡಿ ಹರಿಮೇಧಪರ್ವಕಥೆ
ಯೊರೆದ ವಾರ್ದಿಕಷಟ್ಪದಿಗಳಿಂದ ಜಯಮಿನಿಯ
ವರಸೂಕ್ತಿ ತಾತ್ಪರ್ಯಭಾವಗರ್ಭಿತಮಾಗೆ ರಸಿಕರ್ಕಳನುಮೋದಿಸಲ್
ಪರಿಪರಿಯಲಂಕಾರ ರಸಭಾವಪುಷ್ಟಿಯಿಂ
ಮೆರೆದುದು ಗುಣೇಂದುಕಳೆಪರಿಮಿತಾಬ್ದದ ಶಕದ
ಹರಿವಾರ ಕಾರ್ತಿಕದ ಸಿತಪಂಚಮಿಾ ಪ್ರಜಾಪತಿಶರದಿ೧ ಸಂಗಮೆನಲು

ಕನ್ನಡಗಬ್ಬಿಗರಾತನ
ಮನ್ನಿಸಿ ಲಕ್ಷ್ಮೀಶನೊರ್ವನೇ ಕವಿರತ್ನಂ
ಸನ್ನುತನೆಂದುರೆ ಬಿರುದಂ
ಚಿನ್ನದೆ 'ಕವಿಚೂತಚೈತ್ರ' ನೆನೆ ಬರೆದಿತ್ತರ್

ಬೇರೆಬೇರೆ ಕಾಲದಲ್ಲಿದ್ದ ಈ ಮೂವರು ಕವಿಗಳನ್ನು ಸಮಕಾಲೀನರನ್ನಾಗಿ ಮಾಡುವ ಈ ಪದ್ಯಗಳು ಅವರ ಕಾಲನಿರ್ಣಯಕ್ಕೆ ತಕ್ಕ ಸಾಧನಗಳಲ್ಲವೆಂದು ಇತ್ತೀಚಿನ ಶೋಧಗಳಿಂದ ಗೊತ್ತಾಗಿದ್ದರೂ ರಾಜಶೇಖರವಿಳಾಸವು ಪ್ರಚಾರವಾಗುವುದಕ್ಕಿಂತ ಮುಂಚೆ ಜಗನ್ನಾಥವಿಜಯವು ಬಹುಕಾಲ ಜನರ ಮೆಚ್ಚಿಗೆಯನ್ನು ಸಂಪಾದಿಸಿತ್ತೆಂದೂ ಮುಂದೆ ಜೈಮಿನಿಭಾರತಕ್ಕೆ ಆ ಪ್ರಶಸ್ತಿಯು ಬಂದಿತೆಂದೂ ಊಹಿಸುವುದಕ್ಕೆ ಪ್ರತಿಬಂಧಕವಾವುದೂ ಇರಲಾರದು. ಹೀಗೆ ರಾಜಶೇಖರ ವಿಳಾಸಕ್ಕೆ ದೊರೆತ ಪ್ರಶಸ್ತಿಯು ಇದು ವರೆಗೂ ಉಳಿದಿರುವುದೆನ್ನುವಲ್ಲಿ ಸಂದೇಹವಿಲ್ಲ.

**ಬಸವರಾಜವಿಜಯು** — ಇದಕ್ಕೆ ವೃಷಭೇಂದ್ರವಿಜಯವೆಂದು ರೂಢಿಯ ಹೆಸರು — ಎಂಬುದು ಷಡಕ್ಷರದೇವನ ಎರಡನೆಯ ಕನ್ನಡ ಕೃತಿ. ಚಂಪೂರೂಪವಾಗಿದೆ. ಇದರಲ್ಲಿ ೪೨ ಆಶ್ವಾಸಗಳೂ ೩೫೦೦ ಮೇಲ್ಪಟ್ಟ ಪದ್ಯಗಳೂ ಇರುವುವು. ವೀರಶೈವ ಮತಪ್ರಚಾರಕನಾದ ಬಸವಣ್ಣನ ಚರಿತ್ರೆಯಿದು. ಇದಕ್ಕೆ ಪಾಲ್ಕುರಿಕೆ ಸೋಮನಾಥ ಕವಿಯ ಆಂಧ್ರ ಬಸವಪುರಾಣವೂ ಆ ಗ್ರಂಥದ ಭೀಮಕವಿಯ ಕನ್ನಡ ಅನುವಾದವೂ ಶಂಕರಕವಿಯ ಸಂಸ್ಕೃತ ಭಾಷಾಂತರವೂ ಆಧಾರವಾಗಿವೆ. ಹರಿಹರದೇವನ 'ಉದಿತಮಾರ್ಗ'ವನ್ನು೨ ಲಕ್ಷ್ಯವಾಗಿಟ್ಟುಕೊಂಡು ಕನ್ನಡದಲ್ಲಿ ಕಾವ್ಯಗಳನ್ನು ರಚಿಸಿದ ಕವಿ ಆತನ ಬಸವದೇವರಾಜ ರಗಳೆಯನ್ನು ತನ್ನ ಕಾವ್ಯಕ್ಕೆ ಆಧಾರವಾಗಿ ಉಪಯೋಗಿಸಿಕೊಳ್ಳದೇ ಇರುವುದು — ಉಪಯೋಗಿಸಿದ ಲಕ್ಷಣಗಳು ವೃಷಭೇಂದ್ರವಿಜಯದಲ್ಲಿ ತೋರುವುದಿಲ್ಲವಾದುದರಿಂದ — ಆಶ್ಚರ್ಯಕರವೇ ಸರಿ.

೧ ಪಾಠಾಂತರ: ಶಾರದಾದ್ರುಹಿಣ. ೨ ರಾಜಶೇಖರವಿಳಾಸ : ಆ ೧, ಪ. ೬೯.

ಇವಕ್ಕೆ ಹರಿಹರನ ರಗಳೆಯಲ್ಲಿ ಪಡಿಮೂಡಿದ ಬಸವೇಶ್ವರನ ಚರಿತ್ರೆಗಿಂತಲೂ ಬಸವ ಪುರಾಣದಲ್ಲಿ ನಿರೂಪಿತವಾದ ಚರಿತ್ರೆಯು ಹೆಚ್ಚು ಉದಾತ್ತವಾಗಿದೆ-ಎಂದು ಕವಿಯು ಭಾವಿಸಿರಬೇಕೆಂಬ ಕಾರಣವನ್ನು ಹೇಳಬಹುದು; ಇಲ್ಲವೆ ಹರಿಹರನ ರಗಳೆಯೆ ಷಡಕ್ಷರದೇವನ ಕೈಗೆ ಬಿದ್ದಿರಲಿಕ್ಕಿಲ್ಲವೆಂಬ ಹೆಚ್ಚು ಸಂಭವನೀಯವಾದ ಕಾರಣ ವನ್ನೂ ಕೊಡಬಹುದು. ಪುರಾಣದ ಕಥಾವಸ್ತುವನ್ನೇ ಕವಿಯು ಅನುಸರಿಸಿದ್ದರೂ ಬಸವೇಶ್ವರನ ಪರಿಶುದ್ಧವಾದ ಚಾರಿತ್ರಕ್ಕೆ ಕುಂದಕವಾಗಬಹುದಾದ ಸನ್ನಿವೇಶಗಳನ್ನು ಅಲ್ಲಲ್ಲಿ ಮಾರ್ಪಡಿಸಿಕೊಂಡಿರುವುದು ಆತನ ಔಚಿತ್ಯಜ್ಞಾನದ ನಿದರ್ಶಕವಾಗಿದೆ. ಇಂತಹ ಮಾರ್ಪಾಡುಗಳನ್ನು ಕವಿಯು ಹಗುರಾಗಿ ಕಣ್ಣಿಗೆ ಒತ್ತದಂತಹ ರೀತಿಯಲ್ಲಿ ಸಾಧಿಸಿರುವುದು ಆತನ ಚಾತುರ್ಯದ ದ್ಯೋತಕವಾಗಿದೆ. ಈ ಕಾವ್ಯದಲ್ಲಿ ಪ್ರಾಸಂಗಿಕ ವಾಗಿ — ಆಗಂತುಕವಾಗಿ ಎಂದು ಹೇಳಿದರೂ ಹೇಳಬಹುದು — ಬರುವ ಹಲವು ಪುರಾತನ ಶಿವಶರಣರ ಚರಿತ್ರೆಗಳು ಕಾವ್ಯದ ಮುಖ್ಯ ವಿಷಯವಾದ ಬಸವೇಶ್ವರನ ಚರಿತ್ರೆಯ ಬೆಳವಣಿಗೆಗೆ ಪ್ರತಿಬಂಧಕವಾಗಿವೆಯೆಂದು ಹೇಳಬಹುದಾದರೂ ಈ ಕಥೆಗಳ ಮೂಲಕವಾಗಿಯೇ ಬಸವಚರಿತ್ರೆ ಪುರಾಣವಾಗಿ ಪರಿಣಮಿಸಿದೆಯೆಂಬ ತಿಳಿವಳಿಕೆಯಿಂದಲೂ ಇವುಗಳ ದೆಸೆಯಿಂದಲಾದರೂ ಇತರ ಶೈವರು ಈ ಕಾವ್ಯವನ್ನು ಓದಬಹುದೆಂಬ ಆಶೆಯಿಂದಲೂ ಕವಿಯು ಇವುಗಳನ್ನು ತನ್ನ ಕಾವ್ಯದಲ್ಲಿ ಸೇರಿಸಿರ ಬೇಕು. ಆದರೆ ಇವೆಲ್ಲವೂ ' ಒಂದಿದ ಶೃಂಗಾರಮದಲ್ಲವೊಂದೆ ರಸವೊಂಬತ್ತೆಯ್ದೊ ಡಂಬಟ್ಟುವೆ 'ಂಬಂತೆ ನಾನಾಬಗೆಯ ರಸಸೃಷ್ಟಿಗೆ ಎಡೆಗೊಟ್ಟಿರುವುದರಿಂದ ಒಂದೊಂದೂ ಒಂದು ದಿವ್ಯರತ್ನವಾಗಿರುವುದಲ್ಲದೆ ಎಲ್ಲವೂ ಮನಂಬುಗುವ ರೀತಿ ಯಲ್ಲಿ ನಿರೂಪಿತವಾಗಿರುವುದರಿಂದ ಈ ಕಾವ್ಯವು ಕಥನಕವನ (narrative poems)ಗಳ ಕಣಿಯಾಗಿದೆ ಎಂಬುದು ನಮಗೆ ಕಂಡು ಬರುವುದು. ರಾಜಶೇಖರ ವಿಳಾಸದಲ್ಲಿ ಕಂಡುಬರುವ ಶೃಂಗಾರದ ಅತಿರೇಕವಾಗಲಿ ಅಷ್ಟಾದಶವರ್ಣನೆಗಳ ಬಾಹುಲ್ಯವಾಗಲಿ ಈ ಕಾವ್ಯದಲ್ಲಿಲ್ಲ. ಈ ಕಾವ್ಯವನ್ನು ಬರೆಯ ತೊಡಗಿದಾಗ — ರಾಜಶೇಖರವನ್ನು ಬರೆದು ಇಪ್ಪತ್ತು ವರ್ಷಗಳಾಗಿ ಹೋದುದರಿಂದ — ಕವಿಯು ಮಧ್ಯಮವಯಸ್ಕನಾಗಿರಬಹುದು; ಆದುದರಿಂದ ವಯೋಧರ್ಮಕ್ಕನುಸಾರ ವಾಗಿಯೂ ಆಗಿನ ಮನೋವೃತ್ತಿಯ ಪರಿಣಾಮವಾಗಿಯೂ ಕವಿಯು ತನ್ನ ಪ್ರಬಲ ಭಾವನೆಯ ರೆಕ್ಕೆಗುದುರೆಯನ್ನು ಸ್ವೇಚ್ಛಾವಿಹಾರಮಾಡಲು ಬಿಡದೆ ಕಡಿವಾಣದ ಹಿಡಿತದಲ್ಲಿ ತಡೆದಿರಬೇಕೆಂದು ಊಹಿಸಿದರೆ ತಪ್ಪಾಗಲಿಕ್ಕಿಲ್ಲ. ಅಲ್ಲದೆ ಕಥಾವಸ್ತುವಿನ ಗಾಂಭೀರ್ಯವೂ ಕವಿಯ ಈ ಮನೋವೃತ್ತಿಗೆ ಅನುಕೂಲವಾಗಿತ್ತೆಂಬುದಕ್ಕೆ ಸಂದೇಹವಿಲ್ಲ. ಈ ಕಾವ್ಯದಲ್ಲಿ ಕವಿಯು ಸಂಸ್ಕೃತದ ' ಮಾರ್ಗ 'ದೊಡನೆ ಕನ್ನಡದ ' ದೇಶಿ 'ಯ ಹಿತವಾದ ಬೆರಕೆಯನ್ನು ಮಾಡಿರುವುದರಿಂದ ಉಂಟಾದ ಶೈಲಿಯು ಬಹು ರಮಣೀಯವಾಗಿದೆ. ಒಟ್ಟಿನಲ್ಲಿ ವೃಷಭೇಂದ್ರವಿಜಯವು ಷಡಕ್ಷರದೇವನ ಕೃತಿಗಳಲ್ಲೆಲ್ಲ ಶ್ರೇಷ್ಠವಾದುದೆಂದು ನಿರ್ಣಯಿಸಬಹುದಲ್ಲದೆ ಕನ್ನಡ ಸಾಹಿತ್ಯದಲ್ಲಿಯು

ಶ್ರೇಷ್ಠವರ್ಗದ ಕಾವ್ಯಗಳಲ್ಲಿಯೂ ಇದೊಂದು ಎಂದು ಪರಿಗಣಿಸಬಹುದು. ಸಾಹಿತ್ಯ ಪ್ರೇಮಿಗಳಲ್ಲಿ ಇದಕ್ಕೆ ಯೋಗ್ಯ ಪುರಸ್ಕಾರ ಇನ್ನೂ ದೊರೆತಿಲ್ಲ; ದೊರೆಯುವುದು ಅವಶ್ಯವಿದೆ.

( ೩ )

ಪ್ರಕೃತ ಗ್ರಂಥವಾದ **ಶಬರಶಂಕರವಿಳಾಸವು** ಷಡಕ್ಷರದೇವನ ಕನ್ನಡ ಕೃತಿಗಳಲ್ಲಿ ಮೂರನೆಯದು. ಇದೂ ಚಂಪೂರೂಪವಾಗಿದೆ. ಇದರಲ್ಲಿ ಒಟ್ಟಿಗೆ ೪೬೭ ಪದ್ಯಗಳು ಮಾತ್ರ ಇರುವುದರಿಂದ — ರನ್ನನ ಗದಾಯುದ್ಧ, ಜನ್ನನ ಯಶೋಧರ ಚರಿತೆ, ಆಂಡಯ್ಯನ ಕಬ್ಬಿಗರ ಕಾವ ಇವುಗಳೊಂದಿಗೆ — ಕನ್ನಡದಲ್ಲಿ ವಿರಳವಾದ ಲಘುಕಾವ್ಯಗಳ ಮಾಲಿಕೆಯಲ್ಲಿ ಇದೂ ಒಂದು ಸೇರತಕ್ಕುದಾಗಿದೆ. ಈ ಕಾವ್ಯದ ಕಥಾವಸ್ತು ಸುಪ್ರಸಿದ್ಧವಾದುದು; ಮಹಾಭಾರತದ ಅಕ್ಷಯ ಭಾಂಡಾಗಾರದಿಂದ ಎತ್ತಿಕೊಂಡುದು.[೧] ಸಂಸ್ಕೃತಸಾಹಿತ್ಯದಲ್ಲಿ ಅರ್ಥಗೌರವಕ್ಕಾಗಿ ಪ್ರಸಿದ್ಧನಾದ ಭಾರವಿಕವಿ ಈ ವಸ್ತುವಿನ ಆಧಾರದ ಮೇಲೆ ಹದಿನೆಂಟು ಆಶ್ವಾಸಗಳ ಮಹಾಕಾವ್ಯವನ್ನೆ ಕಟ್ಟಿದ್ದಾನೆ. ಶಬರಶಂಕರವಿಳಾಸಕ್ಕಿಂತ ಮೊದಲು ಕನ್ನಡದಲ್ಲಿ ಈ ಕಥಾವಿಷಯವು ಆದಿಪಂಪನ ವಿಕ್ರಮಾರ್ಜುನವಿಜಯ[೨], ವಿರೂಪಾಕ್ಷ ಪಂಡಿತನ ಚೆನ್ನಬಸವಪುರಾಣ[೩] ಇವುಗಳಲ್ಲಿ ಪ್ರಾಸಂಗಿಕವಾಗಿ ಬಂದಿದೆ; ಅಲ್ಲದೆ ಕುಮಾರವ್ಯಾಸನ ಕರ್ಣಾಟಕ ಮಹಾಭಾರತದಲ್ಲಿರುವುದಂತೂ ಸರಿಯೆ.[೪]

ಶಬರಶಂಕರವಿಳಾಸದಲ್ಲಿ ಬಂದ ತೆರದಲ್ಲಿ ಈ ಕಥೆಯನ್ನು ಇಲ್ಲಿ ಸಂಕ್ಷೇಪವಾಗಿ ನಿರೂಪಿಸುವೆವು :

(೧ನೆಯ ಆಶ್ವಾಸ) ಸಾಗರಪರಿವೃತವಾದ ಕನಕಾಚಲವು ' ವಿಶ್ವಕಥೀಶ್ವರಸು ಉಮೇಶನೇ ' ಎಂದು ಬಿದಿ ಶಾಸನವನ್ನು ಬರೆದಿಟ್ಟು ನಟ್ಟ ಮಿಸುನಿಗಂಬದಂತೆ ನಿಂತಿರುವುದು. ಖಚರರ ಹಲವು ಲೀಲಾವಿಲಾಸಗಳಿಗೆ ಇಂಬುಗುಡುವ ನಂದನಾವಳಿಗಳು ಅದರ ತಟದಲ್ಲಿರುವುವು. ಆ ಪರ್ವತದ ಅಗ್ರದಲ್ಲಿ ಅಷ್ಟಭೈರವರ ಕಾಪಿನ ಸೀಮೆಯಿಂದೊಳಗೆ ಸಕಲವೈಭವದಿಂದ ಮೆರೆಯುತ್ತಿದೆ ಶಿವನ ರಾಜಧಾನಿ. ಅಲ್ಲಿ ಉಚಿತಸ್ಥಾನದಲ್ಲಿ ವಿಸ್ತೀರ್ಣವಾದ ಓಲಗಸಾಲೆ; ಅದರ ಮಧ್ಯದಲ್ಲಿ ಮಹಾ ಆಸ್ಥಾನ; ಅದರಲ್ಲಿಯ ಪದ್ಮಪೀಠದಲ್ಲಿ ಮಹಾಬಿಂದುವೆಂಬ ಮೆಲ್ವಸೆಯಲ್ಲಿ ವರಾಭಯಶೂಲಮೃಗಾಂಕಹಸ್ತನಾಗಿ ತೊಡೆಯಮೇಲೆ ವಿರಾಜಿಸುವ ಗಿರಿಜೆಯೊಡನೆ ಪರಶಿವನು ಗಾಡಿಯಿಂದ ಮಂಡಿಸಿದ್ದಾನೆ. ಓಲಗದ ಎಡಬಲಮುಂಗಡೆಗಳಲ್ಲಿ ಕೋಟ್ಯನುಕೋಟಿ ಬ್ರಹ್ಮಾಚ್ಯುತೇಂದ್ರಾದಿ ದೇವತೆಗಳು, ಅವರವರ

೧ ಮಹಾಭಾರತ : ವನಪರ್ವ : ಅಧ್ಯಾಯ ೩೫ ರಿಂದ ೪೦. ೨ ಆ ೬, ಪ. ೬೨ ರಿಂದ ಆ ೮, ಪ. ೨೬ರ ವರೆಗೆ. ೩ ಕಾಂಡ ೪, ಸಂ. ೧೩, ಪ. ೧ ರಿಂದ ೬೯ರ ವರೆಗೆ. ೪ ಅರಣ್ಯಪರ್ವ : ಸಂ. ೫ ರಿಂದ ೬ರ ಕೊನೆಯ ವರೆಗೆ.

ಪತ್ನಿಯರು, ಗಣಸಮೂಹ, ಸಪ್ತಮಾತೃಕೆಯರೇ ಮುಂತಾದ ದೇವತಾಸ್ತ್ರೀಯರು ಸ್ಥಾನಮಾನ್ಯವನ್ನರಿತು ಕುಳಿತಿದ್ದಾರೆ. ನೃತ್ಯವಾದ್ಯಸಂಗೀತಾದಿ ಕಳಕಳವು ಸಭೆಯನ್ನು ತೀವಿದೆ.

(೨ನೆಯ ಆಶ್ವಾಸ) : ಆಗ ತಪಸ್ವಿಗಳ ತಂಡವೊಂದು ತವಕದಿಂದ ಶಿವನ ಓಲಗಕ್ಕೆ ಪರಿತಂದು ದಂಡಪ್ರಣಾಮಮಾಡಿ ಕೈಮುಗಿದು ಈಶ್ವರಸ್ತೋತ್ರಮಾಡುವುದು. ತನ್ನ ಹಲವು ಲೀಲೆಗಳನ್ನು ನೆನೆದು ಮಾಡಿದ ಅವರ ಸಂಸ್ತವಕ್ಕೆ ಈಶ್ವರನು ಸಂತಸಬಟ್ಟು, ' ನಿಮ್ಮ ತಪೋವನ ಆವ ಗಿರಿಯಲ್ಲಿದೆ ? ಬಂದ ಕಾರಣವೇನು, ಹೇಳಿ 'ರೆಂದು ಅರಿತೂ ಅರಿಯದವನಂತೆ ಕೇಳಿದುದಕ್ಕೆ ಅವರು : " ಇಂದ್ರಕೀಲವೆಂಬ ಪರ್ವತವು ಮುನಿಗಳ ಬೀಡು, ಮುಕ್ತಿಯ ತವರ್ಮನೆಯಾಗಿ ಎಸೆಯುತ್ತಿರುವುದು. ಅಲ್ಲಿ ಪವಿತ್ರವಾದೊಂದು ತಪೋವನದಲ್ಲಿ ಹಲವು ತಪಸ್ವಿಗಳೂ ಶುಕ ಶಾಂಡಿಲ್ಯಾದಿ ಮಹಾಮುನಿಗಳೂ ಸದಾ ಮೃಡಧ್ಯಾನಾಸಕ್ತರಾಗಿ ತಪಸ್ಸು ಮಾಡುತ್ತಿರುವರು. ಹೀಗಿರುವಲ್ಲಿ ಒಂದು ದಿನ ಕಿರೀಟ, ಬಿಲ್ಲು, ಬತ್ತಳಿಕೆ ಮೊದಲಾದುವುಗಳನ್ನು ಧರಿಸಿಕೊಂಡ ಭದ್ರಾಕಾರದ ಅಪೂರ್ವವಿಭ್ರಮದ ಸುಂದರ ಯುವಕನೊಬ್ಬನು ತಪೋವನವನ್ನು ಹೊಕ್ಕು ತೀರ್ಥೋದಕವನ್ನು ಮಿಂದು ಶೈವವ್ರತವನ್ನು ಕೈಕೊಂಡು ಸಮೀಪದ ಒಂದು ತಳಿತ ಬಿಲ್ವವೃಕ್ಷದ ಕೆಳಗೆ ನಿಲ್ಲಲು — ತಪಸ್ಸು ಮಾಡಲು ಇದೇ ಉಚಿತಸ್ಥಾನವೆಂದು ಆಕಾಶವಾಣಿಯಾದುದರಿಂದ— ಅಲ್ಲಿಯೆ ತಪಸ್ಸುಮಾಡಲಾರಂಭಿಸಿದನು. ಆಗ ದೇವೇಂದ್ರನು ಬ್ರಾಹ್ಮಣ ವೇಷದಲ್ಲಿ ಅಲ್ಲಿಗೆ ಬಂದು, 'ಇದೇನು ನಿನ್ನ ವಿಚಿತ್ರ ವೇಷ? ಒಂದೆಡೆ ವಿಭೂತಿ ರುದ್ರಾಕ್ಷಿ ಜಪಮಾಲೆಯ ಶಾಂತಿಸಮುನ್ನಿತ ಸ್ಥಿತಿ, ಇನ್ನೊಂದೆಡೆ ಬೆನ್ನ ಬಿಲ್ಲು-ಬತ್ತಳಿಕೆ, ಕಯ್ಯ ಕೂರಸಿ, ಭೀಕರಾಕಾರ ? ನಿನ್ನಂತಹ ತಪಸ್ವಿಯನ್ನು ನಾನು ನೋಡಲೇ ಇಲ್ಲ' ಎಂದು ವಿಡಂಬನೋಕ್ತಿಗಳನ್ನಾಡಿದುದಕ್ಕೆ ಆ ತಪಸ್ವಿಯು ' ಹೊರವೇಷ ಎಂತಹದೆ ಇರಲಿ, ಮಾನಸಾಬ್ಜದಲ್ಲಿ ಶಿವನಡಿಗಳನ್ನು ಜಾನಿಸುತ್ತ ಆತನನ್ನು ಮೆಚ್ಚಿಸುವೆನು ' ಎಂದನು. ಇಂದ್ರನು — ' ಎಂತೆಂತಹ ತಪಸ್ವಿಗಳಿಗೇ ಒಲಿಯದ ಪರಶಿವನು ಮುನ್ನೆಂದೂ ತಪವರಿಯದ ನಿನಗೆ ಹೇಗೆ ಒಲಿಯುವನು ? ' ಎಂದು ಕೇಳಿದನು. ಅದಕ್ಕೆ ಆ ತಪಸ್ವಿಯು ' ತಪಸ್ವಿಗಳಿಗೆ ದುರ್ಲಭನಾವರೂ ಶಿವನು ಭಕ್ತಿಸಂಧಾನಕ್ಕೆ ಸುಲಭನಾಗಿದ್ದಾನೆ. ಘನತಪವೆಸಗಿ ಆತನನ್ನು ಮೆಚ್ಚಿಸುವೆನು; ಇಲ್ಲವೆ ಹರಣವನ್ನು ತೊರೆಯುವೆನು ' ಎಂದು ಪೂಣ್ದು ನುಡಿದುದಕ್ಕೆ ದೇವೇಂದ್ರನು ಪ್ರೀತನಾಗಿ, ತನ್ನ ನಿಜರೂಪುದೋರಿ ಹರಸಿ ಸ್ವರ್ಗಕ್ಕೆ ಹೋದನು. ಇತ್ತ ಆ ತಪಸ್ವಿಯು ಏಕಾಗ್ರತೆಯಿಂದ ಶಿವಧ್ಯಾನ ತತ್ಪರನಾದನು. ಆಹಾರಸೇವನೆಯನ್ನು ಕ್ರಮೇಣ ಕಡಿಮೆ ಮಾಡುತ್ತ ನಾಲ್ಕು ತಿಂಗಳ ಬಳಿಕ ವಾಯುಸೇವನೆ ಮಾತ್ರ ಮಾಡತೊಡಗಿದ್ದಾನೆ. ಆತನ ಉಗ್ರತಪಸ್ಸಿನ ಮೂಲಕವಾಗಿ ತಪೋವನದ ತಾಪಸರಾದ ನಮ್ಮೆಲ್ಲರ ಶಾಂತಿ ಭಂಗವಾಗಿ ಹೋಗಿದೆ; ತಪಸ್ಸು ಮಾಡುವುದಕ್ಕೆ ಶಕ್ತಿಯೇ ಇಲ್ಲದಾಗಿದೆ. ನಿನ್ನ

ಚಿಂತನೆಯನ್ನೆ ಮಾಡುವ ನಮ್ಮನ್ನು ರಕ್ಷಿಸುವುದು. ಆ ತಪಸ್ವಿಯನ್ನು ಆ ಗಿರಿತಟದಿಂದ ಹೋಗಿಸಬೇಕು, ಇಲ್ಲವೆ ನಮಗೆ ಬೇರೊಂದೆಡೆ ಕೊಟ್ಟು ಕಾಪಾಡಬೇಕು" ಎಂದು ಮೊರೆಯಿಡುವರು. ಶಿವನು 'ಅಂಜಬೇಡಿರಿ, ಆ ತಪಸ್ವಿಯು ಇಂದ್ರನಂದನನಾದ ಅರ್ಜುನನು. ವೇದವ್ಯಾಸರು ಇಂದ್ರಕೀಲದಲ್ಲಿ ತಪಸ್ಸುಮಾಡಿ ಈಶ್ವರನನ್ನು ಮೆಚ್ಚಿಸಿ ಪಾಶುಪತಾಸ್ತ್ರವನ್ನು ಪಡೆದು ರಿಪುಸಂಹಾರ ಮಾಡೆಂದು ಉಪದೇಶಿಸಿದುದರಿಂದ ತಪವ ಕೈಕೊಂಡಿದ್ದಾನೆ. ಆತನ ಅಭೀಷ್ಟವನ್ನು ಸಲಿಸಿ ನಿಮ್ಮನ್ನು ರಕ್ಷಿಸುವೆನು' ಎಂದು ಅವರನ್ನು ಕಳುಹಿಸುವನು.

(೩ನೆಯ ಆಶ್ವಾಸ): ಭಕ್ತನಾದ ಅರ್ಜುನನ ಹಿತಾರ್ಥವಾಗಿ ಈಶ್ವರನು ಬೇಂಟೆಯ ಉಜ್ಜುಗವನ್ನು ಕೈಕೊಂಡು ಅದಕ್ಕೆ ಅನುರೂಪವಾದ ಕಿರಾತವೇಷವನ್ನು ಧರಿಸುವನು; ಪಾರ್ವತಿ ಪುಳಿಂದಿಯ ವಿಳಾಸ ತಾಳುವಳು. ಆಕೆಯ ಪರಿವಾರದವರಾದ ನಾನಾಶಕ್ತಿಯರೂ ದೇವಸ್ತ್ರೀಯರೂ ಬೇಡಿತಿಯರಾಗುವರು. ಶಿವನ ಮೇಳದವರಾದ ಗಣಾಳಿ ರುದ್ರತತಿ ಮುಂತಾದುವು ಬೇಡಪಡೆಯಾಗುವುವು. ಇವರೆಲ್ಲರನ್ನು ಒಡಗೊಂಡು ಬೇಂಟೆಯ ಸರ್ವಸನ್ನಾಹದೊಂದಿಗೆ ಶಿವನು ಇಂದ್ರಕೀಲಪರ್ವತಕ್ಕೆ ನಡೆತರುವನು. ಅಲ್ಲಿಯ ವನ್ಯಮೃಗಂಗಳ ಬೇಂಟೆಯಾಡುತ್ತ ಬೇಡವಡೆ ಮುಂದೆ ನಡೆಯುತ್ತಿರಲು ಒಂದು ಮಂದಾರವೃಕ್ಷದ ನೆಳಲಲ್ಲಿ ಚಂದ್ರಕಾಂತ ಶಿಲೆಯ ಮೇಲೆ ವಿಶ್ರಮಿಸಿ, ಪಾರ್ವತಿದೇವಿ ಆತನಿಗೆ ತಾಳವೃಂತದಿಂದ ಗಾಳಿ ಬೀಸುತ್ತ ಬಳಿ ನಿಂತಿರಲು, ಬೇಂಟೆಯ ಹೊಸಪರಿಯನ್ನು ನೋಡುತ್ತಿರುವನು.

(೪ನೆಯ ಆಶ್ವಾಸ): ಆ ಸಮಯದಲ್ಲಿ ಆ ಗಿರಿಯ ಕಂದರದಲ್ಲಿ ವಾಸಿಸುತ್ತಿದ್ದ ಮೂಕದಾನವನೆಂಬ ರಕ್ಕಸನು ಬೇಂಟೆಯ ಕಳವಳವನ್ನು ಕೇಳಿ ಮಹಾವರಾಹರೂಪದಿಂದ ಹೊರಕ್ಕೆ ಬರುವನು. ಭಯಂಕರಾಕಾರದ ಆ ಹಂದಿಯನ್ನು ನೋಡಿ, 'ಕುಟ್ಟು, ತಿವಿ, ಕೊಲ್ಲು' ಎಂದು ಒದರುತ್ತ ಬೇಡರು ಅದನ್ನು ಕವಿಯಲು, ಅವರನ್ನು ಆ ಹಂದಿ ಘನರೋಷದಿಂದೆ ತುಡುಕಿ ಮೇಲ್ವಾಯ್ದು ಅಳವಿನೊಳಗೆ ಸಿಕ್ಕವರನ್ನೆಲ್ಲ ಸೀಳತೊಡಗುವುದು. ಅದರ ಅಸಮಸಮರಾಟೋಪವನ್ನು ಸೈರಿಸಲಾರದೆ ಬೆಂಗೊಟ್ಟೋಡುವ ಅಮರವ್ಯಾಧರನ್ನೂ ಅವರ ಸ್ತ್ರೀಯರನ್ನೂ ಈಶ್ವರನು ಕಂಡು ಕಾರಣವನ್ನು ತಿಳಿದು ಅಭಯಹಸ್ತವೆತ್ತಿ ಅವರನ್ನು ನಿಲ್ಲಿಸಿ, ಅವರನ್ನು ಅಟ್ಟಿಕೊಂಡು ಬರುತ್ತಿದ್ದ ಹಂದಿಯನ್ನು ದಿವ್ಯಬಾಣದಿಂದ ಎಸೆಯುವನು. ಆ ಬಾಣದ ಹೊಡೆತಕ್ಕೆ ಆ ಹಂದಿ ಮೂರ್ಛೆಹೋಗಿ ನೆಲಕ್ಕೆ ಬಿದ್ದು ಮತ್ತೆ ಚೇತರಿಸಿಕೊಂಡು ಅರ್ಜುನನು ತಪವಿದ್ದಲ್ಲಿಗೆ ಓಡುವುದು. ಈ ಅಬ್ಬರವನ್ನು ಕೇಳಿ ಅರ್ಜುನನು ಕಣ್ತೆರೆದು ನೋಡಿ ಮುಂದಿದ್ದ ಭೀಕರಾಕೃತಿಯ ಹಂದಿಯನ್ನು ಕಂಡು ಬನದ ತಪಸ್ವಿಗಳಿಗೆ ಸಂಕಟವನ್ನು ಮಾಡಬಹುದೆಂದು ಬಗೆದು, ಗಾಂಡೀವದಲ್ಲಿ ಬಾಣವನ್ನು ಹೂಡಿ ಅದನ್ನು ಹೊಡೆದು ನೆಲಕ್ಕುರುಳಿಸುವನು. ಅಷ್ಟರಲ್ಲಿ ಅದರ ಬೆನ್ನನೆ ಬರುತ್ತಿದ್ದ ಈಶ್ವರನು 'ಈ ಹಂದಿ ನಮ್ಮದು, ತೆಗೆದುಕೊಳ್ಳಿರಿ' ಎಂದು ತನ್ನ ಭೂತಗಣಕ್ಕೆ ಹೇಳಲು,

ಅರ್ಜುನನು ಕೆರಳಿ 'ಇದು ನನ್ನ ಬಾಣದಿಂದ ಉರುಳಿದೆ, ಮುಟ್ಟದಿರು. ಎಲೈ ಬೇಡ, ನಿನ್ನ ಸಾಹಸವನ್ನು ಮೊಲ, ಹುಲ್ಲೆ ಮುಂತಾದವುಗಳಲ್ಲಿ ತೋರಿಸು; ಅತುಲ ಪರಾಕ್ರಮಿಯಾದ ನನ್ನಲ್ಲಿ ಅದು ನಡೆಯಲಾರದು' ಎನ್ನುವನು. ಈಶ್ವರನು (ಆತನ ಧೈರ್ಯಶೌರ್ಯಗಳನ್ನು ಬಳಿಯ ಪಾರ್ವತಿಗೆ ಕಣ್ಸನ್ನೆಯಲ್ಲಿಯೆ ತೋರಿಸುತ್ತ) ನಸುನಕ್ಕು 'ನಿನ್ನ ಶೌರ್ಯ ಹಾಗಿರಲಿ, ನಿನ್ನ ಖಡ್ಗ ಧನು ಶರ ಎತ್ತ, ನಿನ್ನ ತಪವೆತ್ತ, ವಿಚಿತ್ರವಲ್ಲವೆ?' ಎನ್ನಲು, ಅರ್ಜುನನು 'ನನ್ನ ತಪದ ಚಿಂತೆ ನಿನಗೇಕೆ? ತಪಸ್ವಿಗಳಲ್ಲಿ ಶ್ರೇಷ್ಠನಾದ ಮೃಡನೆ ಈ ವೇಷದಲ್ಲಿದ್ದಾನೆ, ಆತನ ಶಿಷ್ಯನಾದ ನನಗೆ ಇದು ಒಪ್ಪುವುದಿಲ್ಲವೆ? ನೀನು ನನ್ನೊಡನೆ ಸಮರಕ್ಕೆ ಸಮಾನನಲ್ಲ; ಧೀರನಾವನನ್ನಾದರೂ ಕರೆ' ಎನ್ನುವನು. ಈಶ್ವರನು 'ನಿನ್ನ ತಪೋನೀತಿ ಏನಾದರೇನು? ನಿನ್ನ ಧನುರ್ವಿದ್ಯೆಯನ್ನಷ್ಟು ನೋಡೋಣ, ನನ್ನಲ್ಲಿ ತೋರಿಸು' ಎಂದು ಮೂದಲಿಸಲು, ಅರ್ಜುನನು ಕೋಪದಿಂದ ಶಿವನಮೇಲೆ ಅಸಂಖ್ಯ ಬಾಣಗಳನ್ನು ಸುರಿಸುವನು. ಶಿವನು ಅವನ್ನೆಲ್ಲ ತುಂಡರಿಸಿ ಬಿಡಲು, ಅರ್ಜುನನು 'ಎಲೈ ಶಬರ, ನಿನ್ನ ಬಿಲ್ಲಾಳ್ತನ ಹೊಗಳತಕ್ಕುದು' ಎಂದು ಪ್ರಶಂಸಿಸಿ ಮತ್ತೆ ಬಾಣಗಳ ಮಳೆಗರೆಯುವನು. ಈಶ್ವರನು ಅವೆಲ್ಲವನ್ನು ಕಡಿದೊಗೆಯುವನು. ಬಾಣಗಳೆಲ್ಲ ತೀರಲು ಅರ್ಜುನನು ಕೋಪದಿಂದ ಗಾಂಡೀವದಿಂದಲೆ ಶಿವನನ್ನು ಹೊಯ್ಯಲೆತ್ತುವಲ್ಲಿ ಶಿವನು ಆ ಬಿಲ್ಲನ್ನೇ ಸೆಳೆದುಕೊಂಡುಬಿಡುವನು. ಇದರಿಂದ ತನ್ನ ಕೈ ಬರಿದಾದರೂ ಪಾರ್ಥನು ಹಿಂಜರಿಯದೆ ಕೋಪೋದ್ರೇಕದಿಂದ ಶಿವನ ಮೇಲೆ ಕಲ್ಲುಗುಂಡುಗಳನ್ನು ಸೂಡ ತೊಡಗುವನು. ಅವನ್ನೂ ಈಶ್ವರನು ಬಾಣದಿಂದ ಕಡಿದೊಗೆದು, 'ಎಲೆ ಗೊರವ, ಬಿಲ್ಲು ಬಾಣಗಳನ್ನೆಲ್ಲ ಕಳೆದುಕೊಂಡೆ. ನಿನ್ನ ಛಲ-ಬಲಗಳೆಲ್ಲ ನಾಶವಾದುವು. ಬೇರೆ ಬಾಣಗಳಿದ್ದರೆ ತೆಗೆದುಕೊಂಡು ಬಾ. ಇಲ್ಲದಿದ್ದರೆ ಇಲ್ಲವೆಂದು ಹೇಳು, ನಾವೇ ಕೊಡುತ್ತೇವೆ' ಎಂದು ಕೆಣಕಲು, ಅರ್ಜುನನು 'ಇಷ್ಟೇಕೆ ಉಬ್ಬಟೆ? ಪುಳಿಂದ, ಆಯುಧಗಳಿಂದ ಮಾಡುವ ಯುದ್ಧವು ನಿಲ್ಲಲಿ. ಮುಷ್ಟಿಯುದ್ಧಕ್ಕೆ ಬಾ. ನನ್ನ ಶೌರ್ಯವನ್ನು ತೋರಿಸುವೆನು. ನಿನ್ನ ಬೇಡಪಡೆ ನೋಡಲಿ' ಎಂದು ಆಹ್ವಾನಿಸುವನು. ಈಶ್ವರನು ಆತನ ಸಾಹಸವನ್ನು ಪಾರ್ವತಿಯ ಮುಂದೆ ಹೊಗಳಿ, ಮುಷ್ಟಿಯುದ್ಧಕ್ಕೆ ಸನ್ನದ್ಧನಾಗುವನು. ಇಬ್ಬರೂ ಭುಜಸ್ಫಾಲನಮಾಡಿ, ಒಬ್ಬರನ್ನೊಬ್ಬರು ಕಡಂಗಿ ತುಡುಕುವರು. ಒಬ್ಬರನ್ನೊಬ್ಬರು ತಿವಿಯುವುದೂ ಹೊಡೆಯುವುದೂ ಗುರಿಯಿಟ್ಟ ಹೊಡೆತ ತಪ್ಪಿಸಿಕೊಳ್ಳುವುದೂ — ಹೀಗೆ ತಮ್ಮ ತಮ್ಮ ಕೈಚಳಕವನ್ನು ತೋರಿಸುತ್ತ ಕೆಲಹೊತ್ತು ಕಾದಿ, ಒಬ್ಬರನ್ನೊಬ್ಬರು ಹೊಗಳಿ ಕೊನೆಗೆ ಅರ್ಜುನನು ಸಿಡಿಲಿನಂತೆ ಈಶ್ವರನಮೇಲೆ ಎರಗುವನು. ಆತನ ಅಬ್ಬರವನ್ನು ಸೈರಿಸಿ ಈಶ್ವರನು ಅವನನ್ನು ಮೆಟ್ಟಲು ಅರ್ಜುನನ ಬಾಯಿಂದಲೂ ಮೂಗಿನ ಎರಡು ಕಡೆಯಿಂದಲೂ ನೆತ್ತರು ಒಗುವುದು. ಅದನ್ನು ನೋಡಿ ಈಶ್ವರನು ಮರುಗಿ ಕೆಯ್ತೆಗೆದು ನಿಲ್ಲುವನು. ಅರ್ಜುನನ ಧೈರ್ಯ-ಬಿಂಕ ಎಲ್ಲಾ ಮಾಯವಾಗುವುವು. ಸೋತೆನೆಂಬ ದುಃಖವು ಅವನನ್ನು ಆವರಿಸುವುದು. ಬೇಡನೊಬ್ಬನು ತನ್ನಿಂದ ಅಗ್ಗಳಿ

ಸಿದನೆಂಬ ಚಿಂತೆಯಿಂದ ಹಂಬಲಿಸುತ್ತ ಈ ಬಗೆಯ ಅಪಮಾನವು ತನಗೆ ಬಂದುದು ಶಿವನ ಮರವೆಯಿಂದ ಎಂದು ಬಗೆದು — ಶಿವನ ಕೃಪೆ ಪಡೆಯುವುದಕ್ಕೆಂದು ಶಿವಾಗಮೋಕ್ತ ವಿಧಿಯಿಂದ ಮಣಲ ಲಿಂಗವನ್ನು ಮಾಡಿ ಹಲವು ಹೂವುಗಳನ್ನು ಅದಕ್ಕೆ ಧರಿಸಿ ಪೂಜೆಮಾಡಿ, ಭಕ್ತನಾದ ತನಗೆ ರಿಪುಜಯವನ್ನು ಕೊಟ್ಟು ರಕ್ಷಿಸೆಂದು ಪ್ರಾರ್ಥಿಸಿ, ಶಬರನಿಗೆ ಅಭಿಮುಖನಾಗಿ 'ಇನ್ನು ನಿನ್ನ ಶಕ್ತಿಯನ್ನು ನೋಡೋಣ, ಶಿವನ ಕೃಪೆಯಾಗಿದೆ ಎನಗೆ. ನಿನ್ನನ್ನೂ ನಿನ್ನ ರಕ್ಷಣೆಗೆ ಬರುವವನನ್ನೂ ಈ ಕ್ಷಣಾರ್ಧದಲ್ಲಿ ಸದೆಯುವೆನು' ಎಂದು ಭುಜ ತಟ್ಟುತ್ತ ಆತನನ್ನು ನೋಡುವಲ್ಲಿ ತಾನು ಮಣಲ ಲಿಂಗದ ಮೇಲೆ ಏರಿಸಿದ ಹೂಗಳು ಆತನ ತಲೆಯ ಮೇಲೆ ಇದ್ದುದನ್ನು ಕಂಡು ವಿಸ್ಮಿತನಾಗುವನು. ಇದನ್ನು ಇನ್ನೊಮ್ಮೆ ಪರೀಕ್ಷೆ ಮಾಡಬೇಕೆಂದು ಬೇರೆ ಹೂಗಳನ್ನು ತಂದು ಲಿಂಗದ ತಲೆಯ ಮೇಲೆ ಮತ್ತೆ ಸೂಡಿ ಪೂಜಿಸಿ ಶಬರನನ್ನು ನೋಡಲು, ಆ ಹೂಗಳೂ ಆತನ ತಲೆಯ ಮೇಲೆ ಇದ್ದುದನ್ನು ಕಂಡು ಈತನೆ ಪರಶಿವನೆಂದು ನಿಶ್ಚಯಿಸಿ, ತನ್ನ ಮರುಳ್ತನಕ್ಕೆ ತನ್ನನ್ನೆ ಬಹುವಾಗಿ ಹಳಿದುಕೊಂಡು, ಭಯಭಕ್ತಿಪರವಶನಾಗಿ ಪರಶಿವನೊಡನೆ ಸೆಣಲೆಳಸಿದ ತನ್ನ ಉದ್ಧತ ವೃತ್ತಿಗೆ ಪಶ್ಚಾತ್ತಾಪಪಟ್ಟು, ತನ್ನ ಅನುಗ್ರಹಾರ್ಥವಾಗಿಯೆ ಶಿವನು ಈ ವೇಷದಲ್ಲಿ ಬಂದಿರುವನೆಂದು ತಿಳಿದು ಆತಂಗೆ ಸಾಷ್ಟಾಂಗವೆರಗಿ ಕ್ಷಮಿಸಲು ಬೇಡಿಕೊಳ್ಳುವನು. ಶಿವನು ಅವನನ್ನು ಸಂತೈಸಿ ತನ್ನ ನಿಜರೂಪುದೋರುವನು.

(೫ನೆಯ ಆಶ್ವಾಸ): ಪಾರ್ಥನು ಆನಂದಪರವಶನಾಗಿ ಹರನನ್ನು ಪಲವಂದದಿಂದ ನುತಿಸಿ ತನ್ನ ಅಪರಾಧವನ್ನು ಕ್ಷಮಿಸೆಂದು ಮತ್ತೊಮ್ಮೆ ಬೇಡಿಕೊಳ್ಳುತ್ತಿರಲು ಶಿವನು ಆತನನ್ನು ಅಪ್ಪಿಕೊಂಡು 'ನಿನ್ನ ಕಟೋಕ್ತಿಗಳೆ ಮಂತ್ರ, ನಿನ್ನ ಶರಗಳೆ ಹೂಗಳು, ನಿನ್ನ ಮುಷ್ಟಿಯುದ್ಧವೇ ನನ್ನ ಪಾದಪೂಜೆ, ನಾನು ನಿನ್ನ ಭಕ್ತಿಗೆ ಸಂಪ್ರೀತನಾಗಿದ್ದೇನೆ. ನಿನ್ನ ಅಭೀಷ್ಟವೇನು?' ಎಂದು ಕೇಳಲು, 'ಸಮಸ್ತ ರಿಪುವೃಂದವನ್ನು ಗೆಲ್ಲುವುದಕ್ಕಾಗಿ ಪಾಶುಪತಾಸ್ತ್ರವನ್ನೂ ಬ್ರಹ್ಮಶಿರೋಸ್ತ್ರವನ್ನೂ ದಯಪಾಲಿಸು' ಎಂದು ಬೇಡಿಕೊಂಡು, ಸರದಲ್ಲಿ ಸ್ನಾನಮಾಡಿ ಈಶ್ವರನ ಪಾದಕ್ಕೆರಗಿ ಆತನು ಕೊಟ್ಟ ಪಾಶುಪತಾಸ್ತ್ರವನ್ನು ಕೈಕೊಳ್ಳುವನು. ಆಮೇಲೆ ಪಾರ್ವತಿಯೂ ಆತನನ್ನು ಆಶೀರ್ವದಿಸಿ ಅಸಂಖ್ಯವಾಗಿ ಬೆಳೆಯುವ ಶಕ್ತಿಯುಳ್ಳ ಅಂಜನಾಸ್ತ್ರವನ್ನು ಕೊಟ್ಟು ಮನ್ನಿಸುವಳು. ಅನಂತರ ಪಾರ್ವತಿ-ಪರಮೇಶ್ವರರನ್ನೂ ದೇವತೆಗಳನ್ನೂ ನಮಸ್ಕರಿಸಿ ಅರ್ಜುನನು ತನ್ನ ಮುಂದಿನ ದಾರಿಯನ್ನು ಹಿಡಿಯುವನು. ಶಿವನು ದೇವಗಣದೊಡನೆ ತನ್ನ ರಾಜಧಾನಿಗೆ ವಿಜೃಂಭಣೆಯಿಂದ ಮರಳುವನು.

## ( ೪ )

ಈ ಕಥಾಭಾಗದಲ್ಲಿ ಅಡಕವಾಗಿರುವ ಹಲವು ಸಂಗತಿಗಳ ವಿಷಯವಾಗಿ ಶಬರಶಂಕರವಿಳಾಸಕ್ಕೂ ಮೂಲ ಮಹಾಭಾರತ, ಕರ್ನಾಟಕ ಮಹಾಭಾರತ, ಕಿರಾತಾರ್ಜುನೀಯ, ವಿಕ್ರಮಾರ್ಜುನವಿಜಯ ಇವುಗಳಿಗೂ ಅನೇಕ ವ್ಯತ್ಯಾಸ

ಗಳಿರುವುವು. ಅವುಗಳಲ್ಲಿ ಮಹತ್ತ್ವದುವೆನಿಸಿದ ಕೆಲವನ್ನು ಇಲ್ಲಿ ಸಂಗ್ರಹವಾಗಿ ನಿರೂಪಿಸುತ್ತೇವೆ :

(೧) ಮೂಲ ಭಾರತದಲ್ಲಿ — ಪಾಂಡವರು ವನವಾಸವನ್ನು ಅನುಭವಿಸ ಬೇಕಾಗಿದ್ದ ಕಾಲದಲ್ಲಿ ವನವನಗಳನ್ನಲೆಯುತ್ತ ದ್ವೈತವನಕ್ಕೆ ಬರುವುದು, ಅಲ್ಲಿ ಕೌರವರ ಉತ್ಕರ್ಷವನ್ನೂ ತಮ್ಮ ಹೀನಸ್ಥಿತಿಯನ್ನೂ ನೆನೆದು ದ್ರೌಪದಿ-ಭೀಮರು ಯುಧಿಷ್ಠಿರನನ್ನು ಹೇವಗೊಳಿಸಲು ಪ್ರಯತ್ನಿಸುವುದು, ಆತನು ಅವರನ್ನು ಸಮಾಧಾನ ಮಾಡುವ ಹೊತ್ತಿಗೆ ವ್ಯಾಸರು ಅಲ್ಲಿಗೆ ಬಂದು ಅವರವರ ಆಶೆ-ಆಕಾಂಕ್ಷೆಗಳೆಲ್ಲ ಕೈಗೂಡಲೆಂದು ಹರಸಿ ವೈರಿಗಳನ್ನು ಗೆಲ್ಲಬೇಕಾದರೆ ತಪಸ್ಸು ಮಾಡಿ ಪರಶಿವನನ್ನು ಮೆಚ್ಚಿಸಿ ಆತನಿಂದ ಪಾಶುಪತಾಸ್ತ್ರವನ್ನು ಪಡೆದುಕೊಳ್ಳತಕ್ಕುದೆಂದೂ, ಆ ಸಾಹಸ ಮಾಡಲಿಕ್ಕೆ ಅರ್ಜುನನೆ ತಕ್ಕವನೆಂದೂ ಹೇಳಿ ಮಂತ್ರೋಪದೇಶ ಮಾಡುವುದು, ಅರ್ಜುನನು ತಪಸ್ಸಿಗೆ ಹೊರಡುವ ಸಿದ್ಧತೆಯಿಂದ ಅಣ್ಣತಮ್ಮಂದಿರ ಅನುಮತಿಯನ್ನು ಪಡೆಯುವುದು, ದ್ರೌಪದಿಯನ್ನು ಸಂದರ್ಶಿಸುವುದು, ಅವಳ ಹಿತವಚನ— ಇವೇ ಮೊದಲಾದ ವಿಷಯಗಳು ಈ ಕಥೆಗೆ ಪೂರ್ವಪೀಠಿಕೆಯಾಗಿ ಬರುತ್ತವೆ. ಇವನ್ನೆ ಇನ್ನಿಷ್ಟು ವಿಸ್ತರಿಸಿ ಭಾರವಿ ತನ್ನ ಕಿರಾತಾರ್ಜುನೀಯದ ಮೊದಲಿನ ಮೂರು ಸಂಧಿಗಳಲ್ಲೆಲ್ಲ ತುಂಬಿದ್ದಾನೆ. ವಿಕ್ರಮಾರ್ಜುನವಿಜಯದಲ್ಲಿ ಪಂಪನು ಈ ಎಲ್ಲ ವಿಷಯಗಳನ್ನು ಸಂಗ್ರಹವಾಗಿ ಹೇಳಿದ್ದಾನೆ. ಆದರೆ ಷಡಕ್ಷರದೇವನು ಇವನ್ನೆಲ್ಲ ಕೈಬಿಟ್ಟಿದ್ದಾನೆ- ಭಾರತದಲ್ಲಿ ಈ ಕಥಾಭಾಗಕ್ಕೆ ಅರ್ಜುನನೆ ಕಥಾನಾಯಕನು; ಷಡಕ್ಷರದೇವನ ದೃಷ್ಟಿಯಲ್ಲಿ — ಶೈವಸಂಪ್ರದಾಯಾನುಸಾರ — ಈಶ್ವರನೆ ಕಥಾನಾಯಕನು. ಆದುದರಿಂದ ಶಿವನ ನಿವಾಸವಾದ ಕನಕಾಚಲ, ಆತನ ರಾಜಧಾನಿ, ಆತನ ಆಸ್ಥಾನ-ವೈಭವ—ಇವುಗಳ ವರ್ಣನೆಯಿಂದ ತನ್ನ ಕಾವ್ಯವನ್ನು ಆರಂಭಿಸಿದ್ದಾನೆ. ಇಂದ್ರಕೀಲಪರ್ವತದ ತಪಸ್ವಿಗಳು ಹೊಸ ತಪಸ್ವಿಯ ತಪಃಪ್ರಭಾವದಿಂದ ತಮಗುಂಟಾದ ತಾಪವನ್ನು ಈಶ್ವರನಲ್ಲಿ ನಿವೇದಿಸಿ ತಮ್ಮನ್ನು ರಕ್ಷಿಸಲು ಬೇಡಿಕೊಂಡಾಗ ಈಶ್ವರನೆ—ಅರ್ಜುನನ ತಪಸ್ಸಿನ ಉದ್ದೇಶವು ವೈರಿಪರಾಜಯವೆಂತಲೂ ತಪಸ್ಸು ಮಾಡಲು ವ್ಯಾಸರ ಉಪದೇಶವೆ ಕಾರಣವೆಂತಲೂ — (ಒಂದೇ ಪದ್ಯದಲ್ಲಿ) ಹೇಳುತ್ತಾನೆ. ಭಾರವಿ ತನ್ನ ಕಾವ್ಯವನ್ನು ಕಿರಾತಾರ್ಜುನೀಯವೆಂದು ಕರೆದಿದ್ದರೂ ಷಡಕ್ಷರದೇವನು ತನ್ನ ಕೃತಿಯನ್ನು ಕಿರಾತರುದ್ರಲೀಲೆಯೆಂದು ಕರೆದುದರ ಔಚಿತ್ಯವನ್ನು ನಾವು ಇಲ್ಲಿ ಕಂಡುಕೊಳ್ಳಬಹುದು.

(೨) ಅರ್ಜುನನು ತಪಸ್ಸಿಗೆ ಆರಂಭಿಸಿದ ಅಲ್ಪವೇಳೆಯಲ್ಲಿ ಆತನ ತಪಸ್ತೇಜಕ್ಕೆ ಇಂದ್ರನು ತರಹರಿಸಿ, ತನ್ನ ಪದಕ್ಕೇ ದಾಳಿ ತಟ್ಟಬಹುದೆಂಬ ಭೀತಿಯಿಂದ ಅರ್ಜುನನ ತಪೋಭಂಗವನ್ನು ಮಾಡುವುದಕ್ಕಾಗಿ ಮೇನಕಾದಿ ಅಪ್ಸರಸ್ತ್ರೀಯರನ್ನು 'ಮನಸಿಜನ ಬೆಂಬಲ, ಆರು ಋತುಗಳ ನೆರವು'ಗಳೊಂದಿಗೆ ಅರ್ಜುನನಲ್ಲಿಗೆ ಕಳುಹಿಸಲು, ಅವರು ಅಲ್ಲಿಗೆ ಬಂದು ಬಗೆಬಗೆಯ ಪ್ರಯತ್ನಗಳನ್ನು

ಮಾಡಿದರೂ ಕೃತಕಾರ್ಯರಾಗದೆ ಮರಳಿದರೆಂಬ ಸನ್ನಿವೇಶವೊಂದು ಕಿರಾತಾರ್ಜು ನೀಯದಲ್ಲಿ ಹಲವು ಆಶ್ವಾಸಗಳುದ್ದಕ್ಕೂ ಬರುವುದು. ಇದೇ ಪ್ರಸಂಗವು ಪಂಪ ಭಾರತದಲ್ಲಿ ಸಂಗ್ರಹವಾಗಿ ಬಂದಿರುವುದು. ಶೃಂಗಾರವನ್ನು ಪಲತೆರದಿಂದ ಬಣ್ಣಿಸಲು ಅನುಕೂಲವಾದ ಈ ಸಂಗತಿಯನ್ನು ಷಡಕ್ಷರದೇವನು ತನ್ನ ಕೃತಿಯಲ್ಲಿ ಉಪ ಯೋಗಿಸಿಕೊಂಡಿಲ್ಲ. ಮಗನ ತಪಸ್ಸನ್ನು ಕೆಡಿಸಲು ತಂದೆ ಪ್ರಯತ್ನಿಸಿದನೆಂಬ ಮಾತೇ ಅನುಚಿತವೆಂದಾಗಲಿ ಮೂಲಭಾರತದಲ್ಲಿ ಈ ಸಂಗತಿಯಿಲ್ಲವೆಂದಾಗಲಿ ಕವಿ ಭಾವಿಸಿರಬಹುದು.

(೩) ಈ ಕಥಾಭಾಗದ ಮುಖ್ಯಪ್ರಸಂಗವಾದ ಕಿರಾತರುದ್ರನ ಮತ್ತು ಅರ್ಜುನನ ಮುಷ್ಟಿಯುದ್ಧದಲ್ಲಿ — ಬಾಹುಯುದ್ಧವೆಂದು ಕಿರಾತಾರ್ಜು ನೀಯದಲ್ಲಿ ಹೇಳಿದೆ — ಶಿವನ ಹೊಡೆತಕ್ಕೆ ರಕ್ತರಂಜಿತಗಾತ್ರನಾಗಿ ಅರ್ಜುನನೆ ನೆಲಕ್ಕೆ ಬಿದ್ದುದರಿಂದ ಅವನೇ ಪರಾಜಿತನಾದನೆಂದು ಭಾರತದಲ್ಲಿ ವರ್ಣಿಸಿದೆ. ಕಿರಾತಾರ್ಜುನೀಯದಲ್ಲಿ—ಹೊಡೆದಾಟದ ರಭಸದಲ್ಲಿ ಕಿರಾತನು ಮೇಲಕ್ಕೆ ಪುಟನೆಗೆ ದಾಗ ಅವನ ಪಾದಗಳನ್ನು ಹಿಡಿದು ನೆಲಕ್ಕಪ್ಪಳಿಸಬೇಕೆಂದು ಅರ್ಜುನನು ಬಗೆಯು ತ್ತಿರಲು, ಈಶ್ವರನು ಅವನನ್ನು ಅಪ್ಪಿಕೊಂಡು ನಿಜರೂಪುದೋರಿದನೆಂದು — ಬಣ್ಣಿಸಿದೆ. ವಿಕ್ರಮಾರ್ಜುನವಿಜಯದಲ್ಲ ಪಂಪನು ಇನ್ನೂ ಮುಂದಕ್ಕೆ ಹೋಗಿ :

ಇಕ್ಕಿದನಭವಂ ಪಾರ್ಥನ
ನಿಕ್ಕಿದನಾ ತ್ರಿಪುರಹರನನರ್ಜುನನೆನೆ ಗೆ
ಲ್ಲಕ್ಕೆ ಮುಡಿಗಿಕ್ಕುವಂತೆವೊ
ಲಿಕ್ಕಿದನವಯವದೆ ನೆಲದೊಳರಿಗಂ ಹರನಂ

'ಅಂತು ನೆಲಕ್ಕಿಕ್ಕಿ ಗಂಟಲಂ ಮೆಟ್ಟಿದಾಗಳ್' ಈಶ್ವರನು ನಿಜರೂಪುದೋರಿದ ನೆಂದು[೧] ವರ್ಣನೆ ಮಾಡಿರುವನು. ಗದಾಯುದ್ಧದಲ್ಲಿ ರನ್ನನು — ದುರ್ಯೋಧನನು ಪಾಂಡವರ ನಿರಾಕರಣವನ್ನು ಮಾಡುವ ಅವಸರದಲ್ಲಿ ಅವನ ಬಾಯಿಂದ ಈ ಸಂಗತಿಯನ್ನು ಸಮರ್ಥಿಸುವ ಮಾತುಗಳನ್ನು ಆಡಿಸುತ್ತಾನೆ[೨] :

ಬಿಡದಾರಾಧಿಸೆ ಮುನ್ನಮೆ
ಕುಡಲಾಱದೆ ಬೞಿಕೆ ಗಂಟಲು ಮೆಟ್ಟದೊಡಿ
ಟ್ಟಿಡೆಯೊಳ್ ಕೊಟ್ಟಂ ಗೆಲ್ಲಂ
ಗುಡುವಂತೆ ನರಂಗೆ ಪಾಶುಪತಮುಂ ರುದ್ರಂ

ಹೀಗೆ ಬಾಹುಯುದ್ಧದ ಪರಸ್ಪರ ವಿರುದ್ಧವಾದ ಪರಿಣಾಮಗಳನ್ನು ಹೇಳುವ ಈ ಎರಡೂ ಆಖ್ಯಾಯಿಕೆಗಳು ಪ್ರಚಾರದಲ್ಲಿದ್ದುವೆಂದು ತೋರುತ್ತದೆ. ಅರ್ಜುನನು ಶಿವನ ಗಂಟಲು ಮೆಟ್ಟಿದನೆಂಬ ಮಾತು ಹೆಚ್ಚು ಅಸಂಭವವೆಂದು ತೋರುವುದರಿಂದ,

೧ ವಿಕ್ರಮಾರ್ಜುನವಿಜಯ : ಆ ೧, ಪ. ೨೨. ೨ ಗದಾಯುದ್ಧ : ಆ ೩, ಪ. ೩೯.

ಇಂತಹ ಅಘಟಿತಘಟನಾಚಮತ್ಕಾರಗಳು ಕವಿಪ್ರಪಂಚದಲ್ಲಿ ಸಂಭವಿಸುವುದುಂಟೆಂದು ನೇಮಿಚಂದ್ರನು :

ಕಟ್ಟುಗೆ ಕಟ್ಟದಿರ್ಕೆ ಕಡಲಂ ಕಪಿಸಂತತಿ ವಾಮನಕ್ರಮಂ
ಮುಟ್ಟುಗೆ ಮುಟ್ಟದಿರ್ಕೆ ಮುಗಿಲಂ ಹರನಂ ನರನೊತ್ತಿ ಗಂಟಲಂ
ಮೆಟ್ಟುಗೆ ಮೆಟ್ಟದಿರ್ಕೆ ಕವಿಗಳ್ ಕೃತಿಬಂಧದೊಳಲ್ತೆ ಕಟ್ಟಿದರ್
ಮುಟ್ಟದರೊತ್ತಿ ಮೆಟ್ಟದರದೇನಳವಗ್ಗಳಮೋ ಕವೀಂದ್ರರಾ

ಎಂಬೀ[೧] ಪದ್ಯದಲ್ಲಿ ಸಮಾಧಾನ ಹೇಳಿದ್ದಾನೆ. ಷಡಕ್ಷರದೇವನು ಇಲ್ಲಿ ಭಾರತವನ್ನೇ ಅನುಸರಿಸಿ, ಶಿವನು ಮುಷ್ಟಿಯುದ್ಧದಲ್ಲಿ ಅರ್ಜುನನ್ನು ಮೆಲ್ಲನೆ ತಿವಿಯಲು, ಅವನ ಮೂಗಿನಿಂದಲೂ ಬಾಯಿಂದಲೂ ನೆತ್ತರು ಸೂಸಿ ನಿರ್ವಿಣ್ಣನಾದನೆಂದು ವರ್ಣಿಸಿದ್ದಾನೆ. ಜಗದೇಕವೀರನೆಂಬ ಹೆಸ್ಮೆ ತಾಳಿದ ಅರ್ಜುನನು ಹುಲಬೇಡನೊಬ್ಬನಿಗೆ ತಾನು ಸೋತೆನಲ್ಲ ಎಂಬ ಹೇವದಿಂದ ತಳಮಳಿಸುತ್ತ ಅವನನ್ನು ಗೆಲ್ಲುವುದಕ್ಕೋಸ್ಕರ ಶಿವನನ್ನು ಮರೆಹೋಗುವುದೂ ಆಗ ಭಕ್ತವತ್ಸಲನಾದ ಪರಶಿವನು ತನ್ನ ಹಿತಾರ್ಥವಾಗಿಯೆ ಕಪಟಕಿರಾತನಾಗಿ ಬಂದಿರುವನೆಂಬ ಅರಿವು ಅರ್ಜುನನಿಗೆ ಉಂಟಾಗುವುದೂ ಹೆಚ್ಚು ಚಮತ್ಕಾರಿಕವಾದ ಘಟನೆಗಳೆಂದು ಕವಿ ಭಾವಿಸಿರಬೇಕು.

(೪) ಅರ್ಜುನನು ಮಣಲಲಿಂಗಪೂಜೆಯನ್ನು ಮಾಡಿ ಕಿರಾತನನ್ನು ದ್ವಂದ್ವ ಯುದ್ಧಕ್ಕೆ ಮತ್ತೆ ಆಹ್ವಾನಿಸುವ ಹೊತ್ತಿಗೆ, ತಾನು ಲಿಂಗದ ಮೇಲೆ ಸೂಡಿದ ಪುಷ್ಪಗಳು ಕಿರಾತನ ಮಂಡೆಯ ಮೇಲೆ ಇರುವುದನ್ನು ಕಂಡೊಡನೆಯೆ, ಕಿರಾತನು ಶಿವನೇ ಎಂಬ ಜ್ಞಾನವು ಆತನಿಗೆ ಉಂಟಾಯಿತೆಂದು ಭಾರತದಲ್ಲಿ ಹೇಳಿದೆ. ಆದರೆ ಶಬರಶಂಕರವಿಳಾಸದಲ್ಲಿ ಅರ್ಜುನನಿಗೆ ಸಂದೇಹವುಂಟಾಗಿ ಇನ್ನೊಮ್ಮೆ ಮಣಲ ಲಿಂಗದ ಪೂಜೆಯನ್ನು ಮಾಡಿದನೆಂದು ಹೇಳಲಾಗಿದೆ. ಕರ್ಣಾಟಕ ಭಾರತದಲ್ಲಿಯೂ ಇದೇ ರೀತಿ ಇರುವುದು.

ಒಟ್ಟನಲ್ಲಿ ಷಡಕ್ಷರದೇವನು ಮಹಾಭಾರತದ ಕಥಾಸರಣಿಯನ್ನು — ಅದರಲ್ಲಿಯೂ ಕರ್ಣಾಟಕ ಮಹಾಭಾರತದಲ್ಲಿ ಕಂಡು ಬರುವ ಕುಮಾರವ್ಯಾಸನ ಆಖ್ಯಾನ (version)ವನ್ನು — ಶಬರಶಂಕರವಿಳಾಸದಲ್ಲಿ ಅನುಸರಿಸಿರುವನೆಂದು ತಿಳಿಯಬರುತ್ತದೆ. ಶಿವನ ಪಂಚವಿಂಶತಿಲೀಲೆಗಳಲ್ಲಿ ಕಿರಾತರುದ್ರಲೀಲೆಯೂ ಒಂದೆಂದು ಶೈವರಿಂದ ಪುರಾತನಕಾಲದಿಂದಲೂ ಅಂಗೀಕೃತವಾಗಿರುವುದರಿಂದ ಶೈವರಲ್ಲಿ ಪ್ರಚಾರವಾಗಿದ್ದ ಕಥೆಯೂ ಕುಮಾರವ್ಯಾಸನ ಕಥಾನಕವೂ ಒಂದೇಯಾಗಿರಬಹುದು. ಮೂಲಭಾರತಕ್ಕೂ ಕುಮಾರವ್ಯಾಸನಭಾರತಕ್ಕೂ ಇರುವ ವ್ಯತ್ಯಾಸಗಳು ಈ ಮೂಲಕವಾಗಿರುವುವೋ ಇಲ್ಲವೆ ಕುಮಾರವ್ಯಾಸನಿಂದ ಸ್ವತಂತ್ರವಾಗಿ ಉಂಟಾದುವೋ ಇಲ್ಲಿ

೧ ಲೀಲಾವತಿ : ಆ ೧, ಪ. ೧೧

ಹೇಳಲು ಸಾಧ್ಯವಿಲ್ಲ.[೧] ಷಡಕ್ಷರದೇವನು ಚೆನ್ನಬಸವಪುರಾಣವನ್ನು ನೋಡಿರುವ ಸಂಭವವಿದೆ; ಆದರೆ ಆ ಗ್ರಂಥದೊಳಗಿನ ಈ ಕಥಾಭಾಗವು ಕುಮಾರವ್ಯಾಸನ ಕೃತಿಯ ಆಧಾರದ ಮೇಲೆಯೆ ರಚಿತವಾದಂತೆ ತೋರುತ್ತದೆ. ಶಿವಾಧಿಕ್ಯವನ್ನು ಸ್ಥಾಪಿಸಲು ಈ ಕಥೆ ಬಹು ಅನುಕೂಲವಾಗಿರುವುದೆಂದು ಬಗೆದೇ ಕುಮಾರವ್ಯಾಸನ ಕೃತಿಯನ್ನು ಷಡಕ್ಷರದೇವನು ಆಧಾರವಾಗಿಟ್ಟುಕೊಂಡಂತೆ ಕಾಣುತ್ತದೆ. ಆದರೂ ತನಗೆ ಉಚಿತವೆಂದು ತೋರಿದ ಕಡೆಗಳಲ್ಲಿ ಕವಿಯು ಹಲವು ಚಿಕ್ಕಪುಟ್ಟ ವ್ಯತ್ಯಾಸಗಳನ್ನು ಮಾಡಿಕೊಂಡಿದ್ದಾನೆ.

( ೫ )

ಷಡಕ್ಷರದೇವನ ಶಬರಶಂಕರವಿಳಾಸಕ್ಕೂ ಕುಮಾರವ್ಯಾಸನ ಭಾರತದ ಕೈರಾತಪರ್ವಕ್ಕೂ ವಿಷಯವಿವರಣೆಯಲ್ಲಿ, ಸಂಗತಿಗಳ ಆನುಪೂರ್ವಿಯಲ್ಲಿ ಅಷ್ಟೇ ಅಲ್ಲದೆ ಸಂಭಾಷಣೆಯ ತೆರದಲ್ಲಿಯೂ ಹಲವು ಹೋಲಿಕೆಗಳು ದೃಗ್ಗೋಚರವಾಗುವುವು. ಕವಿಯು ಕುಮಾರವ್ಯಾಸನನ್ನು ಕಥಾವಸ್ತುವಿನಲ್ಲಿ ಅನುಸರಣಮಾಡುವುದಲ್ಲದೆ ಶೈಲಿಯಲ್ಲಿಯೂ ಅವನನ್ನು ಅನುಕರಣ ಮಾಡಿರುವನೆಂದು ಸಕೃದ್ದರ್ಶನಕ್ಕೆ ಭಾಸವಾಗುವ ಸಂಭವವಿರುವುದು. ಆದರೆ ಸೂಕ್ಷ್ಮವಾಗಿ ವಿಚಾರಮಾಡಿದಲ್ಲಿ ಈ ಭಾವನೆ ಸರ್ವಥಾ ತಪ್ಪಾದುದೆಂದು ಕಂಡುಬರುವುದರಲ್ಲಿ ಸಂದೇಹವಿಲ್ಲ. ರಾಜಶೇಖರವಿಳಾಸವನ್ನು ರಚಿಸುವಲ್ಲಿ ಭಾವಚಿಂತಾರತ್ನವನ್ನು ಉಪಯೋಗಿಸಿಕೊಂಡ ರೀತಿಯಲ್ಲಿ, ವೃಷಭೇಂದ್ರವಿಜಯವನ್ನು ರಚಿಸುವಲ್ಲಿ ಬಸವಪುರಾಣವನ್ನು ಉಪಯೋಗಿಸಿಕೊಂಡ ತೆರದಲ್ಲಿ, ಶಬರಶಂಕರವಿಳಾಸವನ್ನು ರಚಿಸುವುದಕ್ಕೆ ಕವಿ ಕುಮಾರವ್ಯಾಸನ ಕೃತಿಯನ್ನು ಬಳಸಿಕೊಂಡಿರುವನು. ಆದುದರಿಂದ ಇಲ್ಲಿ ಕಾಣುವುದು ಕುಮಾರವ್ಯಾಸನ ಭಾವಗಳ ಇಲ್ಲವೆ ಶೈಲಿಯ 'ಮಕ್ಕಾಮಕ್ಕಿ' ತೆರದ ಶುಷ್ಕಾನುಕರಣವಲ್ಲ; ವರ್ಣಕವನ್ನು ವಸ್ತುಕಕ್ಕೆ ತಿರುಗಿಸುವಲ್ಲಿ ಕಂಡು ಬರುವ ಆತನ ಪರುಷಹಸ್ತದ ಪ್ರಭಾವ. ಈ ವಿಧಾನದ ಸತ್ಯಾಂಶವನ್ನು ಸಂಗ್ರಹವಾಗಿ ಪ್ರಕಟಿಸುವುದಕ್ಕೆಂದು ಒಂದೆರಡು ಉದಾಹರಣೆಗಳನ್ನು ಇಲ್ಲಿ ಕೊಡಬಹುದು.

(೧) ಕುಮಾರವ್ಯಾಸನ ಶೈಲಿ ಕನ್ನಡದ ಶೈಲಿ; ಅದರಲ್ಲಿ ಕೆಚ್ಚಿದೆ, ಗಂಡಿದೆ, ಹಲವು ಕಡೆಗಳಲ್ಲಿ ಬಳಕೆವಾತಿನ ಒರಟೂ ಇದೆ. ಅದರಲ್ಲಿ ವಿಪುಲ ಶಬ್ದಸಂಪತ್ತಿ ಇರುವುದಾದರೂ ಯಾವ ಶಬ್ದವಾದರೇನು — 'ಅನ್ಯದೇಶ್ಯ' ಶಬ್ದಗಳಾದರೂ ಚಿಂತೆಯಿಲ್ಲ, ತನ್ನ ಇಂಗಿತವು ಇತರರಿಗೆ ತಿಳಿದರಾಯಿತು — ಎಂಬ ದೃಷ್ಟಿ ಆತನದು. ಒತ್ತಿಹೇಳಬೇಕೆಂದೆನಿಸಿದ ಭಾವವನ್ನು ಪುನರಾವೃತ್ತಿ ಮಾಡಿಯಾದರೂ ಹೇಳಲು ಆತನು ಹಿಂಜರಿಯುವುದಿಲ್ಲ. ಷಡಕ್ಷರದೇವನಾದರೋ :

೧ ಸಂಸ್ಕೃತದಲ್ಲಿಯೆ 'ಕೌಂತೇಯವಿಜಯ,' 'ಯುಧಿಷ್ಠಿರವಿಜಯ,' 'ಭಾರತಮಂಜರಿ,' 'ಬಾಲಭಾರತ' ಮೊದಲಾದ ಹಲವು ಕಾವ್ಯಗಳು ಮಹಾಭಾರತದ ಆಧಾರದ ಮೇಲೆ ಹುಟ್ಟಿರುವುದಾಗಿ ಕಂಡು ಬರುತ್ತದೆ. ಕುಮಾರವ್ಯಾಸನು ತನ್ನ ಭಾರತಕ್ಕೆ ಇವುಗಳನ್ನು ಆಧಾರವಾಗಿಟ್ಟುಕೊಂಡಿರಬೇಕೆಂದು ಊಹಿಸಬಹುದು.

ಒರೆಯೆ ಸುವರ್ಣರೇಖೆ ಮಿಗೆ ಬಾರದೊಡಂ ಪೊಸಚಿನ್ನದಂತೆ ಕಂ
ಡರಸಿದೊಡಿಕ್ಷುಕಾಂಡಮೆನೆ ಸೀಯನೆ ಸದ್ರಸಮುಣ್ಮದಿರ್ದೊಡಂ
ಸರಗೊಳಿಸುತ್ತೆ ತಾಳೆ ಮಣಿಮಾಲಿಕೆಯಂತೆ ಕೊರಲ್ಗೆ ಕಾಂತಿಯಂ
ನೆರೆಪದೊಡಂ ರಸಜ್ಞಸುಮನೋಜ್ಞಮೆ ಕಾವ್ಯಮದುಂ ಧರಿತ್ರಿಯೊಳ್

ಎಂಬ[1] ಉದಾತ್ತಧ್ಯೇಯವನ್ನು ಇಟ್ಟುಕೊಂಡು ಹೊರಟ ಕವಿ; ಆದುದರಿಂದ ಆತನದು ಸಂಸ್ಕೃತ ಶೈಲಿ — ಎಂದರೆ ಸುಸಂಸ್ಕೃತ ಶೈಲಿ; ಗಂಭೀರವಾದ ಮೃದ ಮಧುರವಾದ ಸಂಸ್ಮರಣೀಯವಾದ ಶಬ್ದಗಳಿಂದ ಘಟಿತವಾದ ಶೈಲಿ. ಈ ಮಾತಿನ ಹದನವನ್ನು ಕೆಳಗಣ ಉದಾಹರಣೆಗಳಲ್ಲಿ ಕಾಣಬಹುದು.

(೧) ಕರ್ಣಾಟಕಭಾರತದಲ್ಲಿ :

ಹಾಱಿತಾಯುಧವೆಂದು ಭೀತಿಗೆ
ಮಾಱುಹೋದನೆ ವೀರರಸ ನೋಱೆ
ಯಾಱಿತೇ ನಿಜಬಾಹುಸತ್ತ್ವದೊಳುಂಟೆ ಖಯಖೋಡಿ
ಮೀಱಿ ಹತಕಂತುಕದವೊಲು ಪುಟ
ವೇಱುತಿದೆ ವಿಕ್ರಮ ಛಡಾಳಿಸಿ
ಬೀಱುತಿದೆ ಭುಜ ಭಾರಿಯುಂಕವ ದೇವಿ ನೋಡೆಂದ[2]

ಅರ್ಜುನನ ಆಯುಧಗಳನ್ನೆಲ್ಲ ಶಿವನು ಈಡ್ಡುಕೊಂಡಾಗ ಅರ್ಜುನನು ಅವನನ್ನು ಬಾಹುಯುದ್ಧಕ್ಕೆ ಕರೆಯಲು, ಶಿವನು ಬಳಿಯಲ್ಲಿ ನಿಂತಿದ್ದ ಪಾರ್ವತಿಗೆ ಅರ್ಜುನನ ಶೌರ್ಯವನ್ನು ಪ್ರಶಂಸಿಸಿ ಮಾತಾಡಿದ ಮಾತುಗಳಿವು. ಇಲ್ಲಿ ' ಖಯಖೋಡಿ, ಛಡಾಳಿಸು ' ಮೊದಲಾದ ' ಅನ್ಯದೇಶ್ಯ ' ಶಬ್ದಗಳ ಪ್ರಯೋಗವಿದೆ; ಬಾಹುಸತ್ತ್ವದ ವಿಚಾರ ಎರಡಾವರ್ತಿ ಬಂದಿದೆ. ಇದೇ ಭಾವವನ್ನು ವ್ಯಕ್ತಪಡಿಸುವ ಶಬರಶಂಕರ ವಿಳಾಸದ ಮುಂದಣ ಪದ್ಯವನ್ನು[3] ಇದರೊಡನೆ ಪಡಿಯಿಡಬಹುದು :

ಕಾದುವ ಕೆಯ್ದು ಪೋದುದೆನುತಳ್ಕಿದನೇ ಭುಜಶೌರ್ಯಶಕ್ತಿ ಗೆಂ
ಟಾದುದೆ ಸಾರವೀರರಸಮೇಂ ಬಿಸಿಗುಂದಿದುದೇ ಸಹಾಯಮಂ
ಸಾದರಮೊಚ್ಚತಂ ಪಡೆವೆನೆಂಬಭಿಲಾಷೆಯನಾಳ್ದುದೇ ಮನಂ
ಕಾದಲೆ ನೋಟ್ಪುದೀತನ ಸಮುಗ್ರಪರಾಕ್ರಮಮುರ್ವಿ ಪೆರ್ಚುಗುಂ

ಇಲ್ಲಿ ಉಕ್ತಿಸಾಮ್ಯವಿದ್ದರೂ ಶಬ್ದವೈಪರೀತ್ಯವಿದೆ; ಅನ್ಯಸಹಾಯವನ್ನು ಅರ್ಜುನನು ಬಯಸಲಿಲ್ಲವೆಂಬ ಮಾತಿನಲ್ಲಿ ಅರ್ಜುನನ ಅಸಹಾಯಶೌರ್ಯವನ್ನು ಚೆನ್ನಾಗಿ ಪ್ರಕಟಿಸಲಾಗಿದೆ.

(೨) ಕರ್ಣಾಟಕಭಾರತದಲ್ಲಿ ಅರ್ಜುನನಿಗೆ ಅಂಜನಾಸ್ತ್ರವನ್ನು ಕೊಡುವಾಗ ಅದರ ಪ್ರಭಾವವನ್ನು ಪಾರ್ವತಿಯು ಈ ರೀತಿಯಾಗಿ ವರ್ಣಿಸುತ್ತಾಳೆ :

೧ ರಾಜಶೇಖರವಿಳಾಸ : ಆ ೧, ಪ. ೫೧.
೨ ಕರ್ಣಾಟಕಮಹಾಭಾರತ : ಅರಣ್ಯಪರ್ವ, ಸಂ. ೭, ಪ. ೨೫.
೩ ಶಬರಶಂಕರವಿಳಾಸ : ಆ ೪, ಪ. ೬೭.

ಒಂದು ದಶ ಶತ ಸಾವಿರದ ಹೆಸ
ರಿಂದ ಲಕ್ಷವು ಕೋಟಿಯಗಣಿತ
ದಿಂದ ನಿನಗಾಂತಧಟರಿಪುಗಳ ತಿಂದು ತೇಗುವುದು
ಬಂದು ಬೆಸನನು ಬೇಡುವುದು ತಾ
ನೊಂದು ಶರರೂಪಾಗೆನುತ ಮುದ
ದಿಂದ ವರಮಂತ್ರೋಪದೇಶವನಿತ್ತನರ್ಜುನಗೆ ೧

ಇದೇ ಮಾತನ್ನು ಹೇಳುವ ಸಮಯದಲ್ಲಿ ಬಹುಶ್ರುತನಾದ ಪೂರ್ವಸಾಹಿತ್ಯದ ಪೂರ್ಣಪರಿಚಯವುಳ್ಳ ಷಡಕ್ಷರದೇವನಿಗೆ ಅರ್ಜುನನ ಇಸುಗೆಯನ್ನು ವರ್ಣಿಸುವ ರನ್ನನ ಕೆಳಗಣ ಪದ್ಯವು೨ ನೆನಪಾದಂತೆ ತೋರುತ್ತದೆ :

ದೊಣೆಯಿಂದಂ ತೆಗೆವಾಗಳೊಂದು ತುಡುವಾಗಳ್ ಪತ್ತು ಬಾಣಂ ಧನುರ್-
ಗುಣದಿಂದಂ ಬಿಡುವಲ್ಲಿ ನೂಱು ಪರಿವಾಗಳ್ ಸಾಸಿರಂ ವೈರಿವಾ
ರ್ಗಣಮಂ ಛೇದಿಸುವಲ್ಲಿ ಲಕ್ಷ ನಡುವಾಗಳ್ ಕೋಟಿ ಸೇನಾಂಗದೊಳ್
ಗಣನಾತೀತಮಿದೆಂದೊಡೇವೊಗಱ್ವುದೋ ಬಿಲ್‌ಬಲ್ಮೆಯಂ ಪಾರ್ಥನಾ

ಆ ದಾಟಿಯಲ್ಲಿಯೆ ಶಬರಶಂಕರವಿಳಾಸದ ಕೆಳಗಣ೩ ಪದ್ಯವನ್ನು ಕವಿ ರಚಿಸಿದ್ದಾನೆ ಎನ್ನಬಹುದು :

ಮೊದಲೊಳಿದೊಂದು ಪತ್ತು ತುಡುವಲ್ಲಿ ಶತಂ ಬಿಡುವಲ್ಲಿ ಸಾಸಿರಂ
ಪದಮಿಡುವಲ್ಲಿ ವೈರಿಶರಸಂಹತಿಯಂ ತಱುವಲ್ಲಿ ಲಕ್ಷಮು
ಗ್ಗದ ಗತಿಯಲ್ಲಿ ಕೋಟಿ ಸಮರಾಂಕಣದೊಳ್ ಗಣನಾವಿಹೀನಮ
ಪ್ಪುದು ರಿಪುವೃಂದಮಂ ತವಿಸಿ ನಿನ್ನೆಡೆಗೆಯ್ದುಗುಮೀ ಮಹಾಶರಂ

ಆದರೆ ಲಕ್ಷ್ಯಪೂರ್ವಕವಾಗಿ ವಿಚಾರಿಸಿದರೆ ಇಲ್ಲಿಯೂ ಕವಿ ಜಾಣ್ಮೆಯನ್ನು ತೋರಿಸಿ ಕೊಂಡಿದ್ದಾನೆ. ಉತ್ತರೋತ್ತರ ಅಭಿವೃದ್ಧಿಯನ್ನು ಹೊಂದುತ್ತ ಹೋಗುವ ಶರವನ್ನು ವರ್ಣಿಸುವಲ್ಲಿ ಗಣನಾತೀತವಾಗುವುದು ಯಾವಾಗಯೆಂಬುದನ್ನು ರನ್ನನು ಹೇಳಲಿಲ್ಲ; ಅದನ್ನೂ ಹೇಳಿ ರನ್ನನಿಗೇ ಶುದ್ಧಿಪತ್ರವನ್ನು ಕೊಡುವ 'ಎಂಟಿರ್ದೆ' ಯನ್ನು ಮಾಡಿದ್ದಾನೆ ಷಡಕ್ಷರದೇವನು. ಹೀಗೆ ಪೂರ್ವಕವಿಗಳ ಭಾವವನ್ನು ಹೆಚ್ಚು ಉಚಿತವಾಗುವ ರೀತಿಯಲ್ಲಿ ಮಾರ್ಪಡಿಸುವ ಶಕ್ತಿ ಷಡಕ್ಷರದೇವನಲ್ಲಿ ಅಗಾಧ ವಾಗಿದೆ.

(೩) ಅರ್ಜುನನು ಭಯಂಕರವಾದ ಶರವೃಷ್ಟಿಮಾಡಿ ಕಪಟಕಿರಾತನಾದ ಶಿವನನ್ನು ಮುಚ್ಚಿಬಿಟ್ಟರೂ ಶಿವನು ಬೆದರಲಿಲ್ಲವೆಂಬುದನ್ನು ಕುಮಾರವ್ಯಾಸನು ಕೆಳಗಣ೪ ಪದ್ಯದಲ್ಲಿ ಹೇಳಿದ್ದಾನೆ:

೧ ಕರ್ಣಾಟಕಮಹಾಭಾರತ : ಅರಣ್ಯಪರ್ವ, ಸಂ.೭, ಪ. ೧೦೬.
೨ ಗದಾಯುದ್ಧ : ಆ ೩, ಪ. ೩.
೩ ಶಬರಶಂಕರವಿಳಾಸ : ಆ ೫, ಪ. ೫೧.
೪ ಕರ್ಣಾಟಕಮಹಾಭಾರತ : ಅರಣ್ಯಪರ್ವ, ಸಂ. ೭, ಪ. ೧೦.

ಮಂಜು ಮುಸುಕಿದೊಡೇನು ಪರ್ವತ
ಮಂಜುವುದೆ ಹಾಲಾಹಲವ ನೊಣ
ನೆಂಜಲಿಸುವುದೆ ವಡಬಸಿಖಿ ನನೆವುದೆ ತುಷಾರದಲಿ
ಕಂಜನಾಳದೆ ಕಟ್ಟುವಡೆವುದೆ
ಕುಂಜರನು ನರಶರದ ಜೋಡಿನ
ಜುಂಜವೊಳೆಯಲಿ ಜಾಹ್ನವೀಧರ ಜಾಱುವನೆ ಎಂದ

ಇದೇ ಭಾವವನ್ನು ಬಿತ್ತರಿಸುವ ಷಡಕ್ಷರದೇವನ ಈ ಪದ್ಯವನ್ನು[1] ಮೇಲಿನದರೊಡನೆ ಹೋಲಿಸಬಹುದು :

ಮಂಜಿನ ಪುಂಜಮೊತ್ತರಿಸಿ ಮುತ್ತಿ ಮುಸುಂಕೆ ಭಯಾರ್ತಿಗೊಳ್ವನೇ
ಕಂಜಸಖಂ ಪತಂಗತತಿ ಪಾಯ್ದೊಡೆ ಬೆರ್ಚುಗುಮೇ ದವಾಗ್ನಿ ವಾ
ತಂ ಜವದಿಂ ಪಳಂಚೆ ಗಿರಿ ಕಂಪನವಾಂಪುದೆ ಪಾಂಡುಪುತ್ರನಾ
ತಂ ಜಡಿದೊತ್ತೆ ಜಾಱಿ ಪೆಱಸಾರ್ವನೆ ಧೀರಧನಂಜಯಾಂಬಕಂ

ಮಂಜು ಪರ್ವತವನ್ನೂ ಮುಸುಕಬಹುದು, ಸೂರ್ಯನನ್ನೂ ಮುಸುಕಬಹುದು. ಅದಕ್ಕೆ ಪರ್ವತವು ಬೆದರಲಿಕ್ಕಿಲ್ಲ, ಆದರೆ ಅದನ್ನು ಬೆದರಿಸುವ ಶಕ್ತಿ ಪರ್ವತಕ್ಕಿಲ್ಲ, ಸೂರ್ಯನಿಗೆ ಇದೆ. ಹಾಲಾಹಲವನ್ನು ನೊಣ ಎಂಜಲಿಸದೆಂದು ಹೇಳುವುದರಿಂದ ಹಾಲಾಹಲದ ಭೀಕರತೆಯನ್ನು ಹೇಳಿದಂತಾಯಿತೋ ನೊಣದ ಜಾಣ್ಮೆಯನ್ನು ವರ್ಣಿಸಿದಂತಾಯಿತೋ ? ಹೀಗೆ ಹಲವು ಸಂದೇಹಗಳಿಗೆ ಎಡೆಗುಡದೆ ಹೆಚ್ಚು ಬಲವತ್ತರವಾದ ಉದಾಹರಣೆಗಳನ್ನು ಕೊಟ್ಟು ಷಡಕ್ಷರದೇವನು ಕುಮಾರವ್ಯಾಸನ ಭಾವನೆಯಲ್ಲಿಯೆ ಮಾರ್ಪಾಟುಗಳನ್ನು ಮಾಡಿ ತನ್ನ ಸಾಮರ್ಥ್ಯವನ್ನು ಪ್ರದರ್ಶಿಸಿದ್ದಾನೆ.

(೪) ಶಿವನೆ ಕಿರಾತವೇಷದಲ್ಲಿ ಬಂದಿರುವನೆಂದು ಅರ್ಜುನನಿಗೆ ನಿರ್ಧಾರವಾದೊಡನೆಯೆ ಆತನಿಗೆ ಪಶ್ಚಾತ್ತಾಪವಾಗಿ ಕ್ಷಮಿಸೆಂದು ಹಲವು ವಿಧವಾಗಿ ಬೇಡಿಕೊಳ್ಳುತ್ತ ಶಿವನ ಪಾದದಲ್ಲಿ ಬೀಳುತ್ತಾನೆ; ಆಗ ಶಿವನು ಅವನನ್ನು ಎತ್ತಿ ಸಾಂತ್ವನ ಮಾಡುವ ಸಂದರ್ಭದಲ್ಲಿ ಕುಮಾರವ್ಯಾಸನು ಬರೆದ ಪದ್ಯವಿದು[2] :

ಕೂಡೆ ಮೆಯ್ದುಡವಿದನು ಮಿಗೆ ಮುಂ
ಡಾಡಿದನು ಮನ ನೋಯದಿರು ನೀ
ಮಾಡಿದುಪಹತಿಯೆಂಬುದೆನಗರ್ಚನೆ ನಮಸ್ಕಾರ
ಕೋಡದಿರು ಕೊಂಕದಿರು ಭಕ್ತಿಗೆ
ನಾಡೆ ಮೆಚ್ಚಿದೆನೆನ್ನ ಚಿತ್ತಕೆ
ಖೋಡಿಯಿಲ್ಲಿಲೆ ಮಗನೆ ಈ ಗುಹಗಣಪರಾಣೆ

೧ ಶಬರಶಂಕರವಿಳಾಸ: ೮ ೪, ಪ. ೪೪.
೨ ಕರ್ಣಾಟಕಮಹಾಭಾರತ: ಅರಣ್ಯಪರ್ವ, ಸಂ. ೭. ಪ. ೯೫.

ಇದೇ ಭಾವವನ್ನು ಷಡಕ್ಷರದೇವನು ಎಷ್ಟು ರಮ್ಯವಾದ ಸಂಸ್ಮರಣೀಯವಾದ ರೀತಿಯಲ್ಲಿ ಕೆಳಗಣ[೧] ಪದ್ಯಗಳಲ್ಲಿ ಹೇಳಿದ್ದಾನೆ:

ಪಡೆದರ್ಮದಪ್ಪಿದಂ ಗುಹಗಜಾಸ್ಯರನಪ್ಪುವ ತೋಳ್ಗಳಿಂದೆ ಮಾ
ಣದೆ ನರನಂ ಮೃಡಂ ಪರಸಿದಂ ನಿಗಮಂಗಳ ಪೆತ್ತ ಬಾಯ್ಗಳಿಂ
ಮುದಮುಲವರ್ಣಂತೆ ಮೆಯ್ದಡವಿದಂ ವರವೀವ ಕರಾಬ್ಜದಿಂದೆ ನೋ
ಡಿದನಖಿಳಾಗಮಂ ತೆಮರ್ವ ಕಣ್ಗಳಿನಾ ನರನೇಂ ಕೃತಾರ್ಥನೋ

ನಿನ್ನ ಕಟೂಕ್ತಿ ಮಂತ್ರಮೆನಗೆಚ್ಚ ಶರಾವಳಿ ಪುಷ್ಪಸಂಚಯಂ
ನಿನ್ನ ಸರೋಷವೀಕ್ಷಣದ ದೀಧಿತಿ ದೀಪಿಕೆಯರ್ಚನೋಚಿತಂ
ನಿನ್ನ ಧನುರ್ಲತಾಹತಿಯು ಬಾಸುಱೆ ಪೂಗಳ ಮಾಲೆಯೊಚ್ಚತಂ
ನಿನ್ನಯ ಮುಷ್ಟಿಯುದ್ಧಮದು ಮತ್ಪದಪೂಜೆ ನಿಜಂ ಧನಂಜಯಾ

ಷಡಕ್ಷರದೇವನಿಗೆ ಗುಹಗಜಾಸ್ಯರ ನೆನಪು ಕುಮಾರವ್ಯಾಸನ ಮೇಲಿನ ಪದ್ಯದಿಂದಲೆ ಆಗಿರಬಹುದು. ಆದರೂ ಇತರ ಕವಿಗಳಲ್ಲಿಯೆ ಸಿಕ್ಕುವ ಸೂಕ್ಷ್ಮ ಸೂಚನೆಗಳನ್ನು ತಟ್ಟನೆ ಗ್ರಹಿಸಿ ಅವನ್ನು ಮನಂಬುಗವ ರೀತಿಯಲ್ಲಿ ವಿಸ್ತರಿಸಿ ಮೂಲಕ್ಕಿಂತಲೂ ಸುಂದರವಾಗುವಂತೆ ಮಾಡುವ ಕಲೆ ಷಡಕ್ಷರದೇವನಿಗೆ ಬಹು ಚನ್ನಾಗಿ ಸಾಧಿಸಿದೆ.

(೫) ಷಡಕ್ಷರದೇವನ ಔಚಿತ್ಯಜ್ಞಾನವೂ ಕಲಾಭಿಜ್ಞತೆಯೂ ಅನ್ಯಾದೃಶ್ಯವಾಗಿದೆಯೆಂಬುದಕ್ಕೆ ಒಂದು ಉದಾಹರಣೆಯನ್ನು ಇಲ್ಲಿ ಕೊಡಬಹುದು. ಶಿವನು ಕಿರಾತ ವೇಷವನ್ನು ತಾಳುವ ಪರಿಯನ್ನು ಕನ್ನಡ ಭಾರತದಲ್ಲಿ[೨] ಈ ರೀತಿಯಾಗಿ ಬಣ್ಣಿಸಲಾಗಿದೆ:

ತೆಗೆದು ತಲೆಮಾಲೆಯನು ಹಸುರಂ
ಗಿಗಳ ತೊಟ್ಟನು ಸುತ್ತುವರೆ ಒ೦
ಲಿಗಳ ಹರಹಿನ ಪಾರಿವದ ಚಲ್ಲಣವ ವೆಂಠಣಿಸಿ
ಬಿಗಿಜಡೆಯ ಶಶಿಮುಖಕೆ ಪತ್ರಾ
ಳಿಗಳ ಕಟ್ಟಿ ಕಿರಾತವೇಷದ
ವಿಗಡದೇವರ ದೇವ ಕೊಂಡನು ಚಾಪಮಾರ್ಗಣವ

ಈ ವರ್ಣನೆಯು ಬೈಲಾಟದಲ್ಲಿ ಸೋಗು ಹಾಕುವ ನಟನ ವೇಷವಿನ್ಯಾಸವನ್ನು ಸ್ಮರಣೆಗೆ ತರುತ್ತದೆ. ಆದರೆ ಶಬರಶಂಕರವಿಳಾಸದಲ್ಲಿಯ:

ಜಡೆಗಳ ಬಂಬಲೆ ತಲೆದಳಿರ್ ಫಣಿ ಸುತ್ತಿದ ಬಳ್ಳಿ ತಾಳ್ದ ಬಾನ್–
ಗಡಲದು ಪುಷ್ಪಮಾಲೆ ಗಱಿವೂಗಱಿ ತೆಳ್ವಱೆ ಬಗ್ಗ ಸಮ್ಮದೊ
ಳ್ಪುಡೆ ಪೊಸ ಚೆಲ್ಲಣಂ ಕರಿಯ ಕುಪ್ಪಸಮಾನೆಯ ಕೃತ್ತಿಯಂಗದೊಳ್
ತೊಡೆದ ವಿಭೂತಿಯುದ್ಗಮಪರಾಗವಿಲೇಪನಂ ... ....

೧ ಶಬರಶಂಕರವಿಳಾಸ: ೮ ೫, ಪ. ೪೦, ೪೧.
೨ ಕರ್ಣಾಟಕಮಹಾಭಾರತ: ಅರಣ್ಯಪರ್ವ, ಸಂ. ೬. ಪ. ೨೯.

ಇತ್ಯಾದಿ ಪದ್ಯಗಳಲ್ಲಿ೧ ಕಿರಾತರೂಪ ಧಾರಣವನ್ನು ‘ ಘನಸ್ವತಂತ್ರ ’ನಾದ ಶಿವನಿಗೆ ಒಪ್ಪುವ ರೀತಿಯಲ್ಲಿ ಬಣ್ಣಿಸಿ ಷಡಕ್ಷರದೇವನು ತನ್ನ ಪ್ರತಿಭೆಯನ್ನು ತೋರ್ಪಡಿಸಿದ್ದಾನೆ.

ಹೀಗೆ ಆಳವಾಗಿ ವಿವೇಚಿಸುವುದರಿಂದ ಕರ್ಣಾಟಕಭಾರತಕ್ಕೂ ಶಬರಶಂಕರ ವಿಳಾಸಕ್ಕೂ ಇರುವ ಸಾಮ್ಯ-ಹೋಲಿಕೆಗಳು ಹೊರಮೆಯ್ಯ ಹೋಲಿಕೆಗಳೆಂದು ಹೇಳಬಹುದೇ ಹೊರತು ಒಳದಿರುಳಿನವಲ್ಲ. ಈಗಿನ ಕಾಲದಲ್ಲಿ ಕುಮಾರವ್ಯಾಸನ ಸರಣಿಯೇ ಹೆಚ್ಚು ಚಿತ್ತಾಕರ್ಷಕವಾದುದೆಂದು ಹೇಳುವವರು ಹಲವರಿರಬಹುದು; ಅವರೊಡನೆ ನಮ್ಮ ಕದನವಿಲ್ಲ. ಆದರೆ ಈ ಇಬ್ಬರು ಕವಿಗಳು ಬೇರೆ ಬೇರೆ ವರ್ಗಕ್ಕೆ ಸೇರಿದವರೆಂದು ತಿಳಿದರೆ ಸಾಕು.

(೬)

ಪಲಮೊಗವಾಗಿ ಪ್ರಕಟವಾಗಿರುವ ಷಡಕ್ಷರದೇವನ ಕವಿತಾಸಾಮರ್ಥ್ಯವನ್ನು ಬರಿಯ ಶಬರಶಂಕರವಿಳಾಸದಿಂದಲೆ ಪ್ರದರ್ಶಿಸಲೆಳಸುವುದು ‘ ಅಸದಳವಹ ಕಜ್ಜ ’ ವಾಗುವುದಲ್ಲದೆ ಕವಿಗೆ ಅನ್ಯಾಯಮಾಡಿದಂತೆಯೂ ಆಗಬಹುದು. ಆದರೂ ಈ ಪುಟ್ಟ ಕಬ್ಬದಲ್ಲಿಯೂ ಕವಿಪ್ರತಿಭೆಯ ಹಲವು ಕುರುಹುಗಳು ಕಣ್ಗೊಳಿಸುವುವೆಂಬ ದೃಷ್ಟಿಯಿಂದ ಒಂದೆರಡು ಮಾತುಗಳನ್ನು ಇಲ್ಲಿ ಹೇಳಬಗೆಯುತ್ತೇವೆ. ಈ ಕೃತಿಗಾಗಿ ಕಾವ್ಯಸಾಮಗ್ರಿಯನ್ನು ಆಯ್ದುಕೊಳ್ಳುವಲ್ಲಿ ಕವಿ ತೋರಿಸಿದ ಚಾತುರ್ಯ, ಕಥಾ ಸಂವಿಧಾನವನ್ನು ಮಾರ್ಪಡಿಸಿಕೊಳ್ಳುವಲ್ಲಿ ಆತನು ತೋರಿಸಿದ ಔಚಿತ್ಯಜ್ಞಾನ ಮುಂತಾದುವುಗಳನ್ನು ಕುರಿತು ಈ ಮುಂಚೆಯೆ ಸಾಕಷ್ಟು ವಿವರಣೆಮಾಡಲಾಗಿದೆ. ಇನ್ನು ಈತನ ವರ್ಣನೆಗಳ ವಿಚಾರ. ಷಡಕ್ಷರದೇವನು ಪ್ರಬಲಕಲ್ಪನಾಶಕ್ತಿಯುತನಾದುದರಿಂದ ಇವನ ವರ್ಣನೆಗಳೆಲ್ಲ ಸಾಮಾನ್ಯವಾಗಿ ವಿಸ್ಮಯಜನಕವಾಗಿರುವುದುಂಟು; ಆದುದರಿಂದಲೆ ಇವನು ವರ್ಣನಪ್ರಿಯನಾದ ಕವಿಯೆಂದು ಹೇಳಬಹುದು. ಶಬರಶಂಕರವಿಳಾಸದಲ್ಲಿ ವರ್ಣನಭಾಗವೆ ಹೆಚ್ಚು; ಕಥಾಭಾಗವು ಕಡಿಮೆ. ಆರಂಭದಲ್ಲಿ ಬರುವ ಸಮುದ್ರ, ಮೇರುಪರ್ವತ, ಅಲ್ಲಿ ಉಪವನ, ಶಿವನ ರಾಜಧಾನಿ, ಸುತ್ತಲಿನ ಅಗಸೆಗಳು, ಆಸ್ಥಾನ, ಶಿವನ ಸಭೆ-ಮುಂತಾದುವು ಕಥಾಗಾತ್ರವನ್ನು ಬಹುವಾಗಿ ಮಿಕ್ಕ ವರ್ಣನೆಗಳಾದುದರಿಂದ ಬೇಸರಿಕೆ ಬರುವಂತಿವೆ, ಆದರೆ ನೂತನವಾಗಿಯೂ ಚಮತ್ಕಾರಿಕವಾಗಿಯೂ ಇರುವುವೆನ್ನುವಲ್ಲಿ ಸಂದೇಹವಿಲ್ಲ. ಇಂದ್ರಕೀಲಪರ್ವತದಲ್ಲಿಯ ತಪೋವನದ ವರ್ಣನೆಯು ಪ್ರಸಿದ್ಧವಿದೆ, ಹೃದಯಂಗಮವಾಗಿದೆ. ಮಾವಿನ ಮರವನ್ನು ಹಲವು ಕವಿಗಳು ವರ್ಣಿಸಿದ್ದಾರೆ, ಆದರೆ ಈತನಿಗೆ ಅದು ಒಳ್ಳೆಯ ನಚ್ಚಿನ ಮೆಚ್ಚಿನ ಮರವೆಂದು ಕಾಣುತ್ತದೆ. ಅದನ್ನು ತನ್ನ ಕಾವ್ಯಗಳಲ್ಲೆಲ್ಲ ಬಣ್ಣಿಸಿದ್ದಾನೆ, ವಿಧವಿಧವಾಗಿ ಬಣ್ಣಿಸಿದ್ದಾನೆ. ಇದೇ ಕೃತಿ

೧ ಶಬರಶಂಕರವಿಳಾಸ: ಆ ೩, ಪ. ೫-೬.

ಯಲ್ಲಿ ಆ ಮರವು ಅವನಿಗೆ ಒಮ್ಮೆ ವನಾಬ್ಧಿಯ ಹಡಗಿನಂತೆ, ಒಮ್ಮೆ ಕಾಯ್ತು ಕಲ್ಪಕುಜದಂತೆ, ಇನ್ನೊಮ್ಮೆ ಕಾಮನ ಸಾಮಜದಂತೆ ಕಣ್ಗೊಳಿಸುತ್ತಿದೆ. 'ಕಾಮನ ಸಾಮಜ' ಹೇಗೆ — ಎಂದು ಕೇಳುವುದಾದರೆ ಆ ಹೋಲಿಕೆಯನ್ನು ವೃಷಭೇಂದ್ರ ವಿಜಯದಲ್ಲಿ[೧] ಸ್ಫುಟವಾಗಿ ಚಿತ್ರಿಸಿದ್ದಾನೆ:

ಶಾಮಲಾಂಗವಾಗಿ ತೀವಿ ತಳ್ತ ಭೃಂಗವೃಂದದಿಂ
ಕೋಮಲಪ್ರವಾಲಶಾಖೆಯೆಂಬ ದೀರ್ಘಶುಂಡದಿಂ
ವಾಮವಾಗಿ ತಾಳ್ದ ಮಾಕರಂದದಾನವಾರಿಯಿಂ
ಕಾಮಸಾಮಜೋಪಮಾನವಾದುದೊಂದು ಮಾಮರಂ

ಅರ್ಜುನನ ತಪಸ್ಸಿನ ವರ್ಣನೆ ಬಹು ಮಾರ್ಮಿಕವಾಗಿದೆ: 'ಮುಱಿಪೊಂದದೆಳ್ಚಱದ ಕಣ್' ಇತ್ಯಾದಿಯಾದ ಪದ್ಯದಲ್ಲಿ[೨] ಲಿಂಗಾಂಗಸಾಮರಸ್ಯದ ರಹಸ್ಯವೂ, 'ನೀನಾಂಬೆರಡಲ್ಲದುದು' ಎಂದು ಆರಂಭವಾಗುವ ಪದ್ಯದಲ್ಲಿ[೩] ಶಿವಾನುಭವದ ಗುಟ್ಟೂ ಅಡಕವಾಗಿದೆ. ಶಿವನ ಬೇಂಟೆಯುಜ್ಜುಗದ ವರ್ಣನೆಯಲ್ಲಿ ಶಿವ-ಪಾರ್ವತಿ ಯರ, ಅವರ ಅನುಯಾಯಿಗಳ ಕಿರಾತರೂಪಧಾರಣವು ಮನೋರಂಜಕವಾಗಿದೆ. ಮುಂದೆ ಬರುವ ಬೇಂಟೆಯ ವರ್ಣನೆಯ ವಿಷಯದಲ್ಲಿ — ಕವಿ ಸಂಪ್ರದಾಯದ ಕಟ್ಟಿಗೆ ಸೋತಿದ್ದಾನೆ, ಜೋತಿದ್ದಾನೆ ಎಂದೇ ಹೇಳಬೇಕಾಗುತ್ತದೆ; ಆದರೂ ಈತನ ಪ್ರತಿಭೆಯ ವಿಸ್ಫುಲಿಂಗತತಿಗಳು ಅಲ್ಲಲ್ಲಿ ಕಿಡಿಗುಟ್ಟುತ್ತಿವೆಯೆಂದೂ ಹೇಳಬಹುದು. ಕಿರಾತ-ಅರ್ಜುನರ ಸಂದರ್ಶನ, ಸಂವಾದ, ಸಂಗ್ರಾಮ — ಇವುಗಳೇ ಈ ಕಾವ್ಯದ ಜೀವಾಳ; ರಸವತ್ತಾಗಿ ನಿರೂಪಿತವಾಗಿವೆ, ಚಿರಪರಿಚಿತವೂ ಆಗಿವೆ. ಕಾವ್ಯದ ಕೊನೆಯ ಭಾಗದಲ್ಲಿ ಅರ್ಜುನನು ಮಾಡಿದ ಶಿವಸ್ತವನವು ಆತನ ನೆವದಲ್ಲಿ ಕವಿಯೆ ತನ್ನ ಭಕ್ತಿಯ ಉದ್ರೇಕದಿಂದ ಮಾಡಿದ, ಹಾಡಿದ ಸಂಸ್ತವನವಾಗಿದೆ. ಷಡಕ್ಷರ ದೇವನು ಕನ್ನಡದಲ್ಲಿ, ಸಂಸ್ಕೃತದಲ್ಲಿ, ಬಗೆ ಬಗೆಯ ಛಂದಸ್ಸಿನ ಲಯದಲ್ಲಿ ಪಾರ್ವತೀ-ಪರಮೇಶ್ವರರ ಸ್ತೋತ್ರಗಳನ್ನು ರಚಿಸಿದ್ದಾನೆ. ತನ್ನ ಕಾವ್ಯಗಳ ಪ್ರತಿ ಆಶ್ವಾಸದ ಆದ್ಯಂತದಲ್ಲಿ ಈ ಸ್ತೋತ್ರಗಳು ಕಣ್ಗೊಳಿಸುವುವಲ್ಲದೆ, ಕಾವ್ಯದ ಮಧ್ಯದಲ್ಲಿ ಉಚಿತ ಸನ್ನಿವೇಶಗಳು ದೊರೆತಾಗ ಇವುಗಳ ಅಲರಸರಿಯೇ ಓದುಗರನ್ನು ಆವರಿಸಿಬಿಡು ತ್ತದೆ. ಕಾವ್ಯಗಳನ್ನು ಹೊಸೆಯುವ ಪರಿಶ್ರಮದಲ್ಲಿ ಈ ಸ್ತೋತ್ರಗಳು ಕವಿ ಕೈಕೊಂಡ ವಿರಾಮಚಿಹ್ನೆಗಳಂತೆ ತೋರುತ್ತವೆ. ಕಾವ್ಯಮುಖದಲ್ಲಿ ಬಂದಿರುವ

೧ ವೃಷಭೇಂದ್ರವಿಜಯ : ಆ ೪, ಪ. ೩೪.

೨ ಶಬರಶಂಕರವಿಳಾಸ : ಆ ೨, ಪ. ೧೦೫.

೩ ಶಬರಶಂಕರವಿಳಾಸ : ಆ ೨, ಪ. ೧೦೫.

ದುರ್ಜನನಿಂದೆಯು ಕನ್ನಡ ಕವಿಗಳಿಗೇ ಮೀಸಲಾದ ಸಂಪ್ರದಾಯದನುಸಾರವಾಗಿದೆ; ಆದರೂ ಕೆಲವೆಡೆಗಳಲ್ಲಿ ನಾವಿನ್ಯವಿದೆ[೧].

ಷಡಕ್ಷರದೇವನಲ್ಲಿ ನಿಸರ್ಗವಾದ ಪ್ರತಿಭೆಯೊಡನೆ ಕಾವ್ಯಸಂಪತ್ತಿನ ಇನ್ನಿತರ ಸಾಮಗ್ರಿಗಳಾದ ಶಾಸ್ತ್ರಪರಿಚಯವೂ ಕಾವ್ಯರಚನಾಭ್ಯಾಸವೂ ಕೂಡಿರುವುದರಿಂದ, ಶಬ್ದಾರ್ಥಾಲಂಕಾರಗಳ ನಾನಾ ಬಗೆಗಳಿಗೆ ಈತನ ಕೃತಿಗಳಿಂದಲೆ ಉತ್ತಮ ಉದಾಹರಣೆಗಳನ್ನು ಕೊಡಬಹುದು. ಮೈಸೂರ ವಿಶ್ವವಿದ್ಯಾಲಯದ ಪರವಾಗಿ ಪ್ರಕಟವಾದ 'ಕನ್ನಡ ಕೈಪಿಡಿ'ಯ ಮೊದಲನೆಯ ಸಂಪುಟದ ಅಲಂಕಾರಭಾಗದಲ್ಲಿ ಉದ್ಧೃತವಾದ ಪದ್ಯಗಳಲ್ಲಿ ಈ ಕವಿಯ ಕೃತಿಗಳಿಂದ ಎತ್ತಿಕೊಂಡುವೇ ಹೆಚ್ಚು; ಅವುಗಳಲ್ಲಿ ಶಬರಶಂಕರವಿಳಾಸದೊಳಗಿನವೂ ಹಲವಿರುವುವು.

ಕರ್ಣಾಟಕಕವಿಚರಿತೆಕಾರರು ಷಡಕ್ಷರದೇವನ ಶೈಲಿಯನ್ನು ಕುರಿತು ಕಿರಿದುದರಲ್ಲಿಯೆ ಬಹು ಮಾರ್ಮಿಕವಾಗಿ ಬರೆದಿದ್ದಾರೆ[೨] :

' ಈತನು ಆಧುನಿಕ ಕವಿಯಾದರೂ ಇವನ ಶೈಲಿ ನಿರರ್ಗಳವಾಗಿಯೂ ಮನೋಹರವಾಗಿಯೂ ಇರುವುದಲ್ಲದೆ ಇವನ ವರ್ಣನೆಗಳು ಚಮತ್ಕಾರವಾಗಿಯೂ ಇವೆ. ಮುಖ್ಯವಾಗಿ ಇವನ ಕಂದಗಳು ಬಹಳ ರಮಣೀಯವಾಗಿವೆ. '

ಈತನ ಶೈಲಿಯ ಮುಖ್ಯಗುಣ ' ಓಜಸ್ವಿತೆ ' ಎಂದು ಹಲವು ವಿಮರ್ಶಕರು ಒಪ್ಪಿರುವರು; ' ಸಂಸ್ಕೃತಶಬ್ದಪುಂಜರಂಜಿತ 'ವಾಗಿರುವುದೇ ಇದರ ಪ್ರಧಾನದೋಷವೆಂದು ಕೆಲವರು ಹೇಳುವರು. ಆದರೆ ವಿಚಾರಮಾಡಿ ನೋಡಿದಲ್ಲಿ — ಆದಿಪಂಪ, ರನ್ನ, ಅಗ್ಗಳ ಮೊದಲಾದ ಪುರಾತನ ಚಂಪೂಕಾವ್ಯಕರ್ತೃಗಳಿಗಿಂತ ಹೆಚ್ಚಾಗಿ ಈತನು ಸಂಸ್ಕೃತಪದಪ್ರಯೋಗವನ್ನು ಮಾಡಿಲ್ಲವೆಂದೇ ಹೇಳಬಹುದು; ಮಾಡಿದನಿತಕ್ಕೆ — ಪೂರ್ವಪರಂಪರೆ, ಸಂಸ್ಕೃತಭಾಷೆಯ ಮೇಲಿನ ಈತನ ಪ್ರಭುತ್ವ, ಗಾಂಭೀರ್ಯವನ್ನು ಕಾಯ್ದುಕೊಳ್ಳುವ ಆಶೆ — ಇವೇ ಕಾರಣಗಳಾಗಿವೆ. ಆದರೂ ಈತನ ಶೈಲಿಯಲ್ಲಿ ವೈವಿಧ್ಯವಿಲ್ಲವೆಂತಲ್ಲ. ಸಂಸ್ಕೃತ ' ಮಾರ್ಗ 'ದ ಬಿಗುವಿಗೂ ಕನ್ನಡ 'ದೇಸಿ'ಯ ಸರಲತೆಗೂ ಅವೆರಡರ ಲಲಿತವಾದ ಮಿಶ್ರಣಕ್ಕೂ ಒಳ್ಳೆಯ ಉದಾಹರಣೆಗಳನ್ನು ಈತನ ಕೃತಿಗಳಿಂದಲೆ ಕೊಡಬಹುದು. ಭಾವಗರ್ಭಿತವಾದ ಚಮತ್ಕಾರಿಕವಾದ ಶ್ಲೇಷೆಗಂತೂ ಇವನದು ಎತ್ತಿದ ಕೈ.

೧ ಶಬರಶಂಕರವಿಳಾಸ : ಆ ೧, ಪ. ೧೫-೧೬. ಕವಿರಾಜಮಾರ್ಗಕಾರನು ' ಕನ್ನಡಕ್ಕೆ ನಾಡವರೊವಜರ್ ' ( ಆ ೧, ಪ. ೪೨ ) ಎಂದೂ, ' ಜಾಣರ್ಕಳಲ್ಲದವರುಂ । ಪೂಣೆಗರಱಿಯದೆಯುಮಱಿದವೋಲವಗುಣದಾ ॥ ತಾಣಮುದಿಸಿಸೆಡೆವೊತ್ತೊಡೆ । ಮಾಣದೆ ಜಡಿದದನೆ ಕೃತಿಗಳಂ ಕೆಡೆ ನುಡಿವರ್ ॥ '( ಆ ೩, ಪ. ೪೦ ) ಎಂದೂ ಹೇಳಿರುವುದರಿಂದ ನೃಪತುಂಗನ ಕಾಲದಿಂದಲೂ ಇಂತಹ ವಿಮರ್ಶಕರು ಕನ್ನಡ ನಾಡಿನಲ್ಲಿ ನೆಲಸಿರಬೇಕೆಂದೂ, ಹಾಗಿದ್ದರೆ ದುರ್ಜನರನ್ನು ನಿಂದಿಸುವ ಕನ್ನಡ ಕವಿಗಳ ಪರಂಪರೆಗೆ ಕಾರಣವಿರುವುದೆಂದೂ ಗ್ರಹಿಸಬಹುದಲ್ಲವೆ ?

೨ ಕರ್ಣಾಟಕಕವಿಚರಿತೆ ಭಾಗ ೨ : ಪು. 443.

## ( ೭ )

ಕನ್ನಡ ಸಾಹಿತ್ಯನಂದನದಲ್ಲಿ ವಿಹರಿಸಲೆಂದು ಚಂಪೂಮಾರ್ಗವಾಗಿ ಹೊರಟ ಕಾವ್ಯಶ್ರೀಗೆ ಷಡಕ್ಷರದೇವನ ಕೃತಿಗಳೆ ಚರಮವಿರಾಮಸ್ಥಾನ; ಅಲ್ಲಿಂದ ಆಕೆ ಮುಂದೇನಿದೆಯೆಂದು ನೋಡಲು ನಾಲ್ಕೆಂಟು ಅಡಿಯಿಟ್ಟು ಹಿಂದಿರುಗಿ. ಅದೇ ನಿಲ್ದಾಣಕ್ಕೆ ಬಂದಂತಿವೆ ಮುಂದಿನ ಚಂಪೂಕೃತಿಗಳು. ಪುರಾತನ ಸಾಹಿತ್ಯದ ನಿಕಟ ಪರಿಚಯವುಳ್ಳ ಸಹೃದಯರಿಗೆ ಷಡಕ್ಷರದೇವನ ಕೃತಿಗಳನ್ನು ಓದುವಲ್ಲಿ ಒಂದು ಅಪೂರ್ವ ಅನುಭವವುಂಟಾಗುತ್ತದೆ. ' ರಮ್ಯಾಣಿ ವೀಕ್ಷ್ಯ ಮಧುರಾಂಶ್ಚ ನಿಶಮ್ಯ ಶಬ್ದಾನ್ ' ಎಂಬಂತಹ ಅನುಭವ. ಕಾಳಿದಾಸಾದಿ ಸಂಸ್ಕೃತಕವಿಗಳಲ್ಲದೆ ಪಂಪ, ರನ್ನ, ನೇಮಿಚಂದ್ರ, ಅಗ್ಗಳ, — ಹರಿಹರದೇವನಂತೂ ಸರಿಯೆ — ರುದ್ರಭಟ್ಟ ಮೊದಲಾದ ಕನ್ನಡ ಕವಿಗಳ ಭಾವ, ವರ್ಣನೆ, ಪದಪ್ರಯೋಗ - ಇವುಗಳ ನೆನಪು ಈ ಕವಿಯ ಕೃತಿಗಳನ್ನು ಓದುವಾಗ ಆಗುವುದುಂಟು. ಈತನು ಆಧುನಿಕನಾದುದರಿಂದಲೂ ಹಿಂದಣ ಉದ್ದಾಮ ಕವಿಗಳ ಪ್ರಸಿದ್ಧಕೃತಿಗಳನ್ನೆಲ್ಲ ಚೆನ್ನಾಗಿ ಜೀರ್ಣಿಸಿಕೊಂಡವನಾದುದರಿಂದಲೂ ಹಿಂದಣವರನ್ನು ಸರಿಗಟ್ಟಬೇಕು, ಮೀರಬೇಕು ಎಂಬ ಉದ್ದೇಶದಿಂದ ಆ ಕಾಲದ ಪಂಡಿತರ, ವಿಮರ್ಶಕರ ಒರೆಗಲ್ಲಿಗೆ ಹತ್ತುವ ತೆರದಲ್ಲಿಯೆ ತನ್ನ ಕೃತಿಗಳನ್ನು ರಚಿಸಿರುವುದರಿಂದಲೂ ಪೂರ್ವಕವಿಗಳ ಛಾಯೆಗಳು ಇವನಲ್ಲಿ ಕಂಗೊಳಿಸುವುವು. ಆದರೆ ಇವೆಲ್ಲ ಬರಿಯ ಛಾಯೆ ಮಾತ್ರ. ಪೂರ್ವಕವಿಗಳಿಂದ ಸೂಚಿತವಾದ ಭಾವ-ವರ್ಣನೆ ಮೊದಲಾದುವುಗಳನ್ನು ಬೆಳೆಸಿ, ನ್ಯೂನತೆಗಳನ್ನು ಸರಿಪಡಿಸಿ, ತಿದ್ದಿ ಮಾರ್ಪಡಿಸಿಕೊಳ್ಳುವಲ್ಲಿ ಈ ಕವಿ ತನ್ನ ವ್ಯಕ್ತಿತ್ವ ವನ್ನು ಚೆನ್ನಾಗಿ ತೋರ್ಪಡಿಸಿದ್ದಾನೆ.

ಅನ್ಯಭಾಷಾಸಾಹಿತ್ಯಗಳಲ್ಲಿ ಕಾಳಿದಾಸ, ಶೆಕ್ಸಪಿಯರ್ ಮೊದಲಾದ ಕವಿ ಶ್ರೇಷ್ಠರೂ ಕನ್ನಡಸಾಹಿತ್ಯದಲ್ಲಿಯೆ ಪಂಪ-ರನ್ನರಂತಹ ಪ್ರಥಮಶ್ರೇಣಿಯ ಕವಿಗಳೂ ತಮಗಿಂತ ಹಿಂದಣವರ ಕೃತಿಗಳಿಂದಲೆ ಕಾವ್ಯವಸ್ತುಗಳನ್ನು ಆಯ್ದುಕೊಂಡಿದ್ದಾರೆ; ಹಲವೆಡೆ ಅವೇ ಪದಪ್ರಯೋಗಗಳನ್ನೂ ಹಿಂಜರಿಯದೆ ಮಾಡಿದ್ದಾರೆ. ಆದರೆ ತಮ್ಮ ವಿಶಿಷ್ಟ ಉದ್ದೇಶಕ್ಕೆ ಉಚಿತವಾಗುವಂತೆ ಕಥಾಸಂವಿಧಾನವನ್ನು ಮಾರ್ಪಡಿಸಿ ಕೊಳ್ಳುವಲ್ಲಿಯೂ ಹಾಗೂ ಅರ್ಥವ್ಯಕ್ತಿ, ರಸಸೃಷ್ಟಿ, ಪಾತ್ರಪೋಷಣೆ, ಹೃದಯಂಗಮ ವಾದ ಶೈಲಿ—ಇವುಗಳಲ್ಲಿಯೂ ವ್ಯಕ್ತವಾಗುವುವು ಅವರ ಪ್ರತಿಭೆ, ಸ್ವೋಪಜ್ಞತೆ, ಅವರವರ ವ್ಯಕ್ತಿತ್ವ. ಆದುದರಿಂದಲೆ, 'To borrow and be better in the borrowing is no plagiarism' ಎಂದೊಬ್ಬ ಆಂಗ್ಲಮಹಾಕವಿ ಹೇಳಿರುವಂತೆ — ಇಂತಹ ಕವಿಗಳ ತಲೆಗೆ ಕೃತಿಚೌರ್ಯದೋಷವನ್ನು ಕಟ್ಟಲೆಳಸುವುದು ಸರ್ವಥಾ ಅಯುಕ್ತವಾಗುವುದು. ಅದೇ ರೀತಿ ಒಂದೆರಡು ಪದಪ್ರಯೋಗದಲ್ಲಿ ಸಾಮ್ಯತೆ ದೊರಕಿದರೆ ಅಷ್ಟಕ್ಕೆ ' ಪೆರರರ್ಥಕೆ ಕೈದುಡುಕಿದ 'ನೆಂಬ ಅಪರಾಧವನ್ನು ಹೊರಿಸು ವುದೂ ಶುದ್ಧವಾಗಿ ಅನ್ಯಾಯವಾಗುವುದು. " ಸ್ವೋಪಾರ್ಜಿತವಾದ ವಿಪುಲ ಶಬ್ದ

ಸಂಪತ್ತಿಯುಳ್ಳ ಶೇಕ್ಸ್‌ಪಿಯರನಂತಹ ಮಹಾಕವಿಯ ಬೊಕ್ಕಣದಲ್ಲಿ ಒಂದೆರಡು ಪರಪದಗಳು ಸೇರಿದರೆ ಅದರಿಂದೇನಾಗುವಂತಿದೆ? ಇಂತಹ ಕವಿಗಳು 'ಇದಂ ಮಮ, ಏತದ್ ತವ' ಎಂಬ ಕ್ಷುದ್ರಭಾವನೆಗಳನ್ನು ಮೀರಿದವರು"[೧] ಎಂಬರ್ಥದಲ್ಲಿ ಆಂಗ್ಲ ವಿಮರ್ಶಕರೊಬ್ಬರು ಹೇಳಿರುವ ವಿಚಾರಗಳನ್ನು ನೆನಪಿಟ್ಟುಕೊಂಡೇ ಷಡಕ್ಷರ ದೇವನ ಕೃತಿಗಳ ವಿಮರ್ಶೆಗೆ ಕೈ ಹಾಕಬೇಕು.

## (೮)

ಇಪ್ಪತ್ತೈದು-ಮೂವತ್ತು ವರ್ಷಗಳ ಹಿಂದೆ ಷಡಕ್ಷರದೇವನ ಕೃತಿಗಳು ಜನಾನುರಾಗದಲ್ಲಿ ಮೇಲ್ಮಟ್ಟದಲ್ಲಿದ್ದುವು. ಈತನ ರಾಜಶೇಖರವಿಳಾಸವು ಲಕ್ಷ್ಮೀಶನ ಜೈಮಿನಿಭಾರತದೊಡನೆ ಲೋಕಪ್ರಿಯತೆಯಲ್ಲಿ ಅಗ್ರಸ್ಥಾನವನ್ನೆ ಪಡೆದಿದ್ದಿತು. ಆ ಹಿರಿಮೆ ಈಗ ಇಲ್ಲದಂತಾಗಿದೆ. ಈ ಪರಿಸ್ಥಿತಿ ಉಂಟಾಗಲು ಓದುಗರ ಅಭಿರುಚಿಯಲ್ಲಿ ಕಾಲಕಾಲಕ್ಕೆ ವ್ಯಕ್ತವಾಗುವ ಮಾರ್ಪಾಟವೊಂದೇ ಕಾರಣವೆಂದು ಹೇಳಲಾಗುವುದಿಲ್ಲ. ನಮ್ಮ ದೃಷ್ಟಿಯಲ್ಲಿ ಕಾಣುವ ಇನ್ನೂ ಕೆಲವು ಕಾರಣಗಳನ್ನು ಇಲ್ಲಿ ಹೇಳುವ ಸಾಹಸಮಾಡುತ್ತೇವೆ. ಪಾಶ್ಚಾತ್ಯ ಶಿಕ್ಷಣದ ಪ್ರಥಮ ಆಘಾತವಾದ ಆ ಕಾಲದಲ್ಲಿ ಅದರ ಪರಿಣಾಮವಾಗಿ 'ಸುಶಿಕ್ಷಿತ'ರೆನಿಸಿಕೊಂಡವರಲ್ಲಿ ಇಂಗ್ಲಿಷ ಮೊದಲಾದ ವಿದೇಶೀಯ ಸಾಹಿತ್ಯಗಳಲ್ಲಿ ಆದರವೂ, ಕನ್ನಡ ಸಾಹಿತ್ಯದಲ್ಲಿ — ಅದರಲ್ಲಿಯೂ ಪುರಾತನ ಸಾಹಿತ್ಯದಲ್ಲಿ — ಕಠಿಣವೆಂದೊ, ನೀರಸವೆಂದೊ, ವೈವಿಧ್ಯದ ಅಭಾವವೆಂದೊ, ಸಂಪ್ರದಾಯ ಶರಣವೆಂದೊ — ಅನಾದರವೂ ತಲೆದೋರಲಾರಂಭಿಸಿದುದೂ ಒಂದು ಕಾರಣವೆಂದು ಊಹಿಸಬಹುದು. ಈ ಕವಿಗಿಂತ ಹಿಂದಣವರಾದ ಕೆಲ ಉದ್ದಾಮ ಕವಿಗಳ ಕೃತಿಗಳು ಅದೇ ಬೆಳಕಿಗೆ ಬಂದುದರಿಂದ ಅವುಗಳನ್ನು ಪುರಸ್ಕರಿಸುವ ಉತ್ಸಾಹದಲ್ಲಿ ಈತನ ಕೃತಿಗಳಿಗೆ ಅವಜ್ಞೆಯುಂಟಾಗಿರಬಹುದು. ಇವೆರಡಕ್ಕಿಂತಲೂ ಹೆಚ್ಚಾಗಿ, ಈತನ ಕೃತಿಗಳಲ್ಲಿ ಕಂಡು ಬರುವ ಈತನ ಉತ್ಕಟ ಮತಾಭಿಮಾನವೂ ಒಂದು ಪ್ರಬಲ ಕಾರಣವಾಗಿರಬೇಕು : ಏಕೆಂದರೆ, ಮತಮತಗಳ ವೈಷಮ್ಯವನ್ನು ಹೋಗಲಾಡಿಸಿ ಸಹಿಷ್ಣುತೆಯನ್ನು ಸ್ಥಾಪಿಸಬೇಕಾದರೆ ಆವುದಾದರೊಂದು ಮತದ ನಿತಾಂತ ಅಭಿಮಾನವನ್ನು ಪ್ರಕಟಿಸುವ ಕೃತಿಗಳ ಅವಜ್ಞೆಯೇ ಪರಿಣಾಮಕಾರಕವಾದವೊಂದು ಮಾರ್ಗವೆಂಬ ತಪ್ಪುತಿಳಿವಳಿಕೆ ಕೆಲದಿನಗಳ ಹಿಂದೆ ರೂಢವಾಗಿದ್ದಿತು. ಈ ತಿಳಿವಳಿಕೆಯ ಮೂಲಕವಾಗಿಯೆ 'ಹರಹರಾ ಶ್ರೀಚೆನ್ನಸೋಮೇಶ್ವರಾ' ಎಂಬ ಅಂಕಿತವನ್ನು 'ನರನೆಲಾ ಕೇಳ್ದಿಪ್ಪುದೀ

೧ "Shakespeare can take his 'borrowed plumes' from whatever humble bird he likes...These gods are beyond the range of our pettifogging 'meums and tuums.' Their pockets are so rich that a few coins that do not belong to them are no matter either way."— *A. G. Gardiner*

ಬುದ್ಧಿಯಾ' ಎಂದೂ 'ಪಾಲಿಸಯ್ಯಾ ಪಾರ್ವತೀಶ್ವರಾ' ಎಂಬ ಪಲ್ಲವಿಯನ್ನು 'ಪಾಲಿಸಯ್ಯಾ ಕರುಣಸಾಗರಾ' ಎಂದೂ ತಿದ್ದಿ ಮುದ್ರಿಸಿದ ಉದಾಹರಣೆಗಳು ಆಗ ಬಳಕೆಯಲ್ಲಿದ್ದ ಪಠ್ಯಪುಸ್ತಕಗಳಲ್ಲಿ ಕಣ್ಗೊಳಿಸುತ್ತವೆ. ಆದರೆ ಈ ಪರಿಸ್ಥಿತಿ ಈಗೀಗ ಮತ್ತೆ ಮಾರ್ಪಡಲಾರಂಭಿಸಿರುವುದು. ಪರಧರ್ಮಸಹಿಷ್ಣುತೆಯ ನಿಜವಾದ ಮರ್ಮವು ತಿಳಿದಿರುವುದರಿಂದ ಆಯಾ ಧರ್ಮಪ್ರಚಾರಕರ ಜೀವನ-ಕಾರ್ಯ ಮೊದಲಾದುವುಗಳನ್ನು ತಿಳಿದುಕೊಳ್ಳುವ, ಆಯಾ ಮತಪ್ರಚೋದಿತ ಸಾಹಿತ್ಯವನ್ನು ಸಹಾನುಭೂತಿಯಿಂದ ಪರಿಚಯಮಾಡಿಕೊಳ್ಳುವ ಕುತೂಹಲವು ಇತ್ತೀಚೆಗೆ ಹೆಚ್ಚುತ್ತಿರುವುದು ಒಂದು ಶುಭಲಕ್ಷಣ. ಅಂತೂ ಸಾವಿರಾರು ವರ್ಷಗಳಿಂದ ಬೆಳೆಯುತ್ತ ಬಂದಿರುವ ನಮ್ಮ ನಾಡ ಸಾಹಿತ್ಯದಲ್ಲಿಯ ಉತ್ತಮೋತ್ತಮ ಕೃತಿಗಳನ್ನು ಕುರಿತು ಅಭಿಮಾನವನ್ನು ನಾವು ಎಲ್ಲಿಯವರೆಗೆ ತಾಳುವೆವೊ, ಎಲ್ಲಿಯವರೆಗೆ ನಾವು ಉದ್ದಾಮರಾದ ಶ್ರೇಷ್ಠವರ್ಗದ ಕನ್ನಡ ಕವಿಗಳನ್ನು ಹೆಸರಿಸುವೆವೊ ಅಲ್ಲಿಯವರೆಗೆ ಷಡಕ್ಷರದೇವನನ್ನು ಮರೆಯುವುದು ಸಾಧುವಲ್ಲ, ಸಾಧ್ಯವಿಲ್ಲ.

---

### ತಿದ್ದುಪಡಿ

ಪುಟ ೪ ಸಾಲು ೨೪ 'guilded' ಎಂಬುದಕ್ಕೆ 'gilded' ಎಂದು ಓದಿಕೊಳ್ಳಿರಿ.

ಶ್ರೀ ಗುರುಬಸವಲಿಂಗಾಯ ನಮಃ

# ಶಬರಶಂಕರವಿಳಾಸಂ

## ಪ್ರಥಮಾಶ್ವಾಸಂ

ಸ್ರಗ್ಧರೆ

ಶ್ರೀಮತ್ಕಲ್ಯಾಣರೂಪಂ ಶರಭವನಗಜೋತ್ಸಂಗನಭ್ರಾಂತಯೋಗಾ
ರಾಮಾಂಚತ್ಪಾದಪದ್ಮಂ ಸುರುಚಿಗಣಪವಿಭ್ರಾಜಿತಂ ಸಾರಸತ್ವ
ವ್ಯಾಮಿಶ್ರಾಹೀನಚಂಚತ್ಕಟಕನಧಿಕದಿವ್ಯಾಗಮಂ ಸ್ವಸ್ಥಿಲೋಕ
ಸ್ತೋಮಂ[೧] ಭ್ರಾಜಿಷ್ಣುವೆಮ್ಮಂ ಪೊರೆಗೆ ವಿತತಭಾಸ್ವತ್ಪ್ರಕಾಶಂ ಗಿರೀಶಂ * ೧

ಚಂಪಕ.

ಸುರರಮಣೀಕದಂಬಕಬರೀಭರಕಾಂತಿಕಳಿಂದಜಾಂಬುವಿ
ಸ್ಫುರಿತಪದಾಂಬುಜಾತೆ ಕರಿರಾಣ್ಮುಖಷಣ್ಮುಖಮಾತೆ ಸದ್ಗುಣಾ
ಭರಣೆ ಕೃಪಾಸುಧಾರಸತರಂಗಿಣಿ ಸಾರಕಳಾಧುರೀಣೆ ಶಾಂ
ಕರಿ ಪೊರೆಯೆನ್ನನನ್ವಿತಶುಭೋದಯೆ ಶೈಲಜೆ ಸರ್ವಮಂಗಳೇ ೨

ವಿಳಸಿತಕೃಷ್ಣವೇಣಿ ಸುಸರಸ್ವತಿ ಸನ್ನುತತುಂಗಭದ್ರೆ ಮಂ
ಜುಳಕಪಿಲಾಂಗಿ ಭೀಮರತಿ[೨] ಸಂಗತಶೈಸೈಂಧವಿ ಧೂತಪಾಪೆ ಮಂ
ಗಳರುಚಿಪೂರ್ಣಪುಷ್ಕರಣಿ ಗೋಮತಿಯೆಂದೆನಿಸಿರ್ದ ನಿತ್ಯನಿ
ರ್ಮಳೆ ಸಲೆ ಮಾಟ್ಕೆ ಹೈಮವತಿ ಸದ್ವಿಮಳತ್ವಮನೆಮ್ಮೊಳಾವಗಂ ೩

೧ ಸ್ತೋಮ (ತ, ಯ, ಲ) ೨ ರಥಿ (ಯ, ರ, ಲ, ಸ) ೩ ಗತೆ (ಸ)

* ಈ ಪದ್ಯದ ಬದಲು 'ಯ' ಪ್ರತಿಯಲ್ಲಿ ಕೆಳಗಿನ ಪದ್ಯವಿದೆ:

ಶ್ರೀಮತ್ಪದ್ಮಾಕ್ಷಮುಖ್ಯಾಮರಮುಕುಟಮರುತ್ಪನ್ಮಣಿಶ್ರೇಣಿಭೃಂಗ
ಸ್ತೋಮಾಂಚತ್ಪಾದಪದ್ಮಂ ಗಿರಿವರತನಯಾನೇತ್ರನೀಲಾಬ್ಜಚಂಚತ್
ಸೋಮಂ ಭಕ್ತೌಘಕಲ್ಪದ್ರುಮನಮಿತಕೃಪಾಸಾಗರಂ ಭವ್ಯಲೀಲೋ
ದ್ದಾಮಂ ಕೂರ್ತೀಗೆ ಸದ್ಭಕ್ತಿಯನೆಮಗೆ ವೃಷಾಧೀಶಪತ್ರಂ ತ್ರಿಣೇತ್ರಂ

ಮತ್ತೇಭ.

ಹರಭಕ್ತಿಪ್ರಮದಾಮುಖೈಕಮುಕುರಂ ಶೈವಾಗಮಾಂಭೋಜಭಾ
ಸ್ಕರಬಿಂಬಂ ಗುಣರತ್ನಭೂಷಣನುಮೇಶಧ್ಯಾನಸಂಪನ್ನನ
ಕ್ಷರಸದ್ಧರ್ಮಕಳೇವರಂ ಮೃಡಮತಾಂಭೋರಾಶಿರಾಕಾಸುಧಾ
ಕರನಾದ್ಯಂ ವೃಷಭೇಶ್ವರಂ ಸಲಹುಗೆಮ್ಮಂ ಭಕ್ತಕಲ್ಪದ್ರುಮಂ * ೪

ಚಂಪಕ.

ಅವಿಕಳಶಕ್ತಿಯುಕ್ತರಕಳಂಕಚರಿತ್ರರನಂತಸದ್ಗುಣಾ
ರ್ಣವರಭವಸ್ವರೂಪರಖಿಳಾಗಮವೇದಿಗಳರ್ದಿತಾನ್ಯವಾ
ದಿವರರಮಂದಕೀರ್ತಿಯುತರರ್ಥಿಸುರೋರ್ವಿಜರಪ್ರತರ್ಕ್ಯಗೌ
ರವರಭಿವಂದ್ಯರಕ್ಕೆಮಗಶೇಷಪುರಾತನರೀಶ್ವರಾರ್ಚಕರ್ ೫

ಹರಸುಕುಮಾರಷಣ್ಮುಖನ ದಕ್ಷಮುಖಾರಿಯ ಲಿಂಗಸಂಗವಿ
ಸ್ಫುರಿತನ ನಂದಿಕೇಶ್ವರನ ಭೃಂಗಿಯ ರೇಣುಕದಾರುಕಾದಿಭಾ
ಸುರಮಹಿಮಾಂಕಸತ್ಪ್ರಮಥವರ್ಯರ ಪಾದಪಯೋರುಹಕ್ಕೆ ಭ
ಕ್ತಿರಸದಳುರ್ಕೆಯಿಂ ನೆಗೞ್ದಿಪೆಂ ಕರಣತ್ರಯದಿಂ ಪ್ರಣಾಮಮಂ ೬

ಮತ್ತೇಭ.

ಕನಕಕ್ಷ್ಮಾಧರವಪ್ರದೊಳ್[೧] ನೆಗೞ್ದು ವಪ್ರಕ್ರೀಡೆಯಂ ನೀಳ್ಕಿ[೨] ನಾ
ಕನದೀವಾರಿಯನೀಂಟಿ ಫೂತ್ಕರಿಸಿ ತತ್ಪಂಕೇಜಮಂ ಕೊಂಡು ಭೋಂ
ಕನೆ ನೀರಾಟಮನಾಡಿ ಪಾಲ್ಗಡಲೊಳುದ್ಯದ್ಬಾಲಲೀಲಾಪ್ರವ
ರ್ತನಮಂ ತಾಳ್ದಿಭವಕ್ತ್ರನೀ ಕೃತಿಗಜಸ್ರಂ ಮಾೞ್ಕೆ ನಿರ್ವಿಘ್ನಮಂ ೭

ಶ್ರುತಿನುತ್ಯವೀರಶೈವಾ
ಶ್ರಿತರ ಪರಾಭೂತದುರ್ಮತಪ್ರಕರರ ಸ
ಮ್ಮತ[೩]ರ ವಿತತಪ್ರಭಾವರ
ಚತುರಾಚಾರ್ಯರ ಪದಾಬ್ಜ[೪]ಕಾಂ ನ[೪]ತನಪ್ಪೆಂ ೮

ಗುರುಸೋಮನಾಥಹರಿಹರ
ಹರಕವಿಪದ್ಮರಸಮುಖ್ಯರಂ ಬಲವಂದಾ
ದರದಿಂದೆ ಮಣಿದು ನೆಗೞ್ದಿಪೆ[೫]
ನುರುತರಶಿವಲೀಲೆ ಮಿಸುಪ ಸತ್ಕೃತಿಯನಿದಂ ೯

೧ ಸಾನುವೊಳ್ (ಯ) ೨ ನಿಳ್ಕಿ (ಜ, ಯ, ರ) ೩ ನ್ನುತ (ಯ, ಲ) ೪–೪ ಕಾನ (ಕ, ಯ, ವ) ೫ ಪೇೞ್ದಿಪೆ (ಗ, ತ)

* ಈ ಪದ್ಯವು 'ಯ' ಪ್ರತಿಯಲ್ಲಿ ಮೂರನೆಯ ಪದ್ಯಕ್ಕೆ ಮೊದಲು ಬಂದಿದೆ.

ಚಂಪಕ.

ಕಿವಿಗಮದರ್ಗೆ ನಲ್ನುಡಿಯೊಡಂಬಡೆ ಬಂಧದಳುರ್ಕೆ ದೇಸಿಯು
ತ಼್ವಮನೊಡರ್ಚೆ ಸೊಂಪು ಸುಟಿದಾಡೆ ರಸಂ ಪೊಸತಾಗಿ[೧] ಕಾಬ್ಬುರಂ
ಕವಿಯೆ ಪೊದಬ್ದಿ[೨] ಭಾವಮದು ನಾಂಟೆ[೩] ರಸಜ್ಞರ ಚಿತ್ತಮಂ ಮನೋ
ಭವನಲರಂಬಿನಂತೆ ಕೃತಿವೇಬ್ವುದು ಕಬ್ಬಿಗನುರ್ಬಿ[೪] ಧಾತ್ರಿಯೊಳ್ ೧೦

ಸುಕವಿಮುಖೇಂದುವಿಂದೊಗೆವ ಸತ್ಕೃತಿಚಂದ್ರಿಕೆ ಪರ್ಬಿ ಸದ್ಬುಧ
ಪ್ರಕರಚಕೋರಮಂ ತಣಿಪಿ ವರ್ಧಿಸಿ ನೇತ್ರಯಶಸ್ಸುಧಾಬ್ಧಿಯಂ
ಸಕಳರಸಜ್ಞಹೃತ್ಕುಮುದಸಮ್ಮು[೫]ದಮಂ ನೆಗಬ್ದಿರ್ಪಿನಂ ಸಮು
ತ಼್ುಕತೆಯನೇಕೆ ತಾಳ್ಗುಮದಱ[೬]ೊಳ್ ಖಳಚಕ್ರಚಯಂ ಧರಿತ್ರಿಯೊಳ್ ೧೧

ಮತ್ತೇಭ.

ಗಲಿತಾಲಂಕೃತಿ ವೀತಧಾತು ಶಿಥಿಲೀಭೂತಾಂಗಿ ದೋಷಪ್ರಜಾ
ಕುಲೆ ಭಾಸ್ವದ್ರಸವೃತ್ತಿವರ್ಜಿತೆ ಸದಂತತ್ವಾತಿ[೬]ನಿರ್ಮುಕ್ತೆ ರಿ
ಕ್ತಲಸತ್ಪದ್ಧತಿ ಶಯ್ಯೆಗಿಂಬೆನಿಸದಾದಂ ದುರ್ಗುಣಂಬೆತ್ತ[೭] ದು
ರ್ಬಲವದ್ದುಷ್ಕೃತಿವೃದ್ಧೆ ಸದ್ರಸಿಕಚೇತೋರಾಗಮಂ ಮಾಳ್ಪಳೇ ೧೨

ಜ್ವರತಪ್ತಂ ಸುಧೆಯಂ ಸುಧಾಂಬುನಿಧಿಯಂ ಭೇಕಂ ಸುಧಾರೋಚಿಯಂ
ವಿರಹಾವಿಷ್ಟನನಂತರತ್ನರುಚಿಯಂ ಘೂಕಂ ರಣದ್ವೀಣೆಯಿಂ
ಚರದೊಳ್ಪಂ ಬಧಿರಂ ಲಸನ್ಮುಕುರಮಂ ಜಾತ್ಯಂಧನುದ್ಯದ್ಗುಣಾ
ಕರಸತ್ಕಾವ್ಯಮನಜ್ಞನೇಂ ಪಟಿಯೆ ಕುಂದಾದಪ್ಪುದೇ ಧಾತ್ರಿಯೊಳ್ ೧೩

ಧರೆಯೊಳ್ ಸದ್ಬುಧನುರರೀ
ಕರಿಸಿದ ಸತ್ಕೃತಿಯನಧಮನೇಗೆಯ್ವನೊ ಭಾ
ಸ್ಕರಕರಗೃಹೀತನಳಿನಮ
ನುಡುದೋಷಾಕರನದೆಂತುಮೇಂ ಕೊರಗಿಪನೇ ೧೪

ತೆಗಟಿಲ್ [೮]ಬಲ್ಲಂ ಖಳನೇಂ[೮]
ನೆಗಟಿಲ್ ಬಲ್ಲನೆ ನವೀನಕೃತಿಯಂ ಶಾಖಾ
ಮೃಗಮಲರ ಮಾಲೆಗೀಟಿಲ್
ಮಿಗೆ ಬಲ್ಲುದದಲ್ಲದಂತಿರೇಂ ರಚಿಯಿಕುಮೇ ೧೫

೧ ತಾಗೆ (ಚ) ೨ ದಬ್ದಿ (ಜ, ರ) ೩ ನಾಂಟೆ (ಕ, ಜ) ೪ ರುರ್ಬಿ (ಚ) ೫ ಸಮ್ಮು (ಕ) ೬ ತಸ್ಸಾರ (ರ) ೭ ಬೆತ್ತು (ಚ) ೮-೮ ಬಲ್ಲ ಖಳಂ ತಾಂ (ಚ, ಜ); ಬಲ್ಲಂ ಖಳ ತಾಂ (ಗ, ತ)

ಪಿರಿದಾಯಾಸದೆ ಗುಣಮಂ
ದೊರೆಕೊಳಿಸಿದೊಡಂ ಖಲಂಗೆ ಗುಣಮುಂ ಪಶ್ಚಾತ್
ಕರಿಸಿ ಗುಣಿಯಂ ವಿಭೇದಿಪ
ಪರಿ ತೀಕ್ಷ್ಣಮುಖಂಗೆ ಸೂಚಿ[1]ಯಂತಿರೆ ಸಹಜಂ ೧೬

ಅಜನಜಡನೆಂದು ನುಡಿವುದು
ಕುಜನತೆ ಜಡಜಾತಜಾತನೆಂತಜಡನವಂ
ಸುಜನವಿರೋಧಿಯನಜಡಂ
ಸೃಜಯಿಪನೆ ಪರೋಪತಾಪಫಲನಂ ಖಲನಂ ೧೭

ಇನಿವಣ್ಗಳಿರೆ ಬಿಸುಟ್ಟೊ
ಯ್ಯನೆ ವನಮಂ ಪೊಕ್ಕು ಕಾಕನೊಲ್ವ[2]ದು ಗಡ ಬೇ
ವಿನ ಪಣ್ಣಂ ಲೇಸಂ ಬಿ
ಟ್ಟೆನಿಸುಂ[3] ಕೃತಿಯಲ್ಲಿ ದೋಷಮಂ ಖಲನೊಲ್ವಂ ೧೮

[4]ಪಟಿಕೆಯ್ವಂ ಖಲನೆಂ[4]ದಾಂ
ಮುಳಿಯೆಂ ಗುಣಗಣಮನ[5]ಮಳಮಣಿದರ್ಪಣಮೋಂ
ತೊಳಗದೆ ಬೆಳಗೆ ತದೀಯೋ
ಜ್ವಳತೆಗೆ ಕಾರಣಮಿದೆಂದು ತಿಳಿದುದಱಿಂದಂ ೧೯

ಖಲಬುದ್ಧಿಗೆ ಸತ್ಕಾವ್ಯದೊ
ಳಲರ್ದ ಗುಣಂ ದೋಷಮಾಗಿ ತೋರ್ಕುಂ ರವಿಯು
ಜ್ವಲರುಚಿ ಕೌಶಿಕದೃಷ್ಟಿಗೆ
ಸಲೆ ಮರ್ಬೆನಿಪಂತಿರಾತ್ಮದೋಷೋನ್ನತಿಯಿಂ ೨೦

ತಣಿವಣಮಿಲ್ಲನ್ಯರ ಗುಣ
ಗಣಮಂ ಸಲೆ[6] ಪೊಗಳ್ವ ತೆಗಳ್ವ[6] ಸುಜನನ ಖಲನು
ಳ್ಬಣರಸನೆಗಮಿಂತಿದು ಲ
ಕ್ಷಣಮಿರ್ವರ್ಗಂ ವಿಧಾತೃವಿಹಿತಂ ಜಗದೊಳ್ ೨೧

೧ ಸೂಜಿ (ಗ, ತ) ೨ ನೊಲ್ದು (ಗ, ಚ, ಜ, ತ) ೩ ಟ್ಟೆನಿಸಂ (ಚ) ೪-೪ ಪಳಿ ಕೈಪ್ರಂ ಖಳಗೇ (ಗ, ಚ, ಜ) ೫-೫ ಪಳಿಕೈವಂ ಗುಣಗಣಮುಂ। ಖಳನೆಂದಾಂ ಮುಳಿಯೆನ (ಯ, ಲ) ೬-೬ ಪೊಗಳೆ ತೆಗಳೆ (ಯ)

ಘನರಸಮಂ ಪದೆದೀಂಟುವ
ವಿನುತಂ ಚಾದಗೆ ಕುಮಾರಿಯಂ ಕುಡಿವುದೆ ನೂ
ತನರಸವತ್ಕೃತಿಗೆಳಸುವ
ಮನುಜಂ ಮಱಿದಾದೊಡಲ್ಪಕೃತಿಗೆಳಸುವನೇ ೨೨

ಅಳಿಯಲರಂ[೧] ಗಿಳಿ ಪಣ್ಣಂ
ತಳಿರಂ ಪಿಕನೊಲ್ವ ತೆಱವೆ ಕುಜದೊಳ್ ಕೃತಿಯೊಳ್
ವಿಳಸಿತಪದಮುಮನರ್ಥಮ
ನಳಂಕೃತಿ[೨]ಪ್ರಹಿತಭಾವಮಂ ಕೆಲರೊಲ್ವರ್ ೨೩

ರಸವತ್ಕಾವ್ಯದ ರಸಮಂ
ರಸಿಕರ್ಕಳ್ ಬಲ್ಲ ತೆಱದಿನಱಿವರೆ ಗಾಂಪರ್
ಸಸಿ[೩]ಜೊನ್ನದಿನಿದನಱಿವುವೆ
ಮಿಸುಪ ಚಕೋರಂಗಳಂತಿರುಱಿದ ಖಗಂಗಳ್ ೨೪

ಪ್ರಣುತಗುಣನಿಧಿಗಳತಿಲಾ
ಕ್ಷಣಿಕರ್ ಮೃಡಭಕ್ತಿಭಾವಿತರ್ ಸದ್ವಿಬುಧರ್
ಪ್ರಣಯದಿನೆನ್ನೀ ಕಬ್ಬಮ
ನಣಿಯರಮಾಲಿಸುಗೆ ತಿರ್ದಿಗೋವುಗೆ[೪] ಸತತಂ ೨೫

ಚಂಪಕ.

ಇದು ಪೊಸರೀತಿ ನೋಡಿದು ನವೀನಮಲಂಕೃತಿ ನವ್ಯಭಾವಮಿಂ
ತಿದು ನವವೃತ್ತಿ ಲೇಸಿದು ರಸಸ್ಥಿತಿ ನೂತ್ನಮಿದಲ್ತೆ ನೂತನಂ
ಪದರಚನಾವಿಲಾಸಮಿದು ಕಬ್ಬಮಪೂರ್ವಮಿದೆಂದು ಕಬ್ಬಿಗರ್
ಪವೆದೊಲವಿಂದೆ ಕೀರ್ತಿಸೆ ನಿಮಿರ್ಚುವೆನೀ ಸುಭಗಪ್ರಬಂಧಮಂ ೨೬

ಉತ್ಪಲ.

ಜೇಂಗೊಡದಂತೆ ಝೇಂಕರಿಪ ತುಂಬಿಗಳಿಂಚರದಂತೆ ಪೆಂಪನಾ
ಳ್ದಿಂಗಡಲಂತೆ ಪತ್ತೆಸೆವ ಮಾಮರದಂ[೫]ತೆ ಪಯೋಜದಂತೆ[೫] ಬೆ
ಳ್ದಿಂಗಳ ಸೊಂಪಿನಂತೆ ಸುಸಿಲಾಸೆಯ ನಲ್ಲಳ ನೋಟದಂತೆ ಚಿ
ತ್ತಂಗೊಳಲಾರ್ಪುದೀ ಕೃತಿ ಷಡಕ್ಷರಿದೇವಕೃತಂ ರಸಜ್ಞರಾ ೨೭

೧ ರಲಂ (ಜ) ೨ ಕೃತಿ (ಯ, ಲ) ೩ ಪೊಸ (ಯ, ಲ) ೪ ಗೋದುಗೆ (ಯ, ರ) ೫-೫ ತೆಳ
ಗಾಳಿಯಂತೆ (ಯ, ಲ)

ಮತ್ತೇಭ.

ಘನಕಾಂತಾಸ್ತನಮಂ ಕುಲೀನಜನಮಂ ಸದ್ವೃತ್ತಶೋಭಾವಹಂ
ವನಮಂ ಮಾಧವನಂ ಪ್ರಕೀರ್ಣಸುಮನೋಜಾತೋತ್ಸವಂ ಕಂಜಕಾ
ನನಮಂ ಭೂವರನಂ ರಸಾತಿಶಯಸೌಭಾಗ್ಯೋದಯಂ ಪೋಲ್ತು ಪೆಂ
ಪಿನಲಂಪಿಂದೆಸೆಗುಂ ಪ್ರಬಂಧಮಿದು ಸರ್ವೋರ್ವೀನುತಂ ಸಂತತಂ ೨೮

ಉತ್ಪಲ.

ಮಾಣಿಸಿ ಕಂಬಳಾಶ್ವತರ ಗಾನಮುನಂತಿರವೇಟ್ಟು ವಾಣಿಯಾ
ವೀಣೆಯ ನುಣ್ಪುವೆತ್ತ ಸರಮಂ ಕಡೆಗಣ್ಚಿ ನಿಜಾಗ್ರದೇಶದೊಳ್
ಜಾಣೆಸೆದಿರ್ಪನಂ ಪಡೆದು ಪಾಡುವ ಗಂದರರಂ ಕಡಂಗಿ ಕ
ಲ್ಯಾಣಿಯ ಕಾಂತನಾಲಿಸುಗೆ ಸದ್ರಸವೊಪ್ಪುವ ಮತ್ಪ್ರಬಂಧಮಂ ೨೯

ಮಹಾಸ್ರಗ್ಧರೆ

ಜ್ವಲದೌರ್ವಜ್ವಾಲೆ ಫಾಲಾಂಬಕಶಿಖಿಯಹಿ ಭೂಷಾಹಿ ಡಿಂಡೀರಮಾ ಪಾಂ
ಡುಲಸದ್ಭಸ್ಮಂ ಪ್ರವಾಳೋತ್ಕರಮರುಣಜಟಾಮಂಡಲಂ ವಿದ್ಯುದುದ್ಯ
ಜ್ಜ್ವಲದಂ ವ್ಯಾಘ್ರಾಜಿನಂ ರಾಜಿಸೆ ಭೃತಭುವನಂ ಭೂರಿಸತ್ವಾಶ್ರಯಂ ನಿ
ಸ್ತುಲಗಾಂಭೀರ್ಯಂ ಕರಂ ಕಣ್ಗೊಳಿಸಿದನಭವಾಕಾರಮುದ್ರಂ ಸಮುದ್ರಂ ೩೦

ಮತ್ತೇಭ.

ಕುಡಿದಂ ಕುಂಭಜನೆನ್ನನಾತ್ಮವಧುವೊಳ್ ಕೂಡಿರ್ದನೆಂದಿಂದರಂ
ಕಡೆದಂ ತನ್ನಹಿತಾದ್ರಿಗಾಂ ಶರಣಮೆಂದಾ ರಾಘವಂ ಕಟ್ಟಿ ಮೇಣ್
ತಡೆದಂ ಕಾದೊಳಕೆಯ್ದನೆಂದು ಪಗೆಯಂ ಹಾಲಾಹಲಂಗೊಟ್ಟೊಡಂ
ವೃಡನೊರ್ವಂ ಮುಳಿಯಂ ಗಡೆಂದುಲಿವವೋಲುದ್ಘೋಷಿಕುಂ ಸಾಗರಂ ೩೧

ಮಹಾಸ್ರಗ್ಧರೆ

ಮಗನೊರ್ವಂ ಪುಟ್ಟಿ ದೋಷಾಕರನೆನಿಸಿದನೆನ್ನೊಳ್ಮ[೧]ಗಳ್ ಪಾಱುಗೆಯ್ತುಂ
ಮಿಗೆ ನಿಚ್ಚಂ ಪಂಕಜಾತಾಶ್ರಿತೆಯೆನಿಸಿ ಕುಭೃದ್ವರ್ಗದೊಳ್ ಕ್ರೀಡಿಪಳ್ ನಾ
ಕಿಗಣಂ ಸರ್ವಸ್ವಮಂ ಮೇಣ್ ಕವರ್ದುದಕಟ ಭಂಗಕ್ಕೆ ಪಕ್ಕಾದೆನೆಂದಾ
ತ್ಮಗತೌರ್ವಾಗ್ನಿಚ್ಛಲಂಬೆತ್ತಬಲುರಿಯೊಳಕೊಂಡಂತೆ ತೋರ್ಕುಂ ಸಮುದ್ರಂ

ಚಂಪಕ.

ಪ್ರತಿಗಜಮೆಂದು ಕಾ[೨]ಮುರ್ಗಿಲನೀಡಿ[೩]ವಾನೆಗಳಿಂ ಪಯೋದಗ
ರ್ಜಿತಕಗಿ[೩]ದೋಡುವಂಚೆಗಳ ಬಾಯ್ಗಳಿನೊಕ್ಕಮೃತಂಗಳಂ[೪] ತುಡುಂ
ಕುತೆ ಮಿಗೆ ನುಂಗುವಂಬುಚರದಿಂ ಬಡಬಾನಲನೆಂದು ವಿದ್ರುಮ
ಪ್ರತತಿಯನಿರ್ಕಿಲಕ್ಕೊಲೆವ ನಕ್ರದಿನದ್ಭುತಮಾಯ್ತು ಸಾಗರಂ ೩೩

೧ ನೆನ್ನೊರ್ಮ (ಯ, ಲ) ೨ ಕ (ಯ) ೩ ಕೊಗೆ (ಜ) ೪ ಮೃಣಾಲಮಂ (ಯ)

ಚಂಪಕ.

ಪರಿವ ಪಡಂಗು ಬಲ್ದಿರೆಯ ಸಾಲ ಬೆಡಂಗು ನವೀನವಿದ್ರುಮೋ
ತ್ಕರದ ಪೊದಟ್ಕೆ ಶುಕ್ತಿಜದಳುರ್ಕೆ ಸರೋಜದ ಗುಣ್ಪು[೧] ತೀರಭಾ
ಸುರತರತಾಳನಂದನದಲಂಪು ಪುಟಿಲ್ಗಳಡರ್ಪು ಜೆಲ್ವ ಬಿ
ತ್ತರಿಸೆ ಪೊಡರ್ಪುವೆತ್ತು ಬಗೆಗೊಂಡುದು ಪೂರ್ಣಗುಣಂ ಮಹಾರ್ಣವಂ ೩೪

ಪರಿವೃತಮಾದ ತದ್ವನಧಿ ವಾರಿಸಮುನ್ಮಿಳಿತಾಲವಾಲದಂ
ತಿರೆ ಮಕರಂದಪೂರಮೆನೆ ನಿರ್ಝರಮಲ್ಲಿಱಿಗಿರ್ದ ವಾರ್ಧರೋ
ತ್ಕರಮಳಿರಾಜಿಯಂತೆಸೆಯೆ ಪೂತಲರ್ದೊಪ್ಪುವ ಕರ್ಣಿಕಾರಭಾ
ಸುರನಗದಂತೆ ಕಣ್ಗೆ ನಿದನಾಳ್ದುದು ಭೂರಿಸುವರ್ಣಭೂಧರಂ ೩೫

ನಿಶಿತವಿಷಾಣದಿಂ ಪ್ರುಡವೃಷಾಧಿಪನೀಡಿಱಿದೆತ್ತೆ ತತ್ಕ್ಷತ[೨]
ಪ್ರಸರಮೆ ತಪ್ಪಲಲ್ಲಿ ಲಿಪಿಯಂತಿರೆ ವಿಶ್ವಕಧೀಶನೊರ್ವ[೩]ನೆ
ನಿಸಿದ[೩]ನುಮೇಶನೆಂದು ಬಿದಿ ಶಾಸನಮಂ ಬರೆದಿಟ್ಟು ನಟ್ಟ ನ
ಲ್ಮಿಸುನಿಯ ಕಂಬದಂತೆಸೆದುದಾ ಗಿರಿ ದೇವನದೀಮಿಳತ್ತಟಂ ೩೬

ಮತ್ತೇಭ.

ಮರಮೆಲ್ಲಂ[೪] ಸುರಪಾದಪಂ ಮಿಸುಪ ಕಲ್ಲೆಲ್ಲಂ ಮಣಿಶ್ರೇಣಿ ನಿ
ರ್ಝರಮೆಲ್ಲಂ ಸುಧೆ ಧೇನುವೆಲ್ಲಮನಿಶಂ ಸ್ವರ್ಧೇನುವೃಂದಂ ವನೇ
ಚರರೆಲ್ಲರ್ ಖಚರರ್ ಲತಾಪ್ರತತಿಯೆಲ್ಲಂ ಕಲ್ಪವಲ್ಲೀಕುಲಂ
ಪಿರಿದಿಂತೊಪ್ಪುಗುಮೆಂದೊಡಾ ಗಿರಿಯ ಪೆಂಪಂ ಬಣ್ಣಿಸಲ್ ಬರ್ಕುಮೇ ೩೭

ಚಂಪಕ.

ಪೊಳೆವ ಹರಿನ್ಮಣಿದ್ಯುತಿಯನರ್ಕನ ವಾಜಿ ಕಱುಂಕೆಗೆತ್ತು ಸಾ
ರ್ದೆಳಸುಗುಮಿಂದ್ರನೀಲರುಚಿಯಂ ಪೊಸಕಟ್ತಲೆಗೆತ್ತು ತತ್ತ ಬಾಂ
ಬೊಟಿಯ ರಥಾಂಗಯುಗ್ಮಮಗಿದಾಗಳೆ ಬಿರ್ಚುಗುಮಲ್ಲಿಯುತ್ಪಳಾ
ವಳಿ ತಿಳಿಜೊನ್ನಮೆಂದಲರ್ಗುಮಾ ನಗದಿಂದುಮಣಿಪ್ರಕಾಶಮಂ ೩೮

ಮಿಗದೇರನ ಮಿಗಮಲ್ಲಿಯ
ಮಿಗವಗೆಯ ರವಕ್ಕೆ ಪೆಳರ್ದು ನೋಟ್ಪಂದಮದೇಂ
ಸೊಗಯಿಸಿದುದೊ ಸವಿನೋಟದ
ಬಗೆಯಂ ಖಚರಾಬಲಾಳಿಗುಪದೇಶಿಪವೋಲ್ ೩೯

೧ ನುಣ್ಪು (ರ, ವ) ೨ ತದ್ಧತ (ರ) ೩-೩ ನೇ | ಸಿಸದ (ಯ) ೪ ನೆಲ್ಲಂ (ಯ)

ಚಂಪಕ.

ಪೊಸಸುಸಿಲೊಳ್ ಮನೋರಮಣನಿಟ್ಟ ನಖಕ್ಷತಮಂ ಕುಚಾಗ್ರದೊಳ್
ಮಿಸುಪ ಸೆಱಂಗನೋಸರಿಸಿ ನೇಹದೊಳೀಕ್ಷಿಪ ಮುಗ್ಧೆ ಮಿಂಚೆ[೧] ಮಿಂ
ಚಸವಸದಿಂ ಮುಗಿಲ್ ಪದೆದು ನೋೞ್ಪುದಿದೆಂದು ಮುಸುಂಕಿ ಮೇಲುದಂ
ಮಸಗಿದ ಲಜ್ಜೆಯಿಂದೆಱಗಿದಳ್ ಕರದಿಂ ತಿರುಪುತ್ತೆ ಹಾರಮಂ ೪೦

ಸುರತರುಮೂಲನೀಲಮಣಿವೇದಿಕೆಯಗ್ರದೊಳಿರ್ದು ಪಾಡುವ
ಚ್ಚರಿಯರ ಗಾನದಿಂಪು ಕಿವಿಯಂ ಪುಗೆ ಪೋಗದೆ ನಿಂದ ತನ್ನ ಮೆ
ಯ್ಯೆರಲೆಯ ಮೆಯ್ಯೊಳೆೞ್ದ ಪುಳಕಾಂಕುರಮಂಗಮನೆಯ್ದೆ ನಾಂಟೆ ಕಾ
ೞ್ಪುರಮೆನೆ ಸೂಸುಗುಂ ಶಶಿ ಸುಧಾರಸಮಂ ನೆರೆದೀಂಟೆ ನಿರ್ಜರರ್ ೪೧

ಜಡಭರಿತಂ ನೀರದಮಿದ
ಱೊಡನಿರ್ಪುದಯುಕ್ತಮೆಂದು ತಟಿದಂಗನೆ ತಾಂ
ಕಡೆಗೊಗೆದಂತಿರೆ ಮುಗಿಲಿಂ
[೨]ಸಿಡಿದು ಕೆಲಕ್ಕೊಗೆದ[೨] ಖಚರಿಯೇನೊಪ್ಪಿದಳೋ ೪೨

ನೀಲಾಬ್ಜಂ ನೀರ್ವುಟ್ಟಿನೆ
ನೀಲಾಬ್ದಮನಡರ್ದು ತಳರ್ವ ಬಿಜ್ಜೋದರಿ ಕ
ಣ್ಗೋಲ[೩]ಮನಮರ್ಚಿದಳ್ ಪಱಿ
ಗೋಲೊಳ್ ಪೋಪಂತೆ ಗಗನಮೆಂಬಂಬುಧಿಯೊಳ್ ೪೩

ಚಂಪಕ.

ನೆರೆದ ಬೞಲ್ಕೆಯಿಂ ನೆಗೆ[೪]ಯಲಾಱದ ನೀರೆಯನೇಱಿಸುತ್ತೆ ಖೇ
ಚರನೊಲವಿಂದೆ ತನ್ನ ಪೆಗಲೊಳ್ ಬಿಗಿದಭ್ರಪಥಪ್ರದೇಶದೊಳ್
ಬರುತಳವಾಱೆ ತಾನುಮವರಿರ್ವರನಂಬುದಮೆಯ್ದೆ ಪೊತ್ತುದ
ಚ್ಚರಿಯೆ ಘನಾಹ್ವಯಂಗೆ ಪರನಿರ್ವಹಣಪ್ರ[೫]ಕೃತಿಪ್ರವರ್ತನಂ ೪೪

ತೊಡವಿನ ಕೆಂಬರಲ್ ಪಸಿರ್ವರಲ್ಗಳ ಸಾಲ್ವೆಳಗಿಂದ್ರ ಚಾಪಮಂ
ಪಡೆಯೆ ಪೊದೞ್ದ ಕಣ್ಗಡೆಗದಿರ್ ಕುಡಿಮಿಂಚನೊಡರ್ಚೆ ಜಾಱೆ ಸೋ
ರ್ಮುಡಿ ಸುರಿತರ್ಪ ಕಮ್ಮಲರೆ ಪೆರ್ಮೞೆಯಾಗಿಸೆ[೬] ಕಾರ ಲಕ್ಷ್ಮಿಯಂ
ತೊಡನಡರ್ದಂಬುದಕ್ಕೆ ನೆಗೆವಚ್ಚರಿಯಚ್ಚರಿಯಂ ನಿಮಿರ್ಚಿದಳ್ ೪೫

೧ ಮಿಂಚು (ಜ, ತ) ೨–೨ ಸಿಡಿಲ್ದು ಕೆಲಕೊಗೆವ (ಯ); ಸಿಡಿದು ಕೆಲಕ್ಕೊಗೆವ (ಚ, ಜ, ತ)
೩ ಣ್ಣೋಲ (ಯ) ೪ ನಡೆ (ರ) ೫ ಣೋಪ (ಯ) ೬ ಗಿರೆ (ಯ)

ಚಂಪಕ.

ಇನಿಯನೊಳಾದ ಬಲ್ಮೊಳಿಸಿನಿಂ ಮುಗಿಲಂ ಮಱಿಗೊಳ್ವುದುಂ ಪಳ
ಚ್ಚನೆ ಸೆಳೆಮಿಂಚು ಕಣ್ಬೊಣರೊಳುಳ್ಕೆ ಚಿಳಿಲ್-ಛಿಟಿಲೆಂದು ಮೇಘನಿ
ಸ್ವನಮದು ಪೊಣ್ಮೆ ಕಣ್ಮುಗಿದು ಬೆರ್ಚಿ ವಿಯಚ್ಚರಿ ಭೋಂಕನೆಯ್ದಿ ನ
ಲ್ಲನನಮರ್ದಪ್ಪಿದಳ್ ಪೊಗಟ್ಟಿನಂ ಮುಗಿಲಂ ಬೆರಲೆತ್ತಿ ಮನ್ಮಥಂ ೪೬

ನಗಶಿಖರಾಗ್ರದಿಂ ಸರಭಸಂ ನೆಗೆವಚ್ಚರಿಯುನ್ನತಸ್ತನಂ
ಮಿಗೆ ಮುಗಿಲಂ ಪಳಂಚಲೆದು ಪೊಯ್ಯೆ ಕಳೇವರಮೆಲ್ಲನುರ್ಗೆ ನೊಂ
ದೊಗೆದಿಟಿವಂಬು ಕಣ್ಬನಿವೊಲಾಗಿರೆ ಮೇಣದು ಶೀಕರಾವಮಂ
ನೆಗಟ್ಟಿದೊ ತಳ್ವದೆಂಬಿನಮಳುಂಬಮದೊಪ್ಪುಗುಮಂಬುದಸ್ವನಂ ೪೭

ಮತ್ತೇಭ.

ಸುರಭೂಜಾತದ ತಳ್ತ ತಣ್ಣೆಟಲ ಚಂದ್ರೇಂದ್ರಾಶ್ಮಪೀಠಂಗಳೊಳ್
ತರದಿಂ ಮಂಡಿಸಿ ನೋಡುವಾಡುವ ಲಸತ್ಸಂಗೀತಮಂ ಪಾಡುವಾ
ದರದಿಂದೊಳ್ನುಡಿದೋರ್ಪ ಸಿಂಗರಿಪ ನಾನಾಲೀಲೆ ಕೆಯ್ಗಣ್ಮೆ ಕಿಂ
ಪುರುಷರ್ ಕಿನ್ನರರಚ್ಚರರ್ ಬಿನದಿಪರ್ ತತ್ಕಂದರಸ್ಥಾನದೊಳ್ ೪೮

ಚಂಪಕ.

ಜವನ ಲುಲಾಯಮಿಂದರನ ದಂತಿ ಮುಕುಂದನ ಪರ್ದು ಪದ್ಮಸಂ
ಭವನರಸಂಚೆ ದುರ್ಗೆಯ ಮೃಗಾಧಿಪನಿಂದುವ ಪೆರ್ವೊಲಂ ಮನೋ
ಭವನ ಶುಕಂ ಕುಮಾರನ ಕಲಾಪಿ ಸಮೀರನ ಪುಲ್ಲೆ ಸಂತತೋ
ತ್ಸವಯುತಮೊಪ್ಪುಗುಂ ವಿಹರಿಸುತ್ತೆ ತದದ್ರಿ[1]ತಟೀವನಂಗಳೊಳ್ ೪೯

ಉತ್ಪಲ.

ತಂಗದಿರ್ಗಲ್ಲ ಗಹ್ವರದ ಚೆಂದಳಿರ್ವಾಸಿನೊಳತ್ತಮಿತ್ತ ಚೆ
ಲ್ವಿಂಗೆಡೆಯಾಗಿ ಸೂಸಿದರಲುಂ ನಱುಗಂಬುಲಮುಂ ಮೃಗೋದ್ಭವಂ[2]
ಸಂಗಳಿಸಿರ್ದ ಕುಂಕುಮಪರಾಗಮುಮಾರ್ದೆಱಪುನ್ಮದಾಳಿಯುಂ
ಪಿಂಗದೆ ದೇವದಂಪತಿಯ ಕೂಟಮನೇಂ ಪಿಸುಣಾಡಲಾರ್ತುವೋ ೫೦

ಚಂಪಕ.

ತಳಿರಲರುಳ್ಳಲರ್ಮಿಡಿ ಪೊದಟ್ಟೆಳಗಾಯ್ ನಸುದೋರೆ ದೋರೆವಣ್
ಕಳಿತೆಸೆವಚ್ಚಪಣ್ಣಿ[3]ಡಿದು ಬೀಗಿದ ಬಿಣ್ಪೊನೆಯಾಂತು ಬಾಗಿ ಸಾ
ರ್ದಳಿ ಗಿಳಿವಿಂಡು ಕೋಗಿಲೆಗಳಬ್ಬರದೆಟ್ಟಿರವಾಂತ ಶಾಖೆ ಸಂ
ಗ[4]ಳಿಸಿದನೋಕಹಪ್ರಕರದಿಂ ಬಗೆಗೊಂಡುದು ಶೈಲನಂದನಂ ೫೧

೧ ತದೀಯ (ರ) ೨ ಮೃದುದ್ರವಂ (ಚ) ೩ ಪಣ್ಪೆ (ರ, ವ) ೪ ಗೊ (ರ, ವ)

ಉತ್ಪಲ.

ಪಾಡುವ ತುಂಬಿ ತೊಂಡುಗೆಡೆವಗ್ಗದ ಪಂಡಿತವಕ್ಕಿ ಸಾರ್ಚಿ[೧] ಬಾಯ್
ಗೂಡಿ ವಿಲಾಸದಿಂ ಕೆಲೆವ ಪಾರಿವವೊಯ್ಯನೆ ಕೇಗಿ[೨] ನಲ್ಮೆಯಿಂ
ದಾಡುವ ಸೋಗೆ[೩] ಮಾಮರದೊಳಿರ್ದು ಕುಕಿಲ್ವ ಪಿಕಂ ವಿಯೋಗಿಗೇಂ
ಮಾಡದೆ ಪೋಕುಮೇ ಮದನನಂಡಲೆಯಂ ನಗನಂದನಂಗಳೊಳ್ ೫೨

ಚಂಪಕ.

ನಳಿನಿಯನಪ್ಪಿ ತುಂಬಿಗುರುಳಂ ನೆಱೆ[೩] ನೇರ್ಪಡೆ ತಿರ್ದಿ ಚುಂಬಿಸು
ತ್ತೆಳಸಿ ಸರೋರುಹಾನನಮುನಂಟೆ ರಥಾಂಗಕುಚಂಗಳಂ ಸರಃ
ಸ್ಥಳದೊಳೆ ಕೂಡಿ ಘರ್ಮಕಣಮೆಂಬಿನಮಂಬುಕಣಾಳಿದಾಳ್ದದೇಂ
ಸುಟಿದುದೊ ಮೆಲ್ಲನಾಳ್ದವೊಲತಿಶ್ರಮಮಂ ವನಮಂದಮಾರುತಂ ೫೩

ತೊಳಗಿದುದಿಂತು ರಂಜಿಪ ಕನತ್ಕನಕಾಚಲದಗ್ರದೊಳ್ ಮಹೋ
ಜ್ವಳಮಣಿಶಾಲಮಾದಿಕಮತಂಬರಮಾಟಿಮನಾಳ್ದಗಟಿ[೪] ಸುಧಾ
ಸಳಿಲಸಮೃದ್ಧ[೪]ಮಿಂದ್ರಮಣಿಯಾಳ್ವರಿ ಬಜ್ಜರಗೊತ್ತಳಂಗಳ
ಗ್ಗಳಿಸಿರೆ ಪೆರ್ಮೆವೆತ್ತು ಪುರವೈರಿಪುರಂ ಕಳಧೌತಗೋಪುರಂ ೫೪

ಉತ್ಪಲ.

ಬಾಂದಳಮಂ ಪಳಂಚಲಿವ ತುಂಗವೃಷಧ್ವಜದಿಂದೆ ತಳ್ತು ಚೆ
ಲ್ವೊಂದಿದ ಭರ್ಮಹರ್ಮ್ಯದಿನಳಂಕೃತಿವೆತ್ತ ಗಣೇಶ್ವರಸ್ಫುರ
ನ್ಮಂದಿರಪಂಕ್ತಿಯಿಂದಮೃತಪೂರ್ಣಸರಸ್ಸುರಭೂರುಹೋಲ್ಲಸ
ನ್ನಂದನದಿಂ ವಿರಾಜಿಸಿದುದಗ್ಗದ ಚಾರುಪುರಂ ಪುರಾರಿಯಾ ೫೫

ಮಹಾಸ್ರಗ್ಧರೆ

ಭವಸೇವಾಯಾತಲೋಕೇಶ್ವರಪರಿವೃತತೂರ್ಯಪ್ರಣಾದಂ ಪ್ರಬದ್ಧೋ
ತ್ಸವಗಚ್ಛದ್ವೃದ್ಧಭಾಸ್ವತ್ಸುರಗಜಗಳಘಂಟಾಘಣತ್ಕಾರಮುನ್ನಿ
ದ್ರವಿಲಾಸಸ್ವೈರನಿರ್ಯದ್ಗಣಕಳಕಳಮುದ್ಗೀರ್ಣಲೀಲಾಚಲದ್ದಿ
ವ್ಯವಧೂಮಂಜೀರರಾವಂ ಮಿಸುಗೆ ಸೊಗಯಿಕುಂ ತತ್ಪುರೀರಾಜಮಾರ್ಗಂ ೫೬

ಶಾರ್ದೂಲ.

ಆ ಕೈಲಾಸದ ಪೂರ್ವದಿಕ್ಪಥದೊಳಿರ್ಪಂ ಹಂಸವಾಹಂ ತ್ರಿಣೇ
ತ್ರಾಕಲ್ಪಂ ಕನಕೋಪವೀತಕನಕೋದ್ಯದ್ದಂಡಪಾಶಾಕ್ಷಮಾ
ಲಾಕಾಂತಂ ವೃತಸಪ್ತಕೋಟಿಸಮಭಾಸ್ವದ್ಭೈರವಂ ಬ್ರಾಹ್ಮಿಯೆಂ
ಬಾ ಕಾಂತಾಮಣಿಗೂಡಿ ಮಾಣದಸಿತಾಂಗಾಖ್ಯಂ ಮಹಾಭೈರವಂ ೫೭

೧ ಸೊರ್ಕಿ (ಯ, ಲ) ೨ ಕೇಕಿ (ರ) ೩ ಪಾಂಗು (ರ) ೪ ಸಮುದ್ರ (ಚ,ರ)

ಮತ್ತೇಭ.

ಅನಲಾಕ್ಷಂ ಧೃತಖಡ್ಗಶೂಲವಿಲಸತ್‌ಖಟ್ವಾಂಗಢಕ್ಕಂ ಕನತ್
ಕನಕಾಂಗಂ ವೃಷವಾಹನಂ ಪ್ರವಿಲಸನ್ಮಾಹೇಶ್ವರೀಯುಕ್ತನೊ
ಲ್ದನಿಶಂ ದ್ವಾದಶಕೋಟಿಭೈರವಯುತಂ ಕಾದೊಪ್ಪುಗುಂ ಭೀಷ್ಮದಂ
ಷ್ಟ್ರನನಂತಂ ರುರುಭೈರವಂ ಹರಪುರೀಕಾಲಾಧ್ವ[೧]ದಿಗ್ದ್ವಾರದೊಳ್[೧] ೫೮

ಶುಕಶೂಲಾಯುಧವಜ್ರಶಕ್ತಿಧರನಾದಿತ್ಯಪ್ರಭಂ ಚಾರುಚಂ
ದ್ರಿಕೆ[೨]ವಾಹಂ ದಶಕೋಟಿಭೈರವಯುತಂ ಕೌಮಾರಿಯೆಂದೆಂಬ ಕಾಂ
ತೆ ಕರಂ ರಂಜಿಸೆ ಚಂಡಭೈರವನುದಾರ[೩]ತ್ರ್ಯಂಬಕಂ ಕಾಮನಿಂ[೪]
ದಕಳಂಕಂ ಸಲೆ ಸೇವಿಪಂ ರವಿಸುತಾಶಾದ್ವಾರಮಂ ಲೀಲೆಯಿಂ ೫೯

ಗರುಡಾರೂಢನುಪಾತ್ತಚಕ್ರಜಲಜಂ ಕೌಮೋದಕೀಶಾರ್ಙ್ಗಮೊ
ಪ್ಪಿರೆ ನಾರಾಯಣಿಗೂಡಿ ನೈರೃತದಿಶಾದ್ವಾರಸ್ಥಿತಂ ಕಣ್ಗೆ ಬಂ
ಧುರನಾದಂ ಸಲೆ ಪಂಚಕೋಟಿಗಣಿತೋದ್ಯದ್‌ಭೈರವರ್ ಸೇವಿಸು
ತ್ತಿರೆ ತನ್ನಂ ಘನಯೋಗಿನೀಪರಿವೃತಂ ಕ್ರೋಡಾಹ್ವಯಂ ಭೈರವಂ ೬೦

ನವಮೇಘಾಂಶುಜಟಾಧರಂ ಮುಸಲಶಂಖಂ ಖೇಟಕಂ ಖಡ್ಗಮೊ
ಪ್ಪುವ ನಾಲ್ದೋಳ್ಗಳಿನಾಱುಕೋಟಿ ಭಟರಿಂದೊಪ್ಪಿರ್ದು ವಾರಾಹಿಯಿಂ
ಬವಳೊಳ್ ಕೂಡಿ ಉಲಾಯವಾಹನದೆ ಕಣ್ಗಿಂಬಾದನುನ್ಮತ್ತಭೈ
ರವನುದ್ಯದ್ವರುಣಾಶೆಯೊಳ್ ಪುರದ ಬಾಗಿಲ್ವಾಡದೊಳ್ ಶೂಲಿಯಾ ೬೧

ಚಂಪಕ.

ಅಡರ್ದು ಮದೇಭಮಂ ಪಿಡಿದು ಶಕ್ತಿಧನುಃಪವಿ[೫]ತೋಮರಂಗಳಂ
ಬಿಡೆ[೬] ಕನಕಾಂಶು ರಂಜಿಪೊಡಲಿಂ ಶಚಿಯೆಂಬಳೊಳೊಂದಿ ರಂಜಿಸು
ತ್ತಿಡವಲದೊಳ್ ತ್ರಿಕೋಟಿಸಮಸಾಹಸಭೈರವರೊಪ್ಪೆ ಕಾದು ನಿಂ
ದೊಡನೆಸೆದಂ ಮರುದ್ದಿಶೆಯ ಬಾಗಿಲೊಳೊಲ್ದು ಕಪಾಲಿಭೈರವಂ ೬೨

ಉತ್ಪಲ.

ಮುಂಡಿಸಿ ಕಾಕವಾಹನದೆ ಘಂಟಿಕೆ ಶೂಲಕಪಾಲಢಕ್ಕೆಗಳ್
ಚಂಡಕರಂಗಳೊಳ್ ಪೊಳೆಯೆ ಪನ್ನೆರಡೊಂದಿದ ಕೋಟಿಭೈರವರ್
ತಂಡದೆ ಸೇವಿಸುತ್ತಿರೆ ಕುಬೇರದಿಶಾಶ್ರಿತನಿರ್ದನಲ್ಲಿ ಚಾ
ಮುಂಡಿಯೊಳೊಂದಿ ಧೂಮ[೭]ರುಚಿಕಾಯದ ಭೀಷಣನೆಂಬ ಭೈರವಂ* ೬೩

೧–೧ ದಿಗ್ಭಾಗಮಂ (ಯು, ರ, ಲ); ದಿಗ್ಭಾರಮಂ (ಜ) ೨ ದ್ರಿಕಿ (ಗ, ತ, ಯ) ೩ ದಾರಂ
೪ ಕಾದು ನಿಂ (ಯು) ೫ ಶರ (ಯು) ೬ ನಡೆ (ರ) ೭ ಧೂಮ್ರ (ಯು, ಲ)
* ಈ ಪದ್ಯವು ‘ ಯು ’ ಪ್ರತಿಯಲ್ಲಿ ೬೨ನೆಯ ಪದ್ಯಕ್ಕೆ ಮೊದಲು ಬಂದಿದೆ.

ಮಹಾಸ್ರಗ್ಧರೆ

ಗಿರಿಕಾರೂಢಂ ಗದಾಖೇಟಕಫಲಕಮಹಾಖಡ್ಗಹಸ್ತಂ ಸುವರ್ಣ
ಸ್ಫುರಿತಾಂಗಂ ಫಾಲನೇತ್ರಂ ಸ್ವಸಮಬಲಲಸದ್ಭೈರವರ್ ಕೋಟಿಯೆಂಟೊ೧
ಪ್ಪಿರೆ ಸಂಹಾರಾಖ್ಯನಿರ್ಪಂ ಬಳವೆರಸಿ ಮಹಾಕಾಳಿಯಾಣ್ಮಂ ಕಳಾಭಾ
ಸುರನೊಲ್ದೀಶಾನದಿಗ್ದ್ವಾರ೨ದೊಳೆ ವಿಭವದಿಂ ಭೈರವಂ ಭಸ್ಮಭೂಷಂ ೬೪

ವಚನ

ಇಂತು ಸಂತತಮೆಸೆವ ಪೃಥುಳಬಲರೆನಿಪ್ಪಷ್ಟಭೈರವರ ಕಾಪಿನ ಸೀಮೆಯಿಂ ದೊಳಗೆ ಫಣಿವರಂಗಾದೊಡಮೆಣಿಸಲರಿದೆನಿಪ ಪೆಂಪಂ ಪಡೆದತಿಪ್ರಕಾಶಮನತಿ ಕೌತುಕಮನತ್ಯಂತವೈಭವಮ೩ನುರುತರ೩ ಸೌಂದರ್ಯಮನೊಳಕೊಂಡು ಕಣ್ಗೆ ಮಂಗಳಮಾಗಿ ಮನಕೆ ಮನೋಹರಮೆನಿಸಿ ಸೊಗಯಿಪ ಶಿವರಾಜಧಾನಿಯಲ್ಲಿ,

ಚಂಪಕ.

ಘನತರಮಾಗಿ ಪೂರ್ವದಿಶೆಯಲ್ಲಿ ಋಗಾಗಮಮೇಕಲಕ್ಷಯೋ
ಜನಮಿತಗೋಪುರಾಕೃತಿಯೊಳೊಪ್ಪುಗುಮಿಂದುವಳಕ್ಷ೪ಮಲ್ಲಿ ಕಾಂ
ಚನಮಯವೇತ್ರಹಸ್ತನೆಸೆಗುಂ ಚತುರರ್ಬುದಸದ್ಗಣಾವೃತಂ
ವನಜಭವಾದಿಗಳ್ ಸಮಯಮುಂ ಸಲೆ ಪಾರ್ದಿರೆ ನಂದಿಕೇಶ್ವರಂ ೬೫

ತೊಳಗಿದುದೇಕಲಕ್ಷಮಿತಯೋಜನದುದ್ದದ೫ ನೀಲವರ್ಣಮು
ಜ್ವಳಿಸಿರೆ ಗೋಪುರಾಕೃತಿಯನಾಳ್ದು ಯಜುಃಶ್ರುತಿ ದಕ್ಷಿಣಾಶೆಯೊಳ್
ಬಳವದನಂತರೋಮಶಗಣಾವೃತನಲ್ಲಿ ವಿರಾಜಿಪಂ ವಧೂ
ವಿಳಸಿತವೀರಭದ್ರವಿಭು೬ ಖಡ್ಗಧನುಃಶರಖೇಟಕಾನ್ವಿತಂ ೬೬

ಅತಿಸಿತಮೇಕಲಕ್ಷಪರಿಲಕ್ಷಿತಯೋಜನಮುದ್ದಮಾಳ್ದು ನೀ
ಳ್ದತಿಶಯಸಾಮವೇದಮದು ಗೋಪುರವಾಗಿ ವಿರಾಜಿಕುಂ ಪಯಃ
ಪತಿದಿಶೆಯೊಳ್ ಬಟುಕ್ಕದರ ಬಂಕದೊಳೊಪ್ಪುಗುಮುಜ್ವಳಾಂಗನ
ನ್ವಿತಬಹುಸಂಖ್ಯರುದ್ರಗಣಸೇವಿತನಗ್ಗದ ನೀಲಲೋಹಿತಂ ೬೭

ಮತ್ತೇಭ.

ಗಣಿತಂ ಗಾವುದವೊಂದು ಲಕ್ಷಮೆನೆ ಕೈಕೊಂಡುದ್ದಮುಂ ತಾನಥ
ರ್ವಣವೇದಂ ಘನಗೋಪುರಾಕೃತಿಯೊಳಿರ್ಕುಂ ತಾಳ್ದು ಪೊಂಬಣ್ಣಮುಂ
ಪ್ರಣುತಾಂಗಂ ಬಡಗಲ್ ಗಣಾಳಿಸಹಿತಂ ತದ್ದ್ವಾರದೊಳ್ ಶೌರ್ಯ೭ಭೂ
ಷಣನಿರ್ಕುಂ ಪುದಿ೮ದೇಟಿಗ್ಗೆಯಿಂ ಸಲೆ ಮಹಾಕಾಳಂ ಕರಾಳಾಯುಧಂ ೬೮

೧ ಯಿಂದೊ (ಯ) ೨ ದಿಗ್ಭಾಗ (ರ, ಲ) ೩-೩ ನತಿಭಾಸುರ (ಚ) ೪ ವಳೂನ (ಚ) ೫ ದುದ್ದತಿ (ಙ); ದುದ್ದದೆ (ಯ) ೬ ಭೃತ (ಚ) ೭ ಸೌರ್ಯ (ಕ, ಗ, ತ) ೮ ಪದೆ (ಯ, ಲ)

ಚಂಪಕ.

ಬಳಸಿಡಿದಿರ್ದ ಮಾಣಿಕದ ಮಂಟಪರಾಜಿಯ ರಮ್ಯಹರ್ಮ್ಯಸಂ
ಕುಳದ ಕನತ್ಸುವರ್ಣಮಯಶಾಲದ ನಾ[1]ಲ್ದೆಸೆ ಗೋಪುರಂಗಳು
ಜ್ವಳಿಸುವ ದಾರವಟ್ಟದ ಬೆಡಂಗಮರ್ಪ್ಪಿರೆ ಮಧ್ಯದಲ್ಲಿ ಕಣ್
ಗೊಳಿಸಿಮದೇಕಕೋಟಿಮಿತಯೋಜನಮೋಲಗಶಾಲೆ ಶೂಲಿಯಾ ೬೯

ಮರಕತವೇದಿ ಮಾಣಿಕದ ಬೋದಿಗೆ ನೀಲದ ಕಂಬಮಿಂದುಕಾಂ
ತರುಚಿರಕುಟ್ಟಿಮಂ ಪವಳಮೊಳ್ದೊಲೆ ರನ್ನದ ಜಂತೆ ಪುಷ್ಯರಾ
ಗರುಚಿ ವಿತರ್ದಿ ಮೌಕ್ತಿಕಲಸತ್ಕಲಶಂ ಪರಿಶೋಭಿಸಿತ್ತು ಬ
ಜ್ಜರದ ಕವಾಟಮೊಂದೆ ಕರಮೊಪ್ಪಿದುದೀಶಸಭಾನಿಕೇತನಂ ೭೦

ಉತ್ಪಲ.

ಕನ್ನಡಿಯಲ್ಲಿ ಮಾರ್ಪೊಳೆವ ದಂತಿಯ ಮಾಟ್ಕಿಯೊಳಬ್ಜಜಾಂಡಮು
ತ್ಪನ್ನತತತ್ಸಭಾಗೃಹಮಹಾಘೃಣಿಮಂಡಲದಲ್ಲಿ ತೋರ್ಕುಮು
ದ್ಯನ್ನಳಿನಾಪ್ತದೀಧಿತಿಯ ಮುಂದಣ ಮಿಾಂಬುಳುವಂತೆ ತತ್ಸಭಾ
ಸನ್ನಿಧಿಯಲ್ಲಿ ಕಾಣಿಪುದು ಪನ್ನಗರಾಜ[2]ಫಣಾಮಣಿವ್ರಜಂ ೭೧

ವಚನ

ಅಂತೊಪ್ಪುವನಲರವಿಶಶಿಕೋಟಿರುಚಿಯಂ ಪೞಿದು ಪಜ್ವಳಿಪ ವಿಪುಲಪ್ರಭಾಮಂಡಲಂ ಪುದಿದ ಮಹಾಸ್ಥಾನಮಂಟಪದ ಮಧ್ಯದೊಳೇಕಲಕ್ಷ[3]ಯೋಜನದನಿತು ವಿ[3]ಸ್ತೀರ್ಣಮನಿತುನ್ನತಿಯನಾಳ್ದು ಕಣ್ಗೊಳಿಪ ಚಿಂತಾಮಣಿಮಹಿತಮಂಗಳಮಯಮಹಾಪೀಠಮನೀಶಾನದಿಶೆಯೊಳೈಶ್ವರ್ಯಮೆ ಮೃಗೇಂದ್ರಾಕಾರಂಬೆತ್ತು ವಿಮಳಧರ್ಮಮೆ ವೃಷಭಾಕೃತಿವಡೆದನಲಾಶೆಯೊಳ್ ಸುಜ್ಞಾನಮೆ ಶಾಂತಿದೇವತಾರೂಪದಿಂ ನಿರೃತಿಯತ್ತಲ್ ವೈರಾಗ್ಯಮೆ ವೈಭವಸ್ವರೂಪದಿನನಿಲದಿಶೆಯೊಳ್ ಪರಿವಿಡಿಯಿಂ ಪೂರ್ವದಕ್ಷಿಣಪಶ್ಚಿಮೋತ್ತರಂಗಳೊಳ್ ಭೂತರೂಪಂದಾಳ್ದ ಧರ್ಮಮುಮಂ ವಿಕಟಾಂಗಮೆನಿಪ ಜ್ಞಾನಮುಂ ಘೋರವೇಷಂಬಡೆದ ವೈರಾಗ್ಯಮಂ ವಿಕೃತಕಾಯಾನ್ವಿತಮಾದನೈಶ್ವರ್ಯಮುಂ ಮೆಟ್ಟಿ ನಿಂದುಮಿಂತೆಣ್ದೆಸೆಯೊಳೆಣ್ಬರಿಜಿಂಪೊತ್ತು ಸೇವಿಸುತ್ತಮಿರೆ ತದಂತರಾಳಭಾಸುರಮೆನಿಸಿ,

ಮಹಾಸ್ರಗ್ಧರೆ

ಫಣಿರಾಜಂ ನಾಳಮಾಗುತ್ತಿರೆ ಮಿಸುಪೆಸಳೆಂಟಾಗೆ ನಿರ್ವ್ಯಾಜದಿಂ ಸಂ
ದಣಿಮಾದ್ಯೈಶ್ವರ್ಯಮುಂ ವಾಮೆಯೆ ಮೊದಲೆನಿಪಾ ಶಕ್ತಿಗಳ್ ಕರ್ಣಿಕಾಲ
ಕ್ಷಣಮುಂ ತಾಳ್ದೊಪ್ಪೆ ವಿದ್ಯಾಧಿಪರೆ ತೊಳಪ ತತ್ಕೇಸ[4]ರಾಕಾರದಿಂ ಸಂ
ದಣಿಸುತ್ತುಂ ತೋರೆ ಸೂರ್ಯಾನಲಶಶಿಯುತಮೊಪ್ಪಿರ್ದುದಂಭೋಜಪೀಠಂ

೧ ಸಾ (ಚ) ೨ ರಾಜಿ (ಚ) ೩-೩ ಯೋಜನದ ವಿ (ಚ) ೪ ಸತ್ಕೇಸ (ಮ)

ವಚನ

ತತ್ಪದ್ಮಪೀಠದೊಳ್ ಕೌಸುಂಭತಲ್ಪಮೆನೆ ಕೆಂಬೊಳೆಪಿಂ ತೊಳಪ ಮಹಾಬಿಂದುವೆಂಬ ಮೆಲ್ವಸೆಯಲ್ಲಿ ಗಾಡಿಯಿಂ ಮೂರ್ತಿಗೊಂಡು,

ಮತ್ತೇಭ.

ಚಿದಚಿತ್ಪ್ರೇರಕನದ್ವಿತೀಯನನಘಂ ವೇದಾಂತವೇದ್ಯಂ ಕಲಾ
ಸ್ಪದನಾದ್ಯಂತವಿದೂರನಾರ್ಯನಜಡಂ ವಿಶ್ವಾಧಿಕಂ ವಿಶ್ವಮೂ
ರ್ತಿ ದಯಾವಾರ್ಧಿ ಜಗಜ್ಜನಿಸ್ಥಿತಿಲಯಾಧಾರಂ ಮಹಾಭೋಗವೋ
ಕ್ಷದನಬ್ಜಾಕ್ಷಮುಖಾಮರಾರ್ಚಿತಪದಂ ಕಣ್ಗೊಪ್ಪಿದಂ ಶಂಕರಂ ೭೩

ಉತ್ಪಲ.

ಬಾಂಬೊಟೆ ತಳ್ತ ಕೆಂಜಡೆಯ ಬಲ್ಮುಡಿ ತಾಳ್ದ ಶಶಾಂಕಲೇಖೆ ಭಾ
ಳಾಂಬಕಮುಲ್ಲಸತ್ಫಣಿಪಕುಂಡಲಮಾಯತಬಾಹುವೃತ್ತಿ ವ
ಸ್ತ್ರಂ ಬಗೆಗೊಳ್ವ ನುಣ್ಗರೆ ವರಾಭಯಶೂಲಮೃಗಾಂಕಪಾಣಿಯಂ
ಕಂಬಿಡದೊಪ್ಪುವದ್ರಿಜೆ ವಿರಾಜಿಸೆ ರಂಜಿಸಿದಂ ಮಹೇಶ್ವರಂ ೭೪

ತಾಪ[೧]ತ್ರಯಾಪಹಾರಿ ವಿ
ರೂಪಾಕ್ಷಂ ಭುಜಗಭೂಷನನಘನವಿದ್ಯಾ
ಲೋಪಂ ಭೃತ[೨]ಸಿತ[೩]ಭಸಿತಾ[೩]
ಲೇಪಂ ಕಣ್ಗೆಸೆದನಭವನನುಪಮವಿಭವಂ ೭೫

ಚಂಪಕ.

ಎಳವೆಱೆಯಾಂತ ರತ್ನಮುಕುಟಂ ಮಣಿಭೂಷಣಮಿಂದುಬಿಂಬಮಂ
ಜುಳವದನಂ ನವಾರುಣಕರಾಂಶುಕಮುಜ್ವಳಕಾಯಕಾಂತಿ ಸಂ
ಗಳಿಸೆ ಮೃಡಾಂಕಪೀಠಮನಳಂಕರಿಸುತ್ತೆ ಶುಭಾಂಗಿ ಸರ್ವಮಂ
ಗಳೆ ರತಿಕೋಟಿಯಂ ಪಱೆದು ರಂಜಿಸಿದಳ್ ಪದವೆತ್ತು ಚೆಲ್ವಿನಿಂ ೭೬

ಮಿಸುಪಲರ್ಗಣ್ಣ ಕಾಂತಿ ತಿಳಿಜೊನ್ನಮಿದೆಂಬಿನಮಾಳ್ದ ಭೂಷಣ
ಪ್ರಸರದೆ ರನ್ನದೊಳ್ಪೆಳಗು ಚೆಂಬಿಸಿಲಂತಿರೆ ತಾಳ್ದಲಂಪನೆ
ಣ್ದೆಸೆಯೊಳಲರ್ದು ಪರ್ಬಿ ವಿಸಟಂಬರಿಯುತ್ತಿರೆ ಮಂತ್ರದೇವತಾ
ವಿಸರಮೊಱಲ್ದು ಸೇವಿಸೆ ಪದಾಬ್ಜಮನದ್ರಿಜೆ ಕಣ್ಗೆ ತೋರಿದಳ್ ೭೭

೧ ಪಾಪ (ಚ)
೨ ಧೃತ (ಯ); ಭಾ (ರ, ಲ)
೩-೩ ಭಸ್ಮಾ (ಗ, ತ, ರ)

ಮತ್ತೇಭ.

ಕರದೊಳ್ ಕಾನಕಚಾಮರಂಬಿಡಿದು ವೇದವ್ರಾತಮಂ ಪೆತ್ತ ಭಾ
ಸುರಗಾಯತ್ರಿ ಕಡಂಗಿ ಡಾಳಿಸೆ ಮಹಾಸಾವಿತ್ರಿ ತಾಳ್ದಲ್ಲಿ ನಿಂ
ದಿರೆ ಶಕ್ತಿವ್ರಜಮಾನ್ಯೆ ಪೊಂಡವಕೆ[1]ಯಾಂತಿರ್ದಾದಿ[1]ದೇವೀಸಮು
ತ್ಕರಮೊಲ್ದಾಂತಿರೆ ರನ್ನವಾವುಗೆಯನೊಪ್ಪಿರ್ದಂ ಭವಾನೀಧವಂ ೭೮

ವಚನ

ಮತ್ತಮಾ ಮಹೇಶ್ವರಂ ವ್ಯೋಮದಂತೆ ವೀತ[2]ಕ್ಷಣರುಚಿಮಹಾಧ್ವನಿಯುಕ್ತ ಘನಗಣಸಮೇತನುಂ, ಸದಾರಾಜ[3]ಹರಿಸಮುಂಚಿ[3]ತನುಂ; ವನದಂತೆ ಸಮುನ್ಮಿಳಿತ ವಿಶಾಖಾಂಕನಗಜಾತಾನ್ವಿತನುಂ, ಮಧುರಸಾರೋಜ್ವಲಸುಮನೋವಿರಾಜಿತನುಂ; ವಿಪಿನದಂತನೇಕಪಾರಿಜಾತಾಚ್ಛಪುನ್ನಾಗಕದಂಬಾಕಲಿತಪದನುಂ, ಸುರಸಭಾಸಮಾನಸಶಕ್ತಿಶರಭವಾರಚಿತವಿಭ್ರಮನುಂ; ಸಮುದ್ರದಂತೆ ನಿಜಸದಾ[4]ಶ್ರಿತಾಹೀನಭೋಗಸ್ವಪದಚ್ಯುತಶ್ರೀಸುಖಪ್ರದನುಂ, ಅನಂತಾಚಲಾತಿವ್ಯಾಪ್ತಸ್ವಪ್ರಭಾವಮುಕ್ತಾಳಿಪರಿಮಿಳಿತನುಂ;

*ವಿಷಧರನಾಗಿಯುಂ ಚಿರಪ್ರಭಾಸಂಗತನುಂ, ಭುವನಪತಿಯಾಗಿಯುಮಜಡಾಶ್ರಯನುಂ ನರಗರ್ವಸರ್ವಾಪ[5]ಕನಾಗಿಯುಮರ್ಜುನರುಚಿಯುಂ, ಸಾಮಜಪಪ್ರಿಯನಾಗಿಯುಂ ಪಂಚಾನನಪ್ರಥಿತನುಂ, ಸದ್ಯೋಜಾತನಾಗಿಯುಂ ಭವರಹಿತನುಂ, ಸವ್ಯೋಮಾಂಗವಿಶಿಷ್ಟನಾಗಿಯುಂ ಜಾತರೂಪರುಚಿಮದ್ವಿಗ್ರಹನುಂ, ಅಜಾತಶತ್ರುವಾಗಿಯುಮನಂತಾರಿಪುರಾರಾತಿಯುಂ, ಸದಾಲೋಕಭರಿತನಾಗಿಯುಮಂಧಕಾರಾತಿಪ್ರಥಿತನುಂ, ಸಕಲಾದಿತ್ಯಗ್ರಹಣೋಪಯುಕ್ತನಾಗಿಯುಮಧಿಕೋಪರಾಗರಹಿತನುಂ, ಶುಕಾಮೃತಫಲಪ್ರದನಾಗಿಯುಮವನಸ್ವಭಾನುಂ, ಕಾಮದೇಹೋಪೇತನಾಗಿಯುಂ ದರ್ಪಕೋಪಗತವಿಗ್ರಹವಿದಾರಣನುಮೆನಿಸಿರ್ದನಂತುಮಲ್ಲದೆಯುಂ,

ಚಂಪಕ.

ಹರಿತನಯಾರಿಯೆಂದೆನಿಸಿಯುಂ ಧವಳಾಂಶುಕಧಾರಿ ನೀಲಕಂ
ಧರನೆನಿಸಿರ್ದುಮಾದೃತಸುಮಾನಸಹಂಸನುಪಾತ್ತಸಿಂಧುರಾ
ಜರುಚಿರನಾಗಿಯುಂ ತತಜಡಾಶ್ರಯವಿಪ್ರಿಯನಪ್ರಮೋಹ[6] ಭಾ
ಸುರನೆನಿಸಿರ್ದುಮನ್ವಿತನಯಸ್ಥಿತಿಯೊಪ್ಪಿದನದ್ರಿಜಾಧವಂ ೭೯

೧-೧ ಯುಂ ವಾಣ್ಯಾದಿ (ಯ, ರ, ಲ); ಯಂತಿರ್ದಾದಿ (ಚ) ೨ ವಿತತ (ಯ, ರ, ಲ) ೩-೩ ಹಂಸಸಮುಂಚಿ (ಯ); ಹರಿಹರಿಮುುಂಚಿ (ಲ) ೪ ಪದಾ (ಯ, ರ, ಲ,) ೫ ನಿರ್ವಾಪ (ಯ, ರ, ಲ) ೬ ಮೋದ (ಚ)

* ಕೆಲವು ಪ್ರತಿಗಳಲ್ಲಿ ಇಲ್ಲಿ "ವಿರೋಧಾಭಾಸ" ಎಂದು ಮುಂದಿನ ಗದ್ಯಭಾಗವನ್ನು ಕುರಿತು ಸೂಚನೆ ಕೊಟ್ಟಿದೆ.

ವಚನ

ಪುತ್ತ್ರಮಾಗಳೋರಣಂಗೊಂಡು [೧]ಶರಚ್ಛಶಾಂಕ[೧]ರುಚಿಯೊಳ್ [೨]ಸೆಣಸಲೆ[೨]ಳಸಿ
ನೆಗೆವಾಪೆನಿಸಿ ರಂಜಿಪ ಧವಳಚಾಮರಮುಂ ಬಿಂಕದಿಂ ಕೊಂಕಿ ನಿಂದು ಸೂಱೆಱಿದು
ತೋಳ್ಗಳಂ[೩]ನೆಗಪಿ ಡಾಳಿಪ ಗಾಯತ್ರ್ಯಾದಿಪರಮಶಕ್ತಿಯರಿಂ, ಕರಾಂಬುಜಂ ಸೆಱೆ
ವಿಡಿದ ಪೂರ್ಣೇಂದುವೆಂಬಂತೆಸೆವ[೪] ಮಣಿದರ್ಪಣಮನಣಿಯರಂಬಿಡಿದು ಸಿರಿಮೊ
ಗಕ್ಕೆ ತೋರ್ಪ ಕಳಾಮಾಲಿ[೫]ನಿಯರಿಂ[೫], ಪಾಡಿ ಪಸಿದು ಬಸವೞಿದ ಕಂಬಳಾಶ್ವತ
ರನಾಶ್ವಾಸಿಪಂತಲರ ಬಿಜ್ಜಣಿಗೆಯಿಂದೆಲರನೊಡರ್ಚಿ ಬೀಸುವ ರೋಹಿಣಿಯಿಂ,
ಮಂಗಳಗೀತೆ[೬]ಯಂ ಪಾಡಿ ಮಣಿವೆಳಗಿನಾರತಿಯಂ ಬೆಳಗುವ ಭಾನುಭಾಮೆಯಿಂ,
ನಿಜಕರತಳೋದ್ಧೃತಸಹಸ್ರದಳಪುಂಡರೀಕಮೆನೆ ಮಿಸುಪ ಮೌಕ್ತಿಕಚ್ಛತ್ರಮುಂ
ತಳೆದೋಲಗಿಪ ರಮಾದೇವಿಯಿಂ, ಸಲ್ಲಲಿತವಲ್ಲಕಿಯ ಮೆಲ್ಲುಲಿಯೊಡನೆ ಪಂಚ
ಮದಿಂಚರಂ ಮಿಗೆ ಸವಿ ಸವೆಯದ ಸಾರಸಂಗೀತಮುಂ ಕೇಳಿಪ [೭]ಕೇಳಿಕೆ[೭]ವಿಡಿದ
ಭಾರತಿಯಿಂ, ಮಧುರಶೀತಳಸುರಭಿಸಲಿಲಸಂಭೃತಕನಕ[೮]ಭೃಂಗಾರಮುಂ[೮] ಶೃಂಗಾ
ರಂಬೆತ್ತು ಪಿಡಿದು ನಿಂದ ವರುಣಾಂಗನೆಯಿಂ, ಕೆಂಬರಲ ಕಾಳಂಜಿವಿಡಿದು ಮಿಸುಪ
ಪುಲೋಮಜಾದಿರಮಣಿಯರಿಂ, ಸರಸಪರಿಮಳಕ್ಕೆ ಪಱಿಮುಱಿ[೯]ಗೊಂಡು ಮೊರೆದೆ
ಱಗುವ ಪಱಿಮೆವಱಿದುಱುಗಲಿಂ ತಳ್ತ ನಱುಗಂಪನುಗುಳ್ವರೆವಿರಿದರಲ ಮಾಲೆ
ಯಿಂ ಪದತಳಮುಂ ಪದೆದಲಂಕರಿಪ ರತಿಯುವತಿಯಿಂ, ಶೂಲ[೧೦]ಕಪಾಲಖಡ್ಗ[೧೦]
ಪರಶ್ವಾದ್ಯಾಯುಧಂಬಿಡಿದು ಬೞಿನೆಲಸಿ ನಿಂದ ಮಾತೃಕಾದೇವಿಯರಿಂ, ಕರಾಂಬು
ಜಂಗಳಂ ನೊಸಲೊಳಿರಿಸಿ ಬೆಸನಂ ಸಾರ್ದು ನಿಂದ ಯೋಗಿನಿಯರಿಂ, ಕರೆಕರೆದು
ಸಮ್ಮುಖಂಗೆಯ್ವ ಮಂತ್ರಶಕ್ತಿಯರಿಂ, ಪರಸಿ ಪಾಡುವನಸೂಯೆ ಮೊದಲಾದ
ಮುನಿವನಿತೆಯರಿಂ, ಸಹಜ[೧೧]ಸದ್ಗುಣಗಣಮುಂ[೧೧] ಸರಸರವದಿಂ ಸಾರ್ದು ಸಂಕೀ
ರ್ತನಂಗೆಯ್ವ ಶ್ರುತಿಸತಿಯರಿಂ, ಶೃಂಗಾರಲಕ್ಷ್ಮಿಯಂಗಂಬಡೆದನೇಕರೂಪದಿಂ
ನಿಂದಂತೆ ಪೊಂದೆರೆ ಸರಿಯೆ ಪುಷ್ಪಪುಟಹಸ್ತದಿಂ ಪುಷ್ಪಾಂಜಲಿಗೆದರ್ದು ಮೋಹಿಸಿ
ನಿಂದು ಕಟ್ಟೆದಿರೊಳ್ ಸಭಾಸದರೆಲ್ಲರ್ ಮೆಚ್ಚೆ ಚತುರತರಚತುರ್ವಿಧನರ್ತನಮುಂ
ಚಿತ್ತರಿಪ ರಂಭಾದಿದಿವ್ಯನರ್ತಕಿಯರಿಂ, ವಾಮಪಾರ್ಶ್ವ[೧೨]ದೊಳ್ ನಿಂದು ಶಿವ[೧೨]
ಸಹಸ್ರನಾಮಮುಂ ಜಪಿಯಿಸುತ್ತೆಸೆವ ಮುಕುಂದನಿಂ, ದಕ್ಷಿಣದೊಳಕ್ಷೀಣರವದಿಂ
ಲಕ್ಷಣಂಬಿಡಿದು ಚತುರ್ಮುಖದಿಂ ರುದ್ರಸೂಕ್ತರಥಂತ[೧೩]ರಾದಿಮಂತ್ರಮನೋದು
ವಬ್ಜಭವನಿಂ, ವಿವಿಧವಿನಿಯೋಗಮುಂ ಮಾಳ್ಪ ಲೋಕೇಶ್ವರರಿಂ, ಕರೆಗಣ್ಮಿಮಾ

೧-೧ ಶಾರದಶಶಾಂಕ (ಯ) ೨-೨ ಸಲ್ವೆ (ಚ, ತ) ೩ ತೋಳಂ (ಜ) ೪ ನವ (ಯ) ೫-೫ ನಿಯಿಂ (ಚ, ಜ, ಯ, ರ, ಲ) ೬ ಗೀತಿ (ಯ, ರ, ಲ, ವ) ೭-೭ ಕಳೆ (ಯ); ಕೇಳಿ (ವ) ೮-೮ ಕಲಶಮುಂ (ರ) ೯ ಮುರಿ (ಜ) ೧೦-೧೦ ಕಪಾಲಕಂಕಾಲಖಡ್ಗ (ಯ) ೧೧-೧೧ ಮೆನೆ ಸಂದಣಿಮಾದಿ ಗುಣಗಣಮುಂ (ಯ); ಸಂದಣಿಯು ಗಣಮುಂ (ರ) ೧೨-೧೨ ದೊಳ್ ಶಿವ (ಜ, ಯ, ರ, ಲ) ೧೩ ರಥಾಂತ (ಕ)

ನಂದಾಶ್ರುವಿಂ ಗುಡಿಗಟ್ಟಿದ ಪುಳಕದಿಂ ಸಾತ್ವಿಕಭಕ್ತಿವೆರಸು ಪೊರೆಯೇರಿ ನೊಸಲೊಳಮರ್ಚಿದಂಜಲಿಪುಟದಿಂ ಪೊಗಟ್ವ ಪರಮತಪೋಧನರಿಂ, ನೆರೆದೊತ್ತರಿಪ ಸುರಸಿದ್ಧಸಾಧ್ಯಗಂಧರ್ವಾದಿಗಳ ವಿಸರದಳವಿಗಳೆದ ಕಳಕಳಮುಂ ಪೊಂಬೆತ್ತಮನೆತ್ತಿ ಹೋ ಸಾರ್ .ತೊಲಗೆಂದು ನಿವಾರಿಸಿ ಸಮುಚಿತಸ್ಥಾನದೊಳಿಂಬುಕೆಯ್ಸುವ ಭೀಮಕಂ[೧]ಕಾಳಿಗಳೆಂಬ[೧]ವೇತ್ರಧರರಿಂ, ಸಮಯಂಬಡೆದು ಸಾದರ್ೞ್ಯ್ಯನೆ ಕರ್ಣಾಭರಣಮಂ ಪೊರ್ದಿ ಸಮುಚಿತಕಾರ್ಯವಿಜ್ಞಾಪನಂಗೆಯ್ವ ನಂದಿಕೇಶ್ವರನಿಂ, ಸದ್ಧರ್ಮಮೆ ಮೂರ್ತಿವೆತ್ತು ಸಮದೃಷ್ಟಿಯೊಳ್ ನಿಂದ ವೃಷೇಂದ್ರನಿಂ, ಬಹುವಿಧವಿಕಟವೇಷದಿಂ ವಿಕೃತಿದೋಱೆ ನಗೆಯಂ ಬೀಱೆ ನಲಿದು ನರ್ತಿಪ ಭೃಂಗಿರಿಟಿಯಿಂ, ಸಂಗೀತಮಂ ಪಾಡಿ ಮೋಹಿಪ ಗರುಡಗಂಧರ್ವಚಾರಣರಿಂದೋರಣಂಬಿಡಿದೋರಂತೆ ನಿಂದ ವೀರಪ್ರಮಥರಿಂ, ನೆರೆನೆರೆದು ತರಂಗೊಂಡು ಸಂದಣಿಸಿ ನೆಲಸಿದ ಸುರವಿಸರದಿನನಂತಾಶ್ಚರ್ಯಮನನೂನಸೌಭಾಗ್ಯಮನಮಂದಸೌಂದರ್ಯಮನಪೂರ್ವತರವಿಲಾಸಮನೊಳಕೊಂಡೆಣಿಕೆಗತರ್ಕ್ಯವಾಗಿ ಪೆಂಪನಾಳ್ದ[೨] ಪರ[೩]ಮನ ಸಭೆ[೩] ಕಣ್ಗೊಳಿಸಿರ್ದುದಂತುಮಲ್ಲದೆಯುಂ,

ಉತ್ಪಲ.

ಪಾಡುವ ಕಿನ್ನರರ್ ನಲಿದು ನರ್ತಿಸುವಚ್ಚರಿಯರ್ ಪೊದಟ್ದು ಕೊಂ
ಡಾಡುವ ಚಂಡಕೀರ್ತಿಗಳುಘೇ ಜಯಯೆಂದಡಿಗೆಯ್ದೆ ಮೆಯ್ಯನೀ
ಡಾಡುವ ತಾಪಸರ್ ಮಣಿದನರ್ಘ್ಯಸುವಸ್ತುವನೊಲ್ದು ಕಾಣ್ಕೆಯಂ
ನೀಡುವ ನಿರ್ಜರೇಂದ್ರರೊಸೆದೊಪ್ಪಿದರೋಲಗಮೊಳ್ ತ್ರಿಶೂಲಿಯಾ ೪೦

ವಚನ

ಮತ್ತಮಾಸಭೆ ಘನಾಗಮದಂತೆ ಮಂಜುಲಾಸ್ಯಚಂಚತ್ಕಲಾಪನೀಲಕಂಠಮಂಡಿತಮುಂ, ಸಮುದ್ಗತಸುಮನಃಕದಂಬಾ[೪]ಕಲಿತಮುಂ[೪]; ಛಂದಶ್ಶಾಸ್ತ್ರದಂತೆ ಸ್ವಾಗತಮತ್ತೇಭಶಾರ್ದೂಲಮುಖಬಹುವಿಧಸುವೃತ್ತಗಣಬಂಧುರಮುಂ, ಸದಕ್ಷರನಿಯಮಯತಿ[೫]ವಿರಾಜಿತ[೫]ಮುಂ; ವ್ಯಾಕರಣದಂತೆ ವಿತತಾವ್ಯಯಪ್ರತ್ಯಯಪ್ರಕೃತಿನಿಯುಕ್ತಮುಂ, ಸಮಸ್ತಕಾರಕಕ್ರಿಯಾಪದಸಮಾಶ್ರಿತಮುಂ; ನ್ಯಾಯದಂತೆ ಬಹುಗುಣ[೬]ಕರ್ಮವಿಶೇಷಸಮವಾಯಸಮನ್ವಿತಮುಂ, ಸಸಿದ್ಧಾಂತನಿರ್ಣಯಪ್ರಯೋಜನಜಾತಿರಂಜಿತಮುಂ; ವೇದಾಂತಸಂತಾನದಂತೆ ಕೈವಲ್ಯೋದಿತಶಿವಸಂಕಲ್ಪಶ್ವೇತಾಶ್ವತರಮೈತ್ರೇಯಪರಮಹಂಸವಿಭ್ರಾಜಿತಮುಂ, ಪ್ರಣವರುಚಿಸಮುದಿತಸಗುಣಬ್ರಹ್ಮರಮಣೀಯಮುಂ;

೧-೧ ಕಾಳರೆಂಬ (ಯ) ೨ ನಾಳ್ದ (ಚ) ೩-೩ ಮಸಭೆ (ಯ, ರ, ಲ) ೪-೪ ಕಲಿತಪದಮುಂ (ಜ) ೫-೫ ರಾಜಿತ (ತ) ೬ ಬಹುಗಣ (ಚ)

*ಆದಿತ್ಯವಸುವಿಸರಾನ್ವಿತಮಾಗಿಯುಮಸಿತ[೧]ತಮೋಮಿಳಿತಮುಂ, ಸ್ಫುರಿತಾಮಳಕೀಲಾಕ್ಷಾನಳಾಳಿಕದಾರುಕರೇಣುಕಾಂತಸ್ಥಿತಿಯಾಗಿಯುಂ ಸದಾಶ್ರಿತಾವನಭಾಸ್ವಮುಂ, ಸುರಭಿಗಂಧವಾಹಬಂಧುರಮಾಗಿಯುಂ ಸದಾನಂದಿಭೃಂಗ್ಯಂಚಿತಮುಂ, ಭೀಮಧರ್ಮಪ್ರವೀರಪದಾಲಂಬಿತಮಾಗಿಯುಂ ಗುರುಗಾಂಗೇಯಸುರವಿಭವಾನ್ವಿತಮುಂ, ಸವಿಧಗತಾ[೨]ಪಸಾಟೋಪಮಾಗಿಯುಂ ಸಮುಜ್ವಲಸೌಮ್ಯಾಂಗಾರಕವಿ[೩]ರಾಜಿತಮೆ[೩]ನಿಸಿರ್ದುದಂತುಮಲ್ಲದೆಯುಂ,

ಚಂಪಕ.

ನಿಯತವಿನಾಯಕಾನ್ವಿತಮಿದೆಂದೆನಿಸಿರ್ದುಮಹೀನಭೋಗಭಾ
ಗ್ಯಯುತಮುಪಾತ್ತಭಾನು[೪]ವೆನೆ ಸಂದುಮಧಃಕೃತಭಾನು[೫]ಜಾತಮಾ
ರಯೆ[೫] ಘನಲಕ್ಷ್ಮಿಯಾಗಿಯುಮಚಂಚಲಮಚ್ಯುತಶೋಭೆ ತನ್ನೊಳೊ
ಪ್ಪಿಯುಮಜಡೋದಯಸ್ಥಿತಿ[೬]ಯುಮೆಂದೆನಿ[೬]ಸಿರ್ದುದು ತತ್ಸಭಾಗೃಹಂ ೪೧

ವಚನ.

ಮತ್ತಮಲ್ಲಿ ಮನೋಜ್ಞತರಮೆನಿಸಿ ನಿರುಪಮಾನವಿಭವಂಬೆತ್ತು ಪುಟವಿಟ್ಟ ಕುಂದಣದಿಂ ಕೋಟಿಮಡಿಮಿಗಿಲೆನಿಪ ನಿಜಕಲೇ[೭]ವರಚ್ಛವಿ[೭] ಪುದಿದೆತ್ತಂ ಪತ್ತುಗೆಗೊಂಡು ಪಸರಿಸೆ ಗಜಾಜಿನಂ ತಳತಳಿಪ ಸುವರ್ಣಾಂಬರದಂತೆ ಶೋಭಿಸೆಯುಂ, ತೊಡೆದ ಭಸಿತಾಲೇಪಂ ಕಾಶ್ಮೀರಾಂಗರಾಗದಂತೆ ರಂಜಿಸೆಯುಂ, ಮಣಿಕಲಿತ[೮]ಫಣಿಕುಂಡಲಂ[೮] ಕನತ್ಕನಕಕರ್ಣಾಭರಣದಂತೆ ಕಮನೀಯಮಾಗೆಯುಂ, ತೊಟ್ಟ ಕಪಾಲಮಾಲಾಭರಣಂ ಮಿಸುಪ ಮಿಸುನಿಯಾಭರಣದಂತೆ ತೊಳತೊಳಗೆಯುಂ, ನಿಜತನುಸಹಜಸುಗಂಧದಿಂ ತಳ್ತು ಕೊರಲ ಗರಲಂ ತಳೆದ ಮೃಗಮದರೇಖೆಯೆನಿಸಿ ಮೆರೆಯೆಯುಂ, ಶಾಂತರಸಂ ಸಂಗಳಿಸಿದಳಿಕವಿಳಸಿತಶಿಖಿನಯನಂ ಗೈರಿಕಲಲಾಮಮನನುಕರಿಸೆಯುಂ, ಕರಕೋ[೯]ಕನದದರುಣರುಚಿಮುಸುಂಕಿದಜಕಪಾಲಂ ಮಣಿಮಯಪಾತ್ರೆಯೊಪ್ಪಮನಪ್ಪುಕೆಯ್ದು ವಿರಾಜಿಸೆಯುಂ, ಅನನ್ಯಸಾಮಾನ್ಯವಿಭ್ರಮಂ ತ್ರೈಲೋಕ್ಯ[೧೦]ಮಂ ಪಿಂಗದಾಳ್ವ ಪರಮಸೌಭಾಗ್ಯಯೋಗ್ಯಲಕ್ಷಣಂ ತನ್ನೊರ್ವನೊಳ್ ನೆಲಸಿ ನಿಂದುದೆಂಬ ಬಗೆಗಡರ್ಪಾಗಿ ಮಿಸುಪಖಂಡಪರಮೈಶ್ವರ್ಯವಿಭ್ರಾಜಿತಂ, ಸಕಳಕಲ್ಯಾಣಗುಣಮಣಿಗಣರತ್ನಾಕರಂ, ಜಗದಂಡಕರಂಡಷಂಡನಿರ್ಮಾಣ[೧೧]ಪ್ರವೀಣನುಂ[೧೧] ತ್ರೈಗುಣ್ಯವಾಸನಾತೀತಂ, ತ್ರಯಾಸೀಮಂತಿನೀಸೀಮಂತರತ್ನಾಭರಣಂ, ನಿರತಿಶಯ

೧ ಮನ್ವಿತ (ಯ) ೨ ಸವಿಗದತಾ (ಚ) ೩–೩ ರಾಜಿತಮುಮೆ (ಯ) ೪ ಸಾನು (ಚ) ೫–೫ ವಾಮುಹಾ|ಜಯ (ರ) ೬–೬ ಯಿವೆಂದೆನಿ (ಯ) ೭–೭ ವರದ ಛವಿ (ಕ, ಚ) ೮–೮ ಫಣಿಪ ಕುಂಡಲ (ಗ, ತ) ೯ ಕನತ್ಕೋಕ (ಚ) ೧೦ ತ್ರೈಲೋಕ (ತ) ೧೧–೧೧ ಪ್ರವೀಣಂ (ಯ)

* ಕೆಲವು ಪ್ರತಿಗಳಲ್ಲಿ ಇಲ್ಲಿ "ವಿರೋಧಾಭಾಸ" ಎಂದು ಮುಂದಿನ ಗದ್ಯಭಾಗವನ್ನು ಕುರಿತು ಸೂಚನೆ ಕೊಟ್ಟಿದೆ.

ಮಂಗಳಕಲಾಕೇಳೀನಿವಾಸಂ, ನಿಜಶಕ್ತಿಲತಾಕಂದಳಿತಪ್ರಪಂಚಪಲ್ಲವಂ, ಪ್ರಣವಪಂಕೇರುಹಪರಮಹಂಸಂ, ಜನ್ಮಜರಾರುಜಾಮರಣವಿವರ್ಜಿತವಿಮಳಕಳೇವರಂ, ಭಜಕಭವಾಮಯನಿವಾರಣಮಹಾಭಿಷಿಕ್ತನುಂ, ಭಕ್ತಜನಮನೋರಥಪಾರಿಜಾತನನಾದ್ಯಂತನವಿದ್ಯಾರಹಿತಂ, ಸರ್ವಜ್ಞಂ, ನಿತ್ಯತೃಪ್ತಮನಾದಿ[೧]ಪ್ರಬೋಧಂ, ಸ್ವತಂತ್ರ[೧]ನಲುಪ್ತಾನಂತಶಕ್ತಿಯುಕ್ತನದ್ವಿತೀಯವೈಭವಂ, ಭೋಗಮೋಕ್ಷಪ್ರದಾಯಕನಪರಿಚ್ಛಿನ್ನಸಚ್ಚಿದಾನಂದ[೨]ಮಯಂ,[೨] ಸಕಲಹೃದಯಗುಹಾನಿವಾಸನವಾಙ್ಮನಸ[೩]ಗೋಚರಂ,[೩] ವಿಶ್ವಾಧಿಕಂ, ವಿಶ್ವಭೇದ್ಯ[೪]ನುಮಾಸಹಿತಂ,[೫] ಮುಕ್ತಿಯ ಮುಗಳಂತೆ, ಚಿತ್ತಿನ ಬಿತ್ತಿನಂತೆ,[೬]ಸತ್ಯದ ಸಾರ[೬]ದಂತೆ, ನಿತ್ಯತೆಯ ನಿಲವಿನಂತೆ,[೭]ಆನಂದದಾಗರ[೭]ದಂತೆ, ಪರಿಪೂರ್ಣತೆಯ ಪರಮಸೀಮೆಯಂತೆ, ಕರುಣದ ಕಡಲಂತೆ, ಧರ್ಮದಪೆರ್ಮೆಯಂತೆ, ಸಿಂಗರದ ಸೀಮೆ[೮]ಯಂತೆ, ಮಂಗಳದ ಮೈಮೆಯಂತೆ, ಕಾಂತಿಯ ಕರುವಿನಂತೆ, ಶಾಂತಿಯ ಸರ್ವಸ್ವದಂತೆ, ಸರ್ವದೇವತಾಸಾರ್ವಭೌಮನನವಧಿವಿಭವನದ್ವಿತೀಯನೊಪ್ಪುತಿರ್ದನಂತುಮಲ್ಲದೆಯುಂ,

ಚಂಪಕ.

ಕುವರನನೊರ್ಮೆ ಮುದ್ದಿಸುತಪರ್ಣೆಯ ವಕ್ತ್ರಮನೊರ್ಮೆ ನೇಹದು
ತ್ಸವದೊಳೆ ನೋಡುತುಂ ಪ್ರಮಥವರ್ಯರನಾದರಿಸುತ್ತುಮೊರ್ಮೆ ಪಾ
ಡುವ ಸುರಸುಂದರೀರವಮನಾಲಿಸುತೊರ್ಮೆ ಪೊದಟ್ಟು ರಂಭೆಯಾ
ಡುವ ನವಲಾಸ್ಯಕೊರ್ಮೆ ಮಿಗೆ ಮುಚ್ಚುತೆ[೯]ಭೋಗಿವಿಭೂಷ[೯]ನೊಪ್ಪಿದಂ ೪೨

ಮತ್ತೇಭ.

ಪೆಱಸಾರ್ ಕೋಣಪ ನೂಂಕದಿರ್ ಪವನ ವಿತ್ತಾಧೀಶ ನೀಂ ಕಾಣ್ಕೆಯಂ
ನೆಱೆನೀಡಂತಕ ಸಂತಮಿರ್ ಗಳಪದಿರ್ ಲೋಕೇಶ ಪಾಕಾರಿ ಬಂ
ದೆಱಗೈ ಮಾಧವ ಕುಳ್ಳಿರಿಲ್ಲಿ ರಜನೀಶಂಗಬ್ಜನೀಕಾಂತ ನೀಂ
ತೆಱಪಂ ಮಾಡೆನುತಲ್ಲಿ ಕೂಡೆ ಜಡಿದಂ ಮಾಕಾಲನಾ ಕಾಲದೊಳ್ ೪೩

ಮಹಾಸ್ರಗ್ಧರೆ

ಪವನಂ ಸೌರಭ್ಯಮಂ ಪನ್ನಗಪತಿ ಮಣಿಸಂದೋಹಮಂ ಮಾಣದೊಲ್ದ
ರ್ಣವಮುದ್ಯನ್ಮೌಕ್ತಿಕಶ್ರೇಣಿಯನುರುಕನಕಾನೀಕಮಂ ಶ್ರೀದನಬ್ಜೋ
ದ್ಭವನೊಲ್ಪಿಂ ನವ್ಯವಸ್ತುವ್ರಜಮನಮಲಮಂದಾರಮಾಲಾಳಿಯಂ ನಾ
ಕಿವರಂ ಕೆಯ್ಗಾಣ್ಕೆಗೆಯ್ದಂಘ್ರಿಗೆ ಮಣಿದೊಲವಿಂ ಕೀರ್ತನಂ ಗೆಯ್ಯುತಿರ್ದರ್

೧–೧ ಪ್ರಬೋಧಸ್ವತಂತ್ರ (ಯ, ತ) ೨–೨ ಮಯನುಂ (ಚ) ೩–೩ ಗೋಚರನುಂ (ಜ) ೪ ಸೇವ್ಯ ೫ ಸಹಿತನುಂ (ಜ) ೬–೬ ಸತ್ಯದ ಸಾಗರ (ಕ, ವ) ೭–೭ ಆನಂದಸಾಗರ (ಯ, ರ, ಲ) ೮ ಮೇರೆ (ಯ) ೯–೯ ಪನ್ನಗಭೂಷ (ಯ)

ಶಾರ್ದೂಲ.

ಶ್ರೀರಾಮಾರಮಣಾರವಿಂದಭವಜಂಭಾರಾತಿಮುಖ್ಯಾಮರ
ಸ್ಫಾರಾಂಚನ್ಮುಕುಟಪ್ರಬದ್ಧಮಣಿರುಜ್ನೀರಾಜಿತಾಂಘ್ರಿದ್ವಯಂ
ಕಾರುಣ್ಯಾಕರನಪ್ರಮೇಯಮಹಿಮಾಧಾರಂ ಪರಂಜ್ಯೋತಿರಾ
ಕಾರಂ ಕಣ್ಗೊಳಿಸಿರ್ದನೈಂದವಕಲಾಶ್ರೀಶೇಖರಂ ಶಂಕರಂ . ೮೫

ಗದ್ಯ

ಇದು ನಿಖಿಲಭುವನೈಕವಲ್ಲಭಸುರಾಸುರೇಂದ್ರವರದಕರುಣಾವರಣಪರಮಶಿವಲಿಂಗ ತರುಣಪತಂಗಸಂಗತಮಂಗಳಹೃದಯಾರವಿಂದಬಂಧುರಸರಸಸಜ್ಜನ[೧] ಮಾನಿತೋಭಯ ಕವಿತಾವಿಚಕ್ಷಣ ಶ್ರೀಷಡಕ್ಷರಿದೇವ ವಿರಚಿತಮಾದ ಕಿರಾತರುದ್ರಲೀಲಾಕಥನವಿಪುಳ ಪ್ರಬಂಧದೊಳ್ ಪ್ರಥಮಾಶ್ವಾಸಂ ಪರಿಸಮಾಪ್ತಂ

೧ ಸರಸಜನ (ಯ, ವ)

# ದ್ವಿತೀಯಾಶ್ವಾಸಂ

ಶ್ರೀಕರನಗತನಯಾಸ್ಯಸು
ಧಾಕರಲಸದಮೃತರುಚಿಚಕೋರಂ ಗುಣರ
ತ್ನಾಕರನವನತ[1]ಜನರ
ಕ್ಷಾಕರನೆಮಗೀಗೆ ಸೌಖ್ಯಮಂ ಶಿವಲಿಂಗಂ ೧

ವಚನ

ಮತ್ತಮಾಗಳ್

ಚಂಪಕ.

ಕೆದರ್ದ ಜಟಾಳಿ ಜಾಱದ ಮೃಗಾಜಿನಮುಣ್ಮಿದ ಘರ್ಮವಾರಿಯಿಂ
ಕದಡಿದ ಭೂತಿ ಕಂದಿದ ಮೊಗಂ ನಿಡುಸುಯ್ಯಿಸುಪಿಂದಮಿರ್ಪುಗುಂ
ದಿದ ತುಟಿ ಕಂಪನಂಬಡೆದ ಕೆಯ್ಯ ಕಮಂಡಲು ವಕ್ಷದೊಳ್ ತೊಡಂ
ಕಿದ ಗಳದಕ್ಷಮಾಲೆ ಬಿಡದೊಂದಿರೆ ಬಂದುದು ತಾಪಸವ್ರಜಂ ೨

ವಚನ.

ಅಂತು ತವಕಂಬೆತ್ತು ತಳ್ಳಂಕದಿಂ ಮಲ್ಲಱಿಗೊಂಡು ಮನದೊಳುರ್ಬಿದುಬ್ಬಸದು ಬ್ಬೆಗಂ ಪರ್ಬಿ ಪರಿಕಲಿಸೆ ತಮತಮಗೆ ತಾಳಲಸದಳಮಾದ ಪೊಸತವಸಿಯೊರ್ವಂ ನೆಗಟ್ದಿ ತಪದೆಸಕದ ಮಸಕಮನಸಮನಯನಂಗೆ ಬಿನ್ನಪಂಗೆಯ್ವ ಬಗೆಯಂ ಬಗೆದಂ ದಿಂದ್ರಕೀಲನಗೇಂದ್ರತಪೋವನದ ತಪೋಧನರ್ ತಳ್ವದೆಟ್ತಿಂದು ಕೈಲಾಸದ ಮಣಿ ವಾಗಿಲೊಳ್ [2]ಶೈಲಾದಿಯಂ[2] ಕಂಡು ದಂಡಪ್ರಣಾಮಂಗೆಯ್ದು ಕರಾರವಿಂದಂಗಳಂ ಮುಗಿದು ನಿಂದು,

ಉತ್ಪಲ.

ಇಂದುಧರಸ್ವರೂಪ ಭುವನತ್ರಯದೀಪ ಜಿತೇಕ್ಷುಚಾಪ ಸಾ
ನಂದರಸಾಂತರಂಗ ಸದಯಾಂಚದಪಾಂಗ ಶುಭಾನುಷಂಗ ಸಂ
ಕ್ರಂದನಮುಖ್ಯಸೇವ್ಯ ಸಕಲಾಗಮಭಾವ್ಯ ಸಮಸ್ತಭವ್ಯಸ
ನ್ನಂದನಚೈತ್ರದೇವ ಜಯ ದಿವ್ಯಕಲೇವರ ನಂದಿಕೇಶ್ವರಾ ೩

ವಚನ

ಎಂದು ಭಕ್ತಿಮಿಗೆ ಪೊಗಟ್ದು ನಿಜಾಗಮನಕಾರ್ಯಮಂ ವಿಜ್ಞಾಪನಂಗೆಯ್ದು ಮುನಿವರರನುಚಿತೋಕ್ತಿಯಿಂ ಮನ್ನಿಸಿ [3]ಶೈಲಾದಿ ಸಭೆ[3]ಯಂ ಪೊಕ್ಕು ಸರ್ವೇಶ್ವ ರಂಗಱಿಪಿ ತದನುಜ್ಞೆಯಿಂ ತಾಪಸೇಂದ್ರರನೊಳಗಣ್ಗೆ ಪುಗಿಸಲೊಡನಾ ಸಭಾಂತ

೧ ನನಂತ(ಗ, ತ) ೨–೨ ಶೈಲಾದಿಪತಿಯಂ (ಜ) ೩–೩ ಕೈಲಾಸಸಭೆ (ಜ)

ರಾಳರತ್ನಜ್ಯೋತಿಯೆನಿಸಿ ರಮಣೀಯಮಾಗಿ ಸಾಲಂಕಾರಸಾರತರದಿವ್ಯಸಿಂಹಾಸನಾಸೀನನಾಗಿರ್ದುಮಾರರಮಣನಂ ಕಂಡು ಮೆಯ್ವೆರ್ಚಿದ ಪರಮಸಾತ್ತ್ವಿಕಭಕ್ತಿಯಿಂ ಪಾದಾ[೧]ಬ್ಜದೊಳ್ ಮೆಯ್ಯಿಕ್ಕಿ ಮಣಿದೆಟ್ಟು ನಿಟಿಲತಟಘಟಿತಕರಸಂಪುಟರಾಗಿ ಸಾಲ್ಗೊಂಡು ಸಮುಚಿತಸ್ಥಾನದೊಳ್ ಸಂದಣಿಸಿ ನಿಂದು,

ಚಂಪಕ.

ಜಯಜಯ ಜಾಹ್ನವೀಧರ ಜನಾರ್ದನಪೂಜ್ಯ ಕಪರ್ದಿ ಕರ್ಮಸಂ
ಚಯಜಲದಪ್ರಭಂಜನ ನಿರಂಜನ ನಿರ್ಮದ ಭಕ್ತಹೃತ್ಕುಶೇ
ಶಯತರುಣಾರ್ಕ ತಂತ್ರನಿಗಮಸ್ತುತ ನಿರ್ಜಿತಕಾಲ ಭೂಧರಾ
ಶ್ರಯ ಭುಜಗೇಂದ್ರಹಾರ ಭುವನೇಶ್ವರ ಬಾಲಶಶಾಂಕಶೇಖರಾ ೪

ಉತ್ಪಲ.

ಅಂಬರಕೇಶ ಶಂಬರವಿಪಕ್ಷಮುದಾಂಬುಜಕುಂಭಿ ಜೃಂಭಿತಾ
ಶಾಂಬರ ಕಂಬುಶಂಬ[೨]ರುಚಿಡಂಬರವಿಗ್ರಹ ವೀತದಂಭ ಹೇ
ರಂಭಕಲಾಪಿವಾಹಪಿತ ತುಂಬುರಕಂಬಲಗಾನಲೋಲ ರೋ
ಲಂಬ[೩]ಸಿತಾಂಬುದ[೩]ಪ್ರಭ ಗರಾಂಕಿತಕಂಧರ ಶಾಂಭವೀಧವಾ ೫

ಚಂಪಕ.

*ಮನುಮುನಿವಂದ್ಯ ಮಾನ್ಯ ಮಿಹಿರಪ್ರಭ ಮಾನಪದಾ[೪]ರಿ ಮುಕ್ತಿಭಾ
ಮಿನಿಯ ಮನೋಜ್ಞಮೂರ್ತಿ ಮೃಡ ಮೇರುಮಹೀಧರವಾಸ ಮೈಮೆವೆ
ತ್ತನುಪಮ ಮೋಹಶೈಲಪವಿ ಮೌನಿಸಮರ್ಚಿತ ಮಂಗಳಾಂಗ ಮ
ಸ್ತನಿಹಿತಚಂದ್ರ ಸದ್ಗುಣಿತವೈಭವ ರಕ್ಷಿಪುದದ್ರಿಜಾಧವಾ ೬

ಮತ್ತೇಭ.

ಸನಕಾದ್ಯರ್ಕಳ ಮಾನಸಾಂಬುಜಮರಾಳಂ ನೀನೆ ವೇದಾಂತನಂ
ದನಕೇಳೀರಸ[೫]ಲೋಲದಿವ್ಯಶುಕರಾಜಂ ನೀನೆ ನಾದಾಂತಕಾಂ
ಚನಹರ್ಮ್ಯಾಂತರಭಾಸಮಾನಮಣಿದೀಪಂ ನೀನೆ ಶೈವಾಗಮಾ
ಘನಭೋಮಧ್ಯಮನೋಜ್ಞಬಾಲಮಿಹಿರಂ ನೀನೇ ಭವಾನೀಧವಾ ೭

ಮಹಾಸ್ರಗ್ಧರೆ

ಕುಡಿಮಿಂಚಂ ತಳ್ತು ನಿರ್ಘೋಷಣಮೆಸೆವ ಮಹಾಪುಷ್ಕಳಾವರ್ತಕಂ ನೋ
ಟ್ಪೊಡಿದೆಂಬಂತುಗ್ರದಂಷ್ಟ್ರಂ ಪೊಳೆಯೆ ಪಟುತರಧ್ವಾನದಿಂ ಗರ್ಜಿಸುತ್ತಾ
ರ್ಪಿಡಿದುದ್ಯತ್ಪಾಶದಿಂ ನೀಳ್ದಳಱೆ ಸೆಳೆದ ಭೀಮಾಂಗಭೃನ್ಮೃತ್ಯುವಂ ನಿ
ನ್ನಡಿಯಿಂದಾರ್ದಿಕ್ಕಿ ತತ್ತಾಪಸಶಿಶುವನೊಱಲ್ದೋವಿದಯ್ ರಾಜಮೌಳೀ ೮

೧ ಪದಾ (ಚ,ಯ) ೨ ಶಂಭುಶಂಖ (ಯ) ೩-೩ ನಿಭಾಂಬರ (ಯ); ನಿಭಾಂಬುದ (ರ, ಸ) ೪ ರಥಾ (ರ) ೫ ವನ (ರ, ಸ)
* ಕೆಲವು ಪ್ರತಿಗಳಲ್ಲಿ ಈ ಪದ್ಯದ ಆರಂಭಕ್ಕೆ "ಗುಣಿತಾಕ್ಷರಿ "ಎಂಬ ಸೂಚನೆ ಇದೆ.

ಮಹಾಸ್ರಗ್ಧರೆ

ಮಿಗೆ ಮೂಲೋಕಂಗಳಂ ಗೆಲ್ದಧಿಕಮದದೆ ಪಂಚಾಸ್ತ್ರಮಂ ತೊಟ್ಟು ಕಟ್ಟು
ಜ್ಜುಗ[೧]ದಿಂ ಕಂದರ್ಪನಾರ್ಪಿಂ ಕುಟಿಲಕುಸುಮಕೋದಂಡದೊಳ್ ಸಾರ್ಕೆವಂದೈ
ವೊಗ ನಿನ್ನಂ ಮಾಣದೆಚ್ಚಂದರೆದೆಱೆದುರಿಗಣ್ಣಿಂ ಕರಂ ಪೊಣ್ಮೆ ನೀಳ್ದಾ
ಶುಗಮಿತ್ರಂ ಚುರ್ಚಿದಯ್ ದಲ್ ನೆಱೆ ಕರಿಮುರಿವೋಪನ್ನಮದ್ರೀಂದ್ರಚಾಪಾ

ನರವಾಹಂ ಬಳ್ಕೆ ಶಕ್ರಂ ಸೆಡೆಯೆ ಹುತವಹಂ ಕಂದೆ ಕಾಲಂ ಕರಂ ಕುಂ
ದೆ ರಮೇಶಂ ಕುರ್ಗೆ ಧಾತ್ರಂ ಪೆಳಱೆ ದಿನಕರಂ ಹಮ್ಮ್ರದಂಬೋಗೆ ಸರ್ವಾ
ಮರರೆತ್ತಂ ಭೀತಿಯಿಂದಂ ಪಡಲಿಡೆ[೨] ಜಗಮಂ ನುಂಗಲೆಟ್ಟಿರ್ಪ ರೌದ್ರಾ
ಕರಕಾಲಕ್ಷ್ವೇಳಮಂ ನೀಂ ತಳೆದು ಸಲಪಿದಯ್ ವಿಶ್ವಮಂ ವಿಶ್ವನಾಥಾ ೧೦

ಚರಣನ್ಯಾಸಕ್ಕೆ ಕೂರ್ಮಂ ಕುಸಿಯೆ ಫಣಿಫಣಾಮಂಡಲಂ ಬಳ್ಕೆ ಬಾಹಾ
ಪರಿಘೌಘಭ್ರಾಂತಿಯಿಂ ತಿರ್ರನೆ ತಿರುಗೆ ಮಹಾಪುಷ್ಕಲಾವರ್ತಕಂ ಭಾ
ಸ್ಕರಚಂದ್ರಾದಿಗ್ರಹವ್ರಾತಮುಮುರುಣಜಟಾಘಾತದಿಂ ಸೂಸೆ ತಾರೋ
ತ್ಕರಮೆತ್ತಂ ಮೆಟ್ಟುತಂಧಾಸುರನನೆಸಗಿದಯ್ ನೃತ್ಯಮಂ ಮೃತ್ಯುವೈರೀ ೧೧

ರವಿಚಂದ್ರರ್ ಗಾಲಿಗಳ್ ಸಾರಥಿ ಬಿದಿ ಪಳವಾತಶ್ವಮುರ್ವೀತಳಂ ಭೂ
ರಿವರೂಥಂ ಮೇರು ಚಾಪಂ ಪೆದೆ ಫಣಿಪತಿ ಬಾಣಂ ಮುಕುಂದಂ ಸಮಂತಾ
ಗೆ ವಿಶೇಷಾಟೋಪದಿಂ ಮುಪ್ಪೊೞಲನುರಿಪಿ ದೇವಾಂಗನಾಬಂಧನಂ ಪಿಂ
ಗುವಿನಂ ನೀಂ ರಕ್ಷಣಂ ಗೆಯ್ಯದೊಡುೞಿವರೆ ದೇವರ್ಕಳರ್ಧೇಂದುಚೂಡಾ ೧೨

ವಿಳ[೩]ಯಾಂಭೋರಾಶಿಯಂ ಧಿಕ್ಕರಿಸಿ ಘುಳುಘುಳುಧ್ವಾನದಿಂ ಪರ್ಬಿಧಾತ್ರೀ
ತಳಮೆತ್ತಾಕಾಶಮೆತ್ತೆಣ್ದೆಸೆಯ ಪಸರಮೆತ್ತೆಂಬವೋಲ್ ತುಂಗಭಂಗಾ [ಳಿಮಂ
ವಳಿಯಿಂ ಧೀಂಕಿಟ್ಟು ಮೂಲೋಕಮನಳುರ್ವ ಮಹಾಗಂಗೆಯಂ ಮೂರ್ಧದೊ
ಜುಳಪುಷ್ಪಂದಾಳ್ದವೊಲ್ ತಾಳ್ದಿರದೆ ಪೊರೆದೆ ಸರ್ವೋರ್ವಿಯಂ ಪಾರ್ವತೀಶಾ

ಚಂಪಕ.

ದಿವಿಜರನೊಕ್ಕಲಿಕ್ಕಿ ಸುರಕಾಂತೆಯರಂ ಸೆಱೆಗೆಯ್ದು ಸೊರ್ಕಿ ಸಾ
ರ್ಕೆವರೆ ಜಲಂಧರಂ ಗೆಲಲೊಡರ್ಚೆ ಜವಂ ಮಿಗೆ ಚಕ್ರಮೊಂದನ
ರ್ಣವದೊಳೆ ಪಾದದಿಂ ನೆಗಟ್ದು ಮೇಣದರಿಂ ಕೊಱೆ[೪]ದಾಂತೆ ತದ್ದನೂ
ದ್ಭವನ ಶಿರೋಬ್ಜಮಂ ಪೊಗೞೆ ಶೌರಿಮುಖಾಮರರಿಂದುಶೇಖರಾ ೧೪

೧ ಬ್ಬೆಗ (ರ, ಸ) ೨ ಪದವಿಡೆ (ರ, ಸ) ೩ ಪ್ರಳ (ಜ) ೪ ತರಿ (ರ, ಸ)

ಮಹಾಸ್ರಗ್ಧರೆ

ಬಳವದ್ದೋರ್ದಂಡದರ್ಪಂ ನಿಮಿರೆ ದಶಮುಖಂ ಮೌರ್ಖ್ಯದಿಂ ನೈಜಗೇಹಾ
ಚಳಮಂ ಪೊತ್ತೆತ್ತೆ ಕಾಣುತ್ತಲಸಚಲಪದಾಂಗುಷ್ಠದಿಂದೊತ್ತೆ ನೀಂ ಬಾ
ಯ್ಗಳೊಳೆತ್ತಂ[೧] ಸೂಸೆ ನೆತ್ತರ್ ತಿರುಗೆ ನಯನಮಾ ರಕ್ಕಸಂ ಕಕ್ಕಸಂಬೆ
ತ್ತೊಳಲುತ್ತುಂ ಬಿಟ್ಟು ಪಾತಾಳದೊಳೆ ಮಿಡುಕನೇ ಪೇಳ್ ತ್ರಿಶೂಲಾಂಕಪಾಣೀ

ಹರಿಗಿತ್ತೆಯ್ ಚಕ್ರಮಂ ವಾಕ್ಪತಿಗೆ ನಿಗಮಸದ್ವಿದ್ಯೆಯಂ ದಿವ್ಯಭೋಗೋ
ತ್ಕರಮಂ ಗೋತ್ರಾಹಿತಂಗತ್ಯಧಿಕರುಚಿಯನರ್ಕಂಗೆ ಪೀಯೂಷಭಾಸ್ವತ್
ಕರಮಂ ಚಂದ್ರಂಗೆ ಚಂಚನ್ನಿಧಿಯನುರುಕುಬೇರಂಗೆ ಸಂಜೀವನಶ್ರೀ
ವರಮಂ ಕಾವ್ಯಂಗೆ ವಾಚಸ್ಪತಿಗೆ ಸುಮತಿಯಂ ಕೂರ್ಮೆಯಿಂ ನೀಲಕಂಠಾ ೧೬

ಜಗಮೆಲ್ಲಂ ನಿನ್ನ ಕಣ್ಸನ್ನೆಯೊಳೆ ಜನಿಯಿಕುಂ ಬಾಳ್ಗುಮಳ್ಕಾಡುಗುಂ ಸ
ಗ್ಗಿಗರೆಲ್ಲರ್ ನಿನ್ನ ಪಾದಾಂಬುಜದ ಭಜನದಿಂ ಸಂಪದಂದಾಳ್ವರರ್ಕೇಂ
ದುಗಳೆಂದುಂ ನಿನ್ನ ತೇಜೋಬಲದೆ ಬೆಳಗುವರ್ ಲೋಕಮಂ ಮಾಯೆ ನಿನ್ನಾ
ಜ್ಞೆಗೆ ಸಂದೆಲ್ಲಾ[೨]ಗಳುಂ ವರ್ತಿಪಳೆನೆ ನಿನಗಾರ್ ಸಾಟಿ ಪೇಳ್ ಭಾಳ[೩]ನೇತ್ರಾ

ಅನವದ್ಯಂ ನಿರ್ವಿಕಾರಂ ನಿರುಪಮಮಹಿಮಂ ನಿತ್ಯನಾದ್ಯಂತಶೂನ್ಯಂ
ಘನತೇಜೋರಾಶಿ ಪೂರ್ಣಂ ಪ್ರಣವಪರಿಗತಂ ಸಚ್ಚಿದಾನಂದರೂಪಂ
ವಿನುತಾಜಾಂಡಾದಿಬೀಜಂ ಶ್ರುತಿಚಯಚಕಿತಸ್ತುತ್ಯನೇಕಂ ಪರಂ ಪಾ
ವನಶೀಲಂ ನೀನೆ ದಲ್ ನಿನ್ನಿರವನಱಿವರಾರ್ ವಿಶ್ವದೊಳ್ ಭೋಗಿಭೂಷಾ ೧೮

ಜಗದಾತ್ಮರ್ ನಿನ್ನ ದೃಷ್ಟಿಪ್ರಭೆಯೊಳಖಿಳಮಂ ಕಾಣ್ಗುಮಂಭೋಜಗರ್ಭಾ
ದಿಗಳೆಲ್ಲರ್ ನಿನ್ನ ವಾಙ್ಮಾನದಿ[೪]ನಱಿಗುಮಶೇಷಾರ್ಥಮಂ ನಿನ್ನ ಸನ್ಮೂ
ರ್ತಿಗಳಿಂ ಬಾಳ್ದಿಪ್ಪುದೆಂದುಂ ಚರಮಚರಮುಗಣ್ಯಂ ಮುನೀಂದ್ರರ್ ಪೊಗಳ್ವು[೫]
ಜ್ಜುಗದಿಂದಂ ನಿನ್ನ ನಾಮಾಮೃತದೆ ಪಡೆದಪರ್ ಮುಕ್ತಿಯಂ ವಾಸುದೇವಾ ೧೯

ಪವಳಂ ಚಿದ್ಬಿಂ[೬]ದು ದೀವ್ಯ[೬]ನ್ಮಣಿಗಣಮಣಿಮಾದ್ಯಷ್ಟಕಂ ಭೂರಿಭೂಭೃ
ನ್ನಿಹವಂ ತತ್ತ್ವಾಳಿ ತಾನಾಗಿರೆ ಮಿಸುಪ ಭವಚ್ಛಕ್ತಿವಾರಾಶಿಯೊಳ್ ಪೊ
ಣ್ಮುವುದೇ[೭]ಗಳ್ ಪದ್ಮಜಾಂಡಪ್ರಕರಪರಿಲಸದ್ಬುದ್ಬುದಶ್ರೇಣಿ ಮಾಯಾ
ಪವನವ್ಯಾಪಾರದಿಂದಲ್ಲಿಯೆ ಮಗುಳ್ದಡಗುಂ ಸರ್ವಗೀರ್ವಾಣನಾಥಾ ೨೦

೧ ಳಿತ್ತಲ್ (ಚ) ೨ ದಾವಾ (ರ, ಸ) ೩ ಘಾಳ (ಜ) ೪ ವಾಙ್ಮಾತ್ರದಿ (ರ) ೫ ಪೊದಳ್ದು (ಯ) ೬-೬ ದುವುದ್ಮ (ಜ) ೭ ದೀ (ತ, ಯ)

ಮಹಾಸ್ರಗ್ಧರೆ
ಉರುಲಿಂಗಾಕಾರದಿಂ ನೀನಿರೆ ಹರಿವಿಧಿಗಳ್ ಪಾದಮಂ ಮೌಳಿಯಂ ಕಂ
ಡರೆ ಬಹ್ವಾಯಾಸದಿಂದಾದೊಡಮಱಿಯಿಯುಮೆಲ್ಲಾಗಳುಂ ಸರ್ವಬೋಧಾ [ನಿ
ಕರಮಾಮ್ನಾಯೌಘಮುಂ ಕೀರ್ತಿಸಿಯುಮಱಿದುದೇ ನಿನ್ನ ಮಾಹಾತ್ಮ್ಯಮಂ
ಕ್ಕರ ಮಾತೇಂ ದೇವ ನಿನ್ನುನ್ನತಿಯನಱಿವೊಡಾಕಾಶಗಂಗೋತ್ತಮಾಂಗಾ ೨೧

ಸಲೆ ಮೂವತ್ತಾಱು ತತ್ತ್ವಂಗಳ ತುದಿನೆಲೆ[೧]ನಿಂದಾತ[೨]ನುಂ ನೀನೆ ನಿತ್ಯೋ
ಜ್ಜ್ವಲಪಂಚಬ್ರಹ್ಮಮೂರ್ತಿಪ್ರಕಟಿತವಿಭವಂ ನೀನೆ ಸರ್ವೇಶ ನಿರ್ವ್ಯಾ
ಕುಲಮಿರ್ಪತ್ತೈಯ್ದು ಸಲ್ಲೀಲೆಗಳನಸದಳಂ ತಾಳ್ದವಂ ನೀನೆ ಭಕ್ತಾ
ವಲಿಗೆಂದುಂ ಭೋಗಮೋಕ್ಷಪ್ರದನೆನಿಸಿದನುಂ ನೀನೆ ಕಾರುಣ್ಯಸಿಂಧೂ ೨೨

*ಕರಿದೈತ್ಯಧ್ವಂಸಿ ಕಾಲಾಂತಕ ಕಿಟಿ[೩]ಹರ ಕೀಲೋಜ್ಜ್ವಲನ್ನೇತ್ರ ವಿಶ್ವಾಂ
ಕುರ ಕೂಟಸ್ಥೇಶ ಕೇಕಿಧ್ವಜಪಿತ ಭಜಕಾನೀಕಕೈವಲ್ಯ ಕೋಕಾ
ಸುರಹೃತ್ಸಂಸೇವ್ಯ ಕೌಟಿಲ್ಯರಹಿತ ಜಿತಕಂದರ್ಪ ಕಸ್ತೂರಿಕಾತ್ವಿಡ್
ಗರಭಾಸ್ವದ್ಗ್ರೀವ ಚಂದ್ರದ್ವಿಗುಣಿತರುಚಿ ನೀಂ ಪಾಲಿಸೆಮ್ಮಂ ಕಪರ್ದೀ ೨೩

ಕರೆಗಣ್ಮುವ ಸುಖಜಲಮು
ಬ್ಬರಿಸುವ ರೋಮಾಂಚವೆಸೆಯೆ ಗದ್ಗದಗಳಿತಾ
ಕ್ಷರಮಂ ಸಂತವಿಡುತ್ತುಂ
ಗಿರಿಶನನೊಲವಿಂದೆ ಪೊಗಟ್ಟರಾ ಮುನಿವರ್ಯರ್ ೨೪

ವಚನ
ಇಂತೆಂದು ಪೊಗಟ್ಟು ಮಗುಟ್ಟುಂ ಮಣಿದ ಮುನಿವರರ ಸಂಸ್ತವಕ್ಕೆ ಸಂತಸಂ ಬಟ್ಟು ಕಂತುಹರಂ ಕಾರುಣ್ಯರಸಂ ತೆರೆಮಸಗುವ ನಿಜಕಟಾಕ್ಷದಿಂ ನಿರೀಕ್ಷಿಸಿ,

ಆವ ಗಿರಿಯಲ್ಲಿ ನಿಮ್ಮ ತ
ಪೋವನಮಾಯೆಡೆಯನುಟಿದಿದೇಂ ಕಾರಣಮಿಾ
ತಾವಿಂಗೆ ಬಂದಿರಾವುದು
ಬೇವಸಮದನೊರೆವುದೆಮ್ಮೊಳೆಂದನುಮೇಶಂ ೨೫

೧ ತುದಿಯೊಳೆ (ಯ)
೨ ನಿಂದಾಂತ (ಜ)
೩ ಕಿರಿ (ಗ, ತ)
* ಕೆಲವು ಪ್ರತಿಗಳಲ್ಲಿ ಈ ಪದ್ಯದ ಆರಂಭಕ್ಕೆ "ಗುಣಿತಾಕ್ಷರಿ" ಎಂದು ಸೂಚನೆ ಇದೆ.

ವಚನ

ಎಂದು ಸರ್ವಜ್ಞಂ ತಾನಱಿಯದನಂತೆ ಬೆಸಗೊಳ್ವಿನಮಾ ತಪೋಧನರೊಳೊರ್ವಂ ಪ್ರಗಲ್ಭತಾಪಸಂ ಕಿಂಕರತೆಯನಾಳ್ದು ಕರಾಂಬುಜಂಗಳಂ ಮುಗಿದು ದೈನ್ಯಂದೋಱಿ ನಿಂದು,

ಅವಧರಿಪುದಖಿಳನಿರ್ಜರ
ನಿವಹಕಿರೀಟಾಗ್ರಘಟಿತನಿಜಚರಣ ಕೃಪಾ
ರ್ಣವ ಭವಹರ ಹರ ಗಿರಿಜಾ
ಧವ ದೇವ ಮದೀಯಮಹಿತವಿಜ್ಞಾಪನಮಂ ೨೬

ಮಹಾಸ್ರಗ್ಧರೆ

ಮಣಿಕೂಟಂ ಮಂಜುಳಪ್ರಸ್ಫುಟಮಣಿಮುಕುಟಂ ನಿರ್ಝರಂ ತಾರಹಾರಂ
ಕ್ಷಣರೋಚಿಃಸ್ವರ್ಣಯುಕ್ತಂ[1] ಸುರಪಮಣಿಮಹಾಕುಂಡಲಂ ಪಾರ್ಶ್ವಮೇಘಂ
ಪ್ರಣುತೋದ್ಯತ್ಕಾನನಂ ಪ್ರಸ್ಫುರಿತಹರಿತವಸ್ತ್ರಂ ಸಮಂತಾಗೆ ಭೂಭೃದ್
ಗುಣ[2]ರುಂದ್ರಂ ಕಾಂತಿಸಾಂದ್ರಂ ಕರಮೆಸೆದುದು ತಳ್ತಿಂದ್ರಕೀಲಾಚಲೇಂದ್ರಂ

ಚಂಪಕ.

ಮುನಿಗಳ ಬೀಡು ಮುಕ್ತಿಯ ತವರ್ಮನೆ ಪೆರ್ಮೆಯ ಗೊತ್ತು ಘೋರಕಾ
ನನದೆಡೆ ಸಿಂಹಮುಖ್ಯಮೃಗದಿಕ್ಕೆ ಮಣಿವ್ರಜದಾಗರಂ ಮಹಾ
ಘನಸುರಸಿದ್ಧಚಾರಣರ ಚಾವಡಿ ಸಯ್ಪಿನ ಸೀಮೆ ದಿವ್ಯನಂ
ದನದ ನಿವಾಸಮಾ ನಗಮದಂ ಮಿಗೆ ಬಣ್ಣಿಸಲಾರ್ಗೆ ಗೋಚರಂ ೨೮

ಸುರಮಣಿಯಿಂದೆ ತಳ್ತು ಘನಭೋಗಸಮಾಶ್ರಿತನಾಗಿ ವಂಶಭಾ
ಸುರತೆ[3]ಯನಾಳ್ದು[3] ಚಂದನಲಸತ್ತಿಳಕಂದಳಿದಾತ್ತನಿರ್ಜರ
ತ್ವರುಚಿರನಾಗಿ ಸಾನುಗತಸತ್ತ್ವನುಪಾಶ್ರಿತದಿವ್ಯನಂದನಂ
ಸರಸನನಂತಭೂಷಿತನಿಳಾಧರರಾಜನದೇಂ ಮನೋಜ್ಞನೋ ೨೯

ಉದಯಿಸಿ ತೋರ್ಪ ಚಂದ್ರಮನುಮಸ್ತನಗಾಗ್ರದೊಳಿರ್ಪ ಭಾನವುಂ
ಪದೆದು ವಿಳಾಸದಿಂ ತಳೆದ ಶಂಖದ ಚಕ್ರದ ಮಾಱ್ಕೆಯಂ ಮನ
ಕ್ಕೊದವಿಸೆ ಪೀತವಾಸದವೊಲೊಪ್ಪಿರೆ ಗೈರಿಕಧಾತು ಮೇಘಮೊಂ
ದಿದ ಗಿರಿ ಕೃಷ್ಣಲೀಲೆವಡೆದೊಪ್ಪುಗುಮಂತದು ತಳ್ತ ಸಂಜೆಯೊಳ್ ೩೦

೧ ಮುಕ್ತಂ (ತ)
೨ ಗಣ (ಯ)
೩-೩ ಯ ತಾಳ್ದು (ರ, ಸ)

ಇಂದ್ರಕೀಲ ಪರ್ವತದ ಮೇಲಿರುವ ಕಿರಾತಾರ್ಜುನ ಕಂಬದ




ಪೂರ್ವ ದಿಕ್ಕಿನ ನೋಟ. ಬಜವಾಡ (ಕೃಷ್ಣಾ ಜಿಲ್ಲೆ)

ಇಂದ್ರಕೀಲ ಪರ್ವತದ ಮೇಲಿರುವ ಕಿರಾತಾರ್ಜುನ ಕಂಬದ




ಪಶ್ಚಿಮ ದಿಕ್ಕಿನ ನೋಟ. ಬೆಜವಾಡ (ಕೃಷ್ಣಾ ಜಿಲ್ಲೆ)

*( By the Courtesy of the Director-General of Archaeological Survey of India )*

ಇಂದ್ರಕೀಲ ಪರ್ವತದ ಮೇಲಿರುವ ಕಿರಾತಾರ್ಜುನ ಕಂಬದ




ದಕ್ಷಿಣ ದಿಕ್ಕಿನ ನೋಟ. ಬೆಜವಾಡ (ಕೃಷ್ಣಾ ಜಿಲ್ಲೆ)

ಇಂದ್ರಕೀಲ ಪರ್ವತದ ಮೇಲಿರುವ ಕಿರಾತಾರ್ಜುನ ಕಂಬದ




ಉತ್ತರ ದಿಕ್ಕಿನ ನೋಟ. ಬೆಜವಾಡ. (ಕೃಷ್ಣಾ ಜಿಲ್ಲೆ)

*( By the Courtesy of the Director-General of Archaeological Survey of India)*

ಅರುಣೋದಯದರುಣದ್ಯುತಿ
ಗಿರಿಕಟಕದ ಪಳಿಕಿನಲ್ಲಿ[೧] ಬಿಂಬಿಸೆ ಕಾಣು
ತ್ತರುಣಜಲಂಗೆತ್ತಲ್ಲಿಯ
ಹರಿಣಾರಿಯ ಮಱಿಗಳೆಯ್ದೆ ಸಕ್ಕುತ್ತಿರ್ಕುಂ ೩೧

ಪಳಿಕಿನ ಪಾಸಱೆಯ ವಿನಿ
ರ್ಮಳತೆಯಿನಾ ಗಿರಿಯ ಖಚರತತಿ ಕಾಣ್ಗುಮಿಳಾ
ತಳಮುಂ ತಳೆದಹಿಪನ ಮಣಿ
ವಿಳಸಿತರುಚಿವಿಸ್ಫುರತ್ಫಣಾಮಂಡಳಮುಂ ೩೨

ಅಹಿಪತಿ ನಿಜಭಾರಮನೀ
ಮಹೀಧರಂ ಪೊತ್ತುದೆಂದು ಫಣಮಣಿಗಣಮಂ
ವಹಿಲದಿನಿತ್ತನೊ ಪೇೞೆನೆ
ಬಹುರತ್ನಕದಂಬಮುದಱ ತಪ್ಪಲೊಳೆಸೆಗುಂ ೩೩

ಮೊಗಮಿಟ್ಟೊದಲ್ಕೆಳಸುಗು
ಮಗದಗ್ರದ ಕರಡಿಯಮರ್ದುಗೆಯ್ಯನ ಪುತ್ತುಂ
ಮಿಗಮನದಂ ಪುಲಿ ಪೊಯ್ಯಲ್
ಬಗೆವುದು ತಾನೆಂದೊಡದ್ರಿಯೇನುನ್ನತಮೋ ೩೪

ವಚನ

ಮತ್ತಮಾ ನಗೇಂದ್ರಂ ನರೇಂದ್ರನಂತನೇಕಪವಿರಾಜಿತಮಣಿಕಟಕರಂಜಿತಮುಂ, ಅಧಿಕಾನನ[೨]ಭ್ರಾಜಿತಮುಂ; ಮರುತ್ಪಥದಂತೆ ಬಹುಲತಾರಾರಾಜಿತಮುಂ,ಭಾಸ್ವದ್ವಿಧೂಪಲಸಿತರುಚಿಮನೋಜ್ಞಮುಂ; ಮಧುಕರಾಳಿಯಂತೆ ಸಮದಪುಂಡರೀಕಗಂಡಕಮಂಡಿತಮುಂ, ಸುಗಂಧಸುಮನೋಗಣರಾಗಾನ್ವಿತಮುಂ; ದೈತ್ಯಸೈನ್ಯದಂತೆ ಹರಿನರಾಹವ[೩]ಸದ್ಬಲಖಡ್ಗಿಮಂಡಿತಮುಂ, ಮಿಳದ್ದಾನವಪುಷ್ಕಲಭರೋಚಿತಮುಂ; [೪]ಯಜ್ಞದಾಗಾರ[೪]ದಂತೆ ಸದಧ್ವರಚಿತವಿಭ್ರಮಶಿಖಿದ್ವಿಜರಾಜಿತಮುಂ, ವಿತತಧೀವರಮುಖೋದ್ಗತಶ್ರುತಿವಿಶದಾರಾವವಿಜೃಂಭಿತಮುಂ;

*ಸುವಂಶಾನ್ವಿತಮಾಗಿಯುಂ ಕುಜಾತಿಸಮೃದ್ಧಮುಂ, ಶಬಲೋ[೫]ಪಯುಕ್ತಮಾಗಿಯುಮವಿಗ್ರಹಾಶ್ರಯಮುಂ, [೬]ಮದನಾಗ[೬]ಮಹಿತಸ್ಥಿತಿಯಾಗಿಯುಂ ಶಂಬರ

೧ ಕದಲ್ಲಿ (ರ) ೨ ಕಾನನಾ (ಯ) ೩ ವರಾಹವ (ಯ, ಜ, ರ) ೪–೪ ಯಜ್ಞಾಗಾರ (ಕ, ಜ, ಯ) ೫ ಶಬರೋ (ಕ) ೬–೬ ಮದನರಾಗ (ರ) * ಕೆಲವು ಪ್ರತಿಗಳಲ್ಲಿ ಇಲ್ಲಿ "ವಿರೋಧಾಭಾಸ" ಎಂದು ಮುಂದಿನ ಗದ್ಯವನ್ನು ಕುರಿತು ಸೂಚನೆ ಕೊಟ್ಟಿದೆ.

ವಿಲಾಸಾಸ್ಪದಮುಂ, ಘನತರಕ್ಷುಧಾವನಸರಕೃಷ್ಣಸಾರವ್ಯಾ[೧]ವೃತಿಯಾ[೧]ಗಿಯುಂ ಲುಬ್ಧಕಕುಲಲಕ್ಷಣವ್ಯಾಪಾರಸಂಗತಮುಂ, ವಿರಾಜಿತಾಮ್ರಶ್ರೀಯುಕ್ತಮಾಗಿಯುಂ ಕಪಿಶತಾಲಂಬಿತಮುಂ, ಸರ್ವದಾರೂಪಶೋಭಿತಮಾಗಿಯುಮುತನುಶೋಭಾಸ್ಪದಮೆನಿಸಿರ್ದುದಂತುಮಲ್ಲದೆಯುಂ;

ಚಂಪಕ.

ಹಿಮನಗದಂತೆ ಮೇಣದು ಸದಾಮಹಿಮಾನ್ವಿತಮಸ್ತಶೈಲದಂ
ತಮಳಿನವೃದ್ಧಹಂಸಯುತಮಿಂದ್ರಹರಿದ್ಗಿರಿಯಂತನಂತರ
ತ್ನಮಹಿತಮಾದಿತೇಯನಗದಂತೆ ಸುರಾಗಗಣಾವೃತಂ[೨] ಮನೋ
ಜ್ಞಮಲಯಭೂಧ್ರದಂತೆ ಮೃದುಯಾನಮರುದ್ರುಚಿರಂ ಮಹೀಧರಂ ೩೫

ಕರಮೆಸೆದತ್ತು ದೇವನಗ[೩]ದಿಂ ಬನದಿಂ ಬಿನದಂಬಡುತ್ತೆ ಸಂ
ಚರಿಪ ನಭಶ್ಚರಪ್ರಕರದಿಂ ಝರದಿಂ ಸೆರೆದಿಂಬುವೆತ್ತ ಕಿಂ
ನರಕುಲದಿಂದೆ ರನ್ನಗವಿಯಿಂ ಪವಿಯಿಂ ಸವಿಯಿಂ ಪೊದಟ್ದ ಕಿಂ
ಪುರುಷರ ಗಾನದಿಂದೆ ಖಗದಿಂ ಮೃಗದಿಂ ನಗದಿಂದೆ ಕಂದರಂ ೩೬

ನಿಡುಜೆಡೆ ಬೆನ್ನೊಳಾಡೆ ಕಳಕಾಂಚಿಝಣತ್ಕೃತಿ ಪೊಣ್ಮೆ ತಳ್ತ ಪೊಸ್
ಗೊಡಮೊಲೆಗಳ್ ಕದಕ್ಕದಿಸೆ ಪೀವರವೃತ್ತನಿತಂಬಮಂಡಲಂ
ಪೊಡರೆ ಮುಖಾಂಶುನೇತ್ರರುಚಿ ಪರ್ಬೆ ಪಳಂಚೆ ನಗಾಗ್ರದಿಂದೆ ದಿಂ
ಕಿಡುತೆ ನಭೋಂತದೊಳ್ ವಿಹರಿಪರ್ ಖಚರಾಂಗನೆಯರ್ ವಿಲಾಸದಿಂ ೩೭

ಸುರಧನು ರನ್ನವಲ್ಲಣದ ಮಾಟ್ಕೆಯೊಳೊಪ್ಪಿರೆ ಬಳ್ಳಿಮಿಂಚು ವಿ
ಸ್ಫುರಿತಖಲೀನದಂತಿರೆ ಘನಧ್ವನಿ ಹೇಷಿತಮಾಗೆ ತುಂಗವಾ
ರ್ಧರಮದು ತೋಱೆ ನೀಲತುರಗಂಬೊಲದಂ ಪದೆದೇಱಿ ಮಾಱಿ ನಿ
ರ್ಭರದ ಗತಿಪ್ರಪಂಚಮನೊಡರ್ಚುವರಚ್ಚರಿಯರ್ ಸುರಾಧ್ವದೊಳ್. ೩೮

ಶಾರ್ದೂಲ.

ಮಿಂದಂತಾಗಿರೆ ಮೆಯ್ ಮರಂದರಸದಿಂ ಪೂಗೊಂಚಲೊಳ್ ಪೊಕ್ಕು [೪]ಸ
ಣ್ಪಿಂದಂ[೪] ಕಂಪಿಡಿದೊಳ್ಪ[೫]ರಲ್ದಿಱಿದು ಮಂದಾರಾದಿಭೂಜಂಗಳೊಳ್
ತಂದೊಳ್ಪಿಂ ಸಮೆದಚ್ಚಪೂದೊಡವನೋರಂತಿಟ್ಟು ನಾನಾವಿಳಾ
ಸಂದೋಱುತ್ತಿನಿಯರ್ಗೆ ರಂಜಿಪುದಜಸ್ರಂ ಖೇಚರೀಸಂಚಯಂ ೩೯

೧-೧ ವೃತ್ತಿಯಾ (ಗ); ಪ್ಲುತಿಯಾ (ಚ); ಪೃತಿಯಾ (ವ) ೨ ಣಾನ್ವಿತಂ (ಯು) ೩ ದೇವವನ (ರ) ೪-೪ ನ । ಲ್ಪಿಂದಂ (ರ, ಲ) ೫ ದುಳ್ಪರ (ಯ)

ಉತ್ಪಲ.

ಕಿಂನರಿಯಿಂಚರಂಬಿಡಿದು ಸುಸ್ವರದಿಂ ಸವಿ ಸೂಸೆ ಪಾಡುವಾ
ಕಿಂನರಿಯಂಕದೊಳ್ ನಸುಮುಗುಳ್ಚಿದ ಕಣ್ ಕಡೆವಾಯ ದೂರ್ವ್ ಚೆ
ಲ್ವಿಂ ನಿಮಿರ್ದಂಗಮೆತ್ತಿದ ಕೊಡಂಕೆ ಜವಂಗೆಡದೇಟ್ವಿ ರೋಮಹ
ರ್ಷಂ ನೆಱೆಯೊ[೧]ಪ್ಪೆ ನಲ್ಗೊಣಸು ಪಟ್ಟಿಸೆದಿರ್ದುದೊಂದು ತಾಣದೊಳ್ ೪೦

ಚೆಂದಳಿರ್ದೊಂಗಲಿಂ ಮಿಸುಪಶೋಕೆ ಫಲಾವಳಿ ತೀವಿ ತೋರ್ಪ ಮಾ
ಕಂದಮರಲ್ಗಳಿಂ ಪುದಿದ ಚಂಪಕಮುದ್ಗಮಮಂಜರೀವಿಳಾ
ಸಂದಳೆದಿರ್ಪ ಮಾಧವಿ ಮುಗುಳ್ತೊಱಗಿರ್ದ ಮನೋಜ್ಞಮಲ್ಲಿಕಾ
ಬೃಂದಮನೂನಪುಷ್ಪಚಯಮೊಪ್ಪಿರೆ ನಂದನಮಲ್ಲಿ ರಂಜಿಕುಂ ೪೧

ಚಂಪಕ.

ಘನವಿಕಚಪ್ರಸೂನಹಸನಂ ಮಿಗೆ ಬಾನ್ಗೊಗೆದೆಟ್ದು ನೀಟ್ದಿ ಕೊಂ
ಬೆನಿಪ ಭುಜಾಗ್ರಮಂ ನೆಗೆಪಿ ಚಂಚಲಪಲ್ಲವಪಾಣಿಯಿಂ ಪಿಕ
ಸ್ವನಮಮರ್ದೊಪ್ಪೆ ಕೂಗಿ ಪೊಣರಲ್ ಕರೆವಂತೆಸೆಗುಂ ಸುರೇಂದ್ರನಂ
ದನರಮೆಯಂ ತದದ್ರಿತಟನಂದನಲಕ್ಷ್ಮಿವಿಲಾಸವೇಟ್ಗೆಯಿಂ ೪೨

ವಚನ

ಮತ್ತಮಲ್ಲಿ, ಸಾಂದ್ರಮರಂದರಸಭರಭರಿತಸುರಭಿಯುತ[೨]ವಿಕಚಕುಸುಮಮಂಜುಮಂಜರಿಪುಂಜ[೩]ದೊಳೆರದೆಱಗಿ[೩] ಪೊಱಮಡದೆ ನಿಲುಂಬಿ ನಿಂದು, ನಿಬಿಡಮೆನೆ ಮುಸುಂಕಿದ ಮಧುಮುದಿತಮಧುಕರಪ್ರತಾನ[೪]ದಿಂ ಶ್ಯಾಮಳತೆವೆತ್ತು, ನಿಜಮೂಲದೊಳ್ ಬಳಸಿ ತಳಿರ್ತ ಚೆಂದಳಿರ್ಗಳುಟ್ಟ ಪೀತಾಂಬರದಂತಿರೆ, ಕಳಕಂಠಕಳರವಂ ಪಂಚಮದ[೫]ಬಂಚರ[೫]ದಿಂಚರಮೆನಿಸೆ, ಸರಭಸಂ ಪರಿತಂದು ಚಕ್ರಾ[೬]ನಿಲವಲೆ[೬]ಮೊಲೆದೆತ್ತಿದರಲ ಪರಾಗಪಟಲಂ ಮೇಲೆ ಪರಿಕಲಿಸಿ ಪರ್ಬಿ, ಬಿತ್ತರಮಾಗಿ ಪತ್ತುಗೆಗೊಂಡೆತ್ತಿದ ಗೋವರ್ಧನಗಿರಿಯ ಪಿರಿಯ ಸಿರಿಯನೊಳಗುಗೊಳಿಸೆ, ಸಾಕ್ಷಾತ್ ಕೃಷ್ಣನಂತೆ ಕಣ್ಗೆವಂದ ರಸಾಲರಸಾರುಹಮುಂ; ಪಚ್ಚೆವರಲಂತೆಸೆವ ಪಸಿಮಿದಿಗಳಿಂ, ಕೆಂಬರಲೆಂಬಂತೆ ಸಾರತರಮಾದ ಮೋರೆವಣ್ಗಳಿಂದಿಂದ್ರನೀಲದಂದಂಬಡೆದು ವಿಲಸಿತಮಾದ ಕಳಿ[೭]ವಣ್ಗಳಿಂ ಮಣಿಗಣಮೆನೆ ಕಾತೊಱಗುವ ಕಲ್ಪಕುಜದಂತೆ ರಾಜಿ[೮]ತಮಾದ ರಾಜಜಂಬೂಕುಜಮುಂ; ಧರಾವಧು ಮಱೆಗಱೆದು ಮುನ್ನಂ ತನ್ನನೋವಿದ ಲೇಸನೋಸರಿಸದೆ ನೆನೆನೆನೆದು ಜೀಮೂತವಾಹಂಗೆ ನಿಜಸುಧಾರಸಮಂ ಮರಕತ ಕಳಶದೊಳ್ ತೀವಿ ನಿಡುಮೊಲೆಯಂ ನೆಗೆಪಿ ಮೇಗಣ್ಗೆ ನೀಡುಂ ನೀಡಿದಪಳೆಂಬಂತೆ

೧ ನೆರೆದೊ (ಯ, ರ, ಲ) ೨ ಯುಕ್ತ (ರ) ೩-೩ ದೊಳೆರಗಿ (ಯ) ೪ ಪ್ರಕರ (ಚ, ವ); ಪ್ರತಾಪ (ರ) ೫-೫ ಬಂಚ (ಯ) ೬-೬ ನಿಲವಲೆ (ಯ, ಲ); ನಿಲಸಿಂ (ಜ) ೭ ಕಳಿತ (ಜ, ಕ) ೮ ವಿರಾಜಿ (ಜ)

ರಂಜಿಪ ನಾರಿಕೇಳಮುಂ; ರತ್ನಗರ್ಭೆ ತನ್ನ ಸಿರಿಯಂ ಖಚರರ್ಗಱಿಪಲೆಳಸಿ ಮರಕತ ಮಣಿಯ ಚಲ್[೧]ಗುಚ್ಛಂಗಳಂ[೨] ತೋರಣಂಗಟ್ಟಿದಂತೆ ಪಸಿರ್ಗಾಯ್ಗೊಡಂಬೆಗಳಿಂ ಕಣ್ಗೊಳಿಪ ಕೌಂಗುಮರಂಗಳುಂ; ವಿಜಯಯಾತ್ರೆಗೆ ತಳರಲುಜ್ಜುಗಿಪ ಮಕರಧ್ವಜ ಮಹಾರಾಜಂಗೆ ಶುಭಮುಹೂರ್ತದೊಳ್ ಮಧುಸಚಿವನಿಂಬಱಿದು ಪೊಯ್ದಿಂದ್ರ ಗೋಪದ ಗೂಡಾರದಂತೆ ಕಾಂತಮಾದ ಕೆಂದಳಿರ್ ತೀವಿದ ಕಂಕೇಲ್ಲಿಯುಂ; [೩]ಬನಂಬೊಕ್ಕು[೩]ಬಾಯ್ವಿಡುವ ಬಿರಯಿಗಳ ಬಿಸುಸುಯ್ ಸುಡೆ ಬಿಕ್ಕನೆ ಬಿರಿದ ರತಿಪತಿಯ ಮಣಿಕರಂಡಕದ ಚೆಲ್ವಂ ತಳೆದು ಬೀಡೆವರಿದು ಬಿಟ್ಟಂ[೪] ಸೂಸುವ ಪಣ್ಗಳಿಂ ಸಂಗಳಿಸಿದ ದಾಡಿಮಂಗಳುಂ; ಪೂವಲಿಯಂ ಕೆದರ್ದು ಲತಾನರ್ತಕಿಯರಾಡೆ, ಮಧುಕರಂಗಳ್ ಪಾಡೆ, ಕಳಕಂಠ[೫]ಕಾಹಳಿಕಾ[೫]ರವಂ ವಿಜೃಂಭಿಸೆ, ಶುಕವಂದಿ ವೃಂದಂ ಪೊಗೞೆ, ಗಂಧವಾಹಂ[೬] ಸುಗಂಧಸಾರಮನುಪಾಯನಂಗೆಯ್ಯೆ, ಮಧು ಸಚಿವಂ ಮೆಯ್ವೆರ್ಚಿ ಬೆಸನಂ ಸಾರ್ದು ಸಂಮುಖದೊಳ್ ಸಂಭ್ರಮಿಸಿ ನಿಲೆ, ಮಾಕಂದಾದಿಸುಭಟರ್ ನಿಜಾಸ್ತ್ರಂಗಳಂ ಪಿಡಿದು ಬೞಿಸಂದು ಬಳಸಿ ನಿಂದೋಲಗಿಸಿರೆ, ಸುರಯಿಯರಲ ಪರಾಗಪುಂಜದ ಪೊಂಜಗಲಿಯೊಳ್ ಪಸರಿಸಿದ ಕುಸುಮವಿಸರದೆಸಳ ಪೊಸಪಸೆಯೊಳೊಸಗೆ ಮಿಗೆ ರತಿಯುವತಿವೆರಸು ಗಾಡಿಯಿಂ ಕುಳ್ಳಿರ್ದ ಮದನಮಹೀರಮಣನ ನಯನೋತ್ಸವಕ್ಕೆ ಕಟ್ಟಿದಿರೊಳ್ ಸರಿಯೂಡಿನ ಬಿಱುಸುಗಟ್ಟಿ ರಚಿಸಿದ ಕುರುಜೆಂಬಂತಿರಲಲರ್ವುಡಿಯಂ ಸೂಸುವ ಕನಕರುಚಿನಿಚಿತಸುಮನೋಗಣದಿನಲಂಕೃತಿವೆತ್ತು ಸೊಂಪುಗೞಿವ ಚಂಪಕಪ್ರತಾನಮುಂ; ತನ್ನಂ ಪೊತ್ತು ಮನ್ನಣೆಯಿಂ ಮುನ್ನಂ ಪೊರೆಯೇಱಿಸಿ ಪೊರೆದ ಮಣಿಗರ್ಭೆಗಣಿಯರಂ ಬಾಗಿ ಬಳ್ಕಿ ಮಣಿವ ಮಾೞ್ಕೆಯಿಂ ಪಣ್ತು ಬಿಣ್ಗೊನೆಯಿಂದೆಱಗಿ ನಿಂದ ರಾಜಕದಳಿಗಳುಂ; ನಿಜೈಕಫಲದಿಂ ಪಲಂಬರಂ ತಣಿಪಲ್ ಸಮರ್ಥಮಾಗಿ ಬಹುಫಲಂಗಳಿನೊರ್ವನಂ ತಣಿಪು[೭]ವನ್ಯವನ್ಯ[೭] ತರುಗಳುಂ; ನಿಜಸುರಭಿಗೆಱಗುವ ಪಱಿಮೆವಱಿದುಱುಗಲವಱಿ ರವವ್ಯಾಜದಿಂ ನಕ್ಕಪುದೆನಿಸಿ, ಸುಜನನಂತೆ ಬಹುಕಂಟಕಂಬಡೆ[೮]ದಿರ್ದುಮನ್ಯರ್ಗೆ[೮] ಹಿತಮಂ ಸಾರ್ಚಲೆಳಸುವ ಫಲಂಗಳಿಂ ತಳ್ತು ಬಕ್ಕೆವಲಸುಗಳುಂ; ನಂದನದೊಳಂ ದಂಬಡೆದು ನಲಿದಾಡುವ ಕಲಾಪಿಗಳ ಕೆಳೆತನಕ್ಕೆಟ್ಟಂದು ನಿಂದ ಕಾರ್ಮುಗಿಲಂತೆ ಪೆರ್ಮೆವಡೆದ ತರುಣತಮಾಲತರುಗಳುಂ; ವನವನಧಿಯ ಬಡಬಶಿಖಾವಹನೆನೆ ಮನೋಜ್ಞಮಾಗಿ ಪೂತೊಱಗುವ ಕಿಂಶುಕಸಮುದಯಮುಂ; ತಂ[೯]ಬೆಲರೆಂಬ ಪೊಂಬರದನಲರ್ವೊನ್ನಂ ಪರ್ಣಕಷೋಪಲದೊಳೊರೆಯೆ ಸುರಿದು ಪರಿದ ಪೊಂಬುಡಿಯೆಂಬಂತಿಂಬುವೆತ್ತು ರಜನೀರಜಃಪಿಂಜರರಜೋಗುಣದಿಂ ಸುರುಚಿರಮಾದ ಸುರ

೧ ಚೆಲ್ವ (ಚ) ೨ ಗುಚ್ಛಂಗಳಿಂ (ಯ) ೩–೩ ಬನಮಂ ಪೊಕ್ಕು (ಚ) ೪ ಬೀಜಂ (ಗ, ತ, ಪ) ೫–೫ ಕಹಳೀಕಳ (ಯ) ೬ ವಹಂ (ಕ, ಚ, ತ) ೭–೭ ವನ್ಯ (ಯ, ರ) ೮–೮ ದಿರ್ದ ಮನುಜರ್ಗೆ (ಕ) ೯ ತೆಂ (ಯ)

ಯಿಯುಂ; ಪೊಂದಳಿಗೆದೋರಣಮನೋರಣದಿಂ ಕಟ್ಟಿದಂತಲರ್ದ ಕುಸುಮಂಗಳಿಂ ಕಣ್ಗೊಳಿಪ ಕರ್ಣಿಕಾರಂಗಳುಂ; ಕುಮುದಾಮೋದದೊಳ್ ಪೊರೆದ[೧] ಹಿಮಕರ ಸುಧಾಕಿರಣದ ತಿರುಳಂತೆ ರಮಣೀಯಮಾದ ಪರಿಮಳದ ಪಗಿನಮಂ ಕಂದರ್ಪ [೨]ಸಹಚರಂ ಪರಿಸುವ[೨] ಕರ್ಪೂರಕದಳಿಗಳುಂ; ಗಿಳಿ ಕರ್ದುಂಕೆ ಸುರಿವ ಪರಿಪಕ್ವಫಲ ರಸದಿಂ ನೆಲನೆಲ್ಲಮಂ ಪರ್ಬಿ ಪಸರಿಸಿ ಪದಂಗೊಳಿಪ ಸರಸತರದ್ರಾಕ್ಷಾಲತೆಗಳುಂ; ಭ್ರಮರನಿವಹದ ಪುರಾಕೃತಪುಣ್ಯದುರುಳಿಗಳಂತೆಸೆವ ಬಿರಿಮುಗಳ್ಗಳಿಂ ಸಲ್ಲಲಿತ ಮಾದ ಮಲ್ಲಿಗೆಗಳುಂ; ಮಧುರಸಾಸಕ್ತಮಧುಕರವ್ರಜಮಧುರರವವ್ಯಾಜದಿಂ ಮಧುವಂ ಕಱಿ[೩]ದು ಬನಸಿರಿಯೊಳ್ ನೆರೆಪಿ ಮಧುಪೂತಿನಾಮಮಂ ಸಾರ್ಥಕಂ ಮಾಳ್ಪ ಮಾಧವಿಯುಂ; ಬನಗಟ್ಟಲೆಯ ಬಂದಿಗೊಳಗಾದ ಕಮಲಾಕರಹಿಮಕರ ನನಾರಯ್ಯಲಿೞಿತಂದ ತಾರೆಗಳಂ ಪೋಲ್ವ ಪೂಗಳಿಂ ತಳ್ತ ಯೂಥಿಕೆಗಳುಂ; ಬಿರಯಿ ಗಳುರಮಂ ನಟ್ಟುಚಿ ರುಧಿರಂಬೊರೆದ ಮದನಶರವಿಸರದಂತೆಸೆವ ನವಕುಸುಮ ಸಂದೋಹದಿಂ ಬಂಧುರಮಾದ ಬಂದುಗೆಯುಂ; ಭೃಂಗಭುಜಂಗನಪ್ಪಿ ಚುಂಬಿಸೆ ತೊಟ್ಟನೆ ತೊರೆದ ಬಾಯ್ದೆರೆಯಂತೆ ಬಗೆಗೊಳ್ವ ಮಧುರಮರಂದಮಂ ತುಳ್ಕುವಲ ರ್ಗಳಿಂ ಲಲಿತಮಾದ ಮಾಲತಿಯುಂ; ಹರವಿರೋಧಿಯೆಂದೆನ್ನಂ ಬನಸಿರಿ ಬಹಿಷ್ಕ ರಿಸಿ ಮುಗುೞ್ದಿನ್ನನ್ನನಪ್ಪ ಕಂತುವನೆಂತೊಳಕೊಂಡಳೆಂದು ಕನಲ್ದು ಪಲ್ಮೊರೆವಂತೆ ನಿಜಸುಮನಃಪರಿಮಳಮಿಳದ್ಭ್ರಮರಕುಳಕಳಕಳದಿಂ ಕಲಿತಮಾದ ಕೇತಕಿಯುಂ; ಪಿಂಗದೆ ಕಣ್ಗೊಳಿಸಿ ಪೆಂಪನಾಳ್ದ ತಣ್ಪಿನ ತವರ್ಮನೆಯುಂ, ಕಂಪಿನ ಕಾರಾ ಗಾರಮುಂ, ಭ್ರಮರಗಣಪ್ರಪಾಮಂಟಪಮುಂ, ಮದನನ ಜೇವಣಶಾಲೆಯುಂ, ಮದಕಳಾಪಿಗಳ ಲಾಸ್ಯರಂಗಸ್ಥಳಮುಂ, ಕೆಂಗಣ್ವಕ್ಕಿಗಳ ಸಂಗೀತಸದನಮುಂ, ಮಲಯಾನಿಲನ ವಿಹಾರವೀಥಿಯುಂ, ಶುಕದ್ವಿಜಂಗಳಧ್ಯಯನಸದ್ಮಮುಂ, ಚೈತ್ರ ರಾಜನ ರಾಜಧಾನಿಯುಂ, ಮದನಮಹೀಪತಿಯ ಮಹಾಶಿಬಿರಮುಂ, ವನಲಕ್ಷ್ಮಿಯ ವಿನೋದಮಂದಿರಮುಮೆನಿಸಿ, ಸುಮನೋಜನಮನೋಜ್ಞತರಮೆನಿಸಿ ಗಿರಿಕಟಕ ನಂದನಂ ಮುದಂಬೆತ್ತು ಕಣ್ಗೊಳಿಸಿರ್ದುದಂತುಮಲ್ಲದೆಯುಂ;

ಚಂಪಕ.

ಅಳಿಕುಲಮಿಂದ್ರನೀಲಮಣಿ ಪಚ್ಚೆ ಪಸಿರ್ಮಿಡಿ ತಳ್ತ ಮಲ್ಲಿಕಾ
ಸುಳಲಿತಕುಟ್ಮಳಾಳಿ ಪೊಸಮುತ್ತು ಕೊನರ್ ಪವಳಂ ಪೊದಟ್ದು ಸಂ
ಗಳಿ[೩]ಸಿರೆ ತನ್ನೊಳೊಪ್ಪಿದುದು ಮಾಮರಮಲ್ಲಿ ಮನೋಜ್ಞರತ್ನಸಂ
ಕುಳಮನೆ ಕಾತ[೪] ಕಲ್ಪಕುಜದಂತೆ ಮರುದ್ಗತನಂದನಸ್ಥಿತಂ

ಮತ್ತಂ,

೧ ಬೆರೆದ (ಕ) ೨-೨ ಸಹಚರಂಗೆ ಪರಪುವ (ಯ) ೩ ಗೊಳಿ (ಜ, ತ) ೪ ಕಾತು (ಚ)

ಚಂಪಕ.

ತಳಿರೆಳವಾದಳಂ ಪುದಿದ ಪೂಗುಡಿ ಜಲ್ಲಿ ಮಡಲ್ತ ಮಲ್ಲಿಯು
ಜ್ವಳಮುಕುಳಾಳಿ ಮುತ್ತು ಪವಳಂ ಕೊನರಾಗೆ ವನಾಬ್ಧಿಯಲ್ಲಿ ಕಣ್
ಗೊಳಿಪ ಪಡಂಗು ಮಾಮರಮದಾಗಿರೆ ಕೋಗಿಲೆ ನಟ್ಟಿಗೊಂಬಿನೊಳ್
ತಳೆದುದು ಕೂವಕಂಬದುದಿವತ್ತಿದ ನಾವಿಕನೊಂದು ಲೀಲೆಯಂ ೪೪

ಕಳಕಂಠಂಗಳ ಬಗ್ಗಣೆ
ಗಿಳಿಗಳ ಚಪ್ಪರಣೆಯಳಿಗಳಿಂಚರಮೆಸೆಗುಂ
ತಳಿರ್ಗಳ್ ತನಿವಣ್ಗಳ್ ಸುಮ
ಕುಳಂಗಳಿಡುಕಿಱಿದ ಚೂತಶಾಖಾಂತರದೊಳ್ ೪೫

ಉತ್ಪಲ.

ಕಾಮನ ಸಾಮಜಂ ಮಧುಮಹೀಶನ ಕೋಪಗೃಹಂ ಮಧುವ್ರತ
ಸ್ತೋಮದ ಪಾನಭೂಮಿ ಮಲಯಾನಿಲನಾಡುವ ಮಾಡುವೆಟ್ಟು ಮ
ಲ್ಲೀಮೃದುಲಾಸ್ಯಶಾಲೆ ಶುಕವೃಂದದ ಜೇವಣದಾಗರಂ ಬೞಿ
ಕ್ಕೀ ಮರಮಲ್ತೆ ಮಾಮರಮೆನುತ್ತಜನಿಟ್ಟನೊಱಲ್ದು ನಾಮಮಂ ೪೬

ಚಂಪಕ.

ಗಿಳಿಗಳ ಸಾಲ್ ಸುರೇಂದ್ರಧನು ಚೆಂದಳಿರೊಂದಿದ ಮಿಂಚು ಕೋಕಿಲಾ
ವಳಿಯ ರವಂ ಘನಧ್ವನಿಗಳುನ್ಮ[1]ಕರಂದಮೆ ವೃಷ್ಟಿಯಂತೆ ಕಣ್
ಗೊಳಿಸೆ ನಿಲುಂಬಿ ತುಂಬಿ ಕವಿವಾಮ್ರಮನಭ್ರಮೆಗೆತ್ತು ಕೇಕಿಮಂ
ಡಳಿ ಬೞಿಸಾರ್ದು ನರ್ತಿಸುಗುಮಿಕ್ಷಿಸಿ ಮರ್ಚುವಿನಂ ಮನೋಭವಂ ೪೭

ತಳಿರ್ಗಳೆ ದಳ್ಳುರಿ[2]ಯುಲರಿಂ
ಬೆಳ[2]ದಲರ್ವುಡಿ ದೂವೆ[3] ಮಂತ್ರಘೋಷಂ ಪಿಕಸಂ
ಕುಳರವಮೆನೆ ಚೂತಂ ಕಣ್
ಗೊಳಿಪುದು ಹೋಮಾಗ್ನಿಯಂತೆ ಕಾಮಾಧ್ವರಿಯಾ ೪೮

ಮತ್ತೇಭ.

ತನಿವಣ್ಣಂ ಮನವಾರೆ ನೋಡಿ ಬೞಿವಂದೊಲ್ದಪ್ಪಿ ಪಕ್ಕಂಗಳಿಂ
ದನಿದೋಱುತ್ತೊಲವೆತ್ತು ಚಂಚುಪುಟದಿಂದಂ ಮೆಲ್ಪಿನಿಂ ಸೀಳ್ದು ಸೀ
ಯೆನೆ ಸೋರ್ವಾ[4] ರಸಧಾರೆಯಂ ಸವಿದು ಚೀತ್ಕಾರಸ್ವರಂ ಪೊಣ್ಮೆ ತ
ನ್ನಿನಿಯಳ್ಗಂ ಕರೆದಿತ್ತಮಂ ತಣಿಪುಗುಂ ಕೀರಾಳಿ ಮಾಕಂದದೊಳ್ ೪೯

೧ ಳುಮ್ಮ (ರ) ೨-೨ ಯೆಲರಿಂ । ಕಳಿ (ಯ) ೩ ದೂನೆ (ಕ, ಜ, ತ); ಧೂಮ (ರ)
೪ ಸಾರ್ವಾ (ಚ)

ಚಂಪಕ.

ಸುೞಿದುದು ಬಾೞಿನುಣ್ಪೊಡೆಯನಪ್ಪುತೆ ಕಂಪನಮಂ ನಿಮಿರ್ಚಿ ಸಾ
[೧]ರ್ದೆಳವಿ ಸು[೧]ಗುಚ್ಛಮೆಂಬ ಮೊಲೆಯಂ ಮಧುಘರ್ಮಕಣಾಳಿಯಂ ಪದಂ
ಗೊಳಿಸಿ ಲತಾಂಗಮಂ ಪದೆದು ಸೋಂಕಿ ನವಾಂಕುರರೋಮಹರ್ಷಮಂ
ಬಳೆಯಿಸಿ ತದ್ವನಸ್ಥಳಿಗೆ ಕಾಮುಕನಂತಿರೆ ಮಂದಮಾರುತಂ ೫೦

ನೆಗೆದೊಗೆದೇೞ್ವ ಬಾಳೆ ಸೆಳೆಮಿಂಚು ಸರೋಜರಜಃಪಿಶಂಗಮ
ಧ್ಯಗತತರಂಗಮಬ್ಜದಳಸಂಗತಮಿಂದ್ರಶರಾಸನಂ ಪಯಃ
ಖಗರುತಿಘೋಷಮಾಗೆ ಗಿರಿಶೃಂಗತಟಾಹತಮಲ್ಲಿ ಬಿೞ್ದುದೋ
ಮುಗಿಲೆನೆ ದಂತಿದಾನರಸಮೇಚಕಿತಾಂಬುಸರಂ[೨] ವಿರಾಜಿಕುಂ ೫೧

ಸ್ಫುರಿತಶಿಳೀಮುಖಮುತ್ಪಳ
ಸರಕ್ತಕಂಜಾತಯುತಮುಪಾತ್ತಕಬಂಧಂ
ಶರಭಂಗಾನ್ವಿತಮಿರದನು
ಕರಿಸಿದುದಾ ಬನದ ತಿಳಿಗೊಳಂ ಕೊಳುಗುಳಮಂ ೫೨

ಚಂಪಕ.

ಮಿಸುನಿಯ ಕಾಸೆವೊಲ್ ಮಿಸುಗೆ ಕಂಜರಜಂ ಪೊಳೆದೊಪ್ಪೆ ಬಾಳೆಗಣ್
ಬಿಸಜಮುಖಂ ಮರುಚ್ಚಳಿತಮೊಂದೆ ತರಂಗಭುಜಾಬ್ಜಪಾಣಿ ರಂ
ಜಿಸೆ ಚಲಮು[೩]ಬ್ಜಕೋಶಕುಚಮಲ್ಲಿ ಕದಕ್ಕದಿಸುತ್ತೆ ತೋಱಿ ಕ
ಣ್ಗೆ ಸರಸಿ ನರ್ತಿಪಂತೆಸೆದುದುದ್ಭ್ರಮರಧ್ವನಿಕಿಂಕಿಣೀರುತಂ ೫೩

ಸ್ಮರಶಸ್ತ್ರಸದನಮಿಂದಿರೆ
ಯರಮನೆಯಳಿಗಣದ ಶಾಶ್ವತಪ್ರಪೆ ಕೋಕೋ
ತ್ಕರದ ಸುರತಾಲಯಂ ಭಾ
ಸುರಮಂದಾನಿಲನ ಕೋಶಮಾ ಕಾಸಾರಂ ೫೪

ಮತ್ತೇಭ.

ನಳಿನಂ ಶುಕ್ತಿಕೆ ತಳ್ತ ನೀರ್ವನಿಗಳೇ ನುಣ್ಮುತ್ತು ನೀರುಣ್ಬ ನಿ
ಶ್ಚಳಮಾತಂಗಮೆ ತೀರನೀರದಮಹೀಂದ್ರಂ ನೀಳ್ದ ಫೇನಾಳಿ ಮಾ
ರ್ಪೊಳೆವರ್ಕಂ ಬಡಬಾಗ್ನಿ ಪೊಕ್ಕ ಕುಧರಂ ತದ್ಭೂಧರಚ್ಛಾಯೆ ಕಣ್
ಗೊಳಿಪನ್ನಂ ಕಮಳಾಕರಂ ತಳೆದುದಾ ರತ್ನಾಕರಾಕಾರಮಂ ೫೫

೧-೧ ರ್ದೆಳವಿಸಿ (ಯು, ರ)
೨ ರಸಂ (ಯು, ರ)
೩ ಚಲದ (ಯು, ರ)

ಸರ[1]ದೊಳ್ ಮುೞುಂಗಿ ನೆಗೆಪಿದ
ಕರಿಕುಂಭಂ ಫೇನಪಿಹಿತಮಿಂಬಾದುದು ತೆ
ೞ್ದೆರೆಮೇಲುದಱಿಂ ಪೊಣ್ಮಿದ
ಸರಸಿಯ ಮಲಯಜವಿಲಿಪ್ತಕುಚಕುಂಭದವೋಲ್ ೫೬

ಅಮರ್ದ[2] ನೆಲೆವೊಲಿಗೆಗಳಿಂ[3]ಬವೊ
ಲಮು[3]ಳ್ವಕ್ಕಿಗಳಿರೆ ತದಗ್ರಕಲ್ಲೋಲಸಮಾ
ಕ್ರಮಿತಾಬ್ಜಪತ್ರಮಾಳ್ಪುದು
ಕಮಳಿನಿ ತೊಟ್ಟಿರ್ದ ಹರಿತಕಂಚುಕದಿರವಂ ೫೭

ಚಂಪಕ.

ಸರದೊಳೆ ಮಿಂದು ನೀರಜರಜಂಗಳನಂಗದೊಳೊಟ್ಟಿಕೊಂಡು ಗಾ
ವರಿಪ ಮದಾಳಿಗಾಯಕರ ಗಾನಮನಾಲಿಸಿ ದಾನಮಿತ್ತು ಕಂ
ಧರದೆ ಮೃಣಾಲಹಾರಮನೆ ತಾಳ್ದಿಳಮುತ್ತನೆ ಸೂಸುವಂತೆ ಫೂತ್
ಕರಿಸಿ ಕಣೌಘಮಂ ಕೆದರ್ದುದಲ್ಲಿ ಗಜೇಂದ್ರಮಮುಂದವಿಭ್ರಮಂ ೫೮

ಸಿರಿಯುರಮನೆಯಂ ಮುಱಿದಾ
ಕರಿಯಂ ಮುಳಿದಿಟ್ಟ ಹರಿಯ ಪಾಱುಂಬಳೆಯಿಂ
ಬಿರವಂ ತಳೆದಳಿಮಾಲಿಕೆ
ತಿರುಗುತ್ತಿಟ್ಟಿಂದು ಕಟದೊಳೇನೆಱಗಿದುದೋ ೫೯

ಚಂಪಕ.

ಪುಳಿನನಿತಂಬಮಂ ಪಡೆದು ಸೊಂಕಿ ತೆರಳ್ಚಿ ತರಂಗನೀವಿಯಂ
ವಿಳಸಿತಚಕ್ರವಾಕಕುಚಯುಗ್ಮಮನಪ್ಪಿ ಮದಾಳಿಮಾಲೆಯಿಂ
ಬಳಕಮನೊತ್ತಿ ನೇರ್ಪಡಿಸಿ ತತ್ಸರಸೀರಮೆಯಂಬುಜಾಸ್ಯಮಂ
ಡಳಮನೊಱಲ್ದು ಚುಂಬಿಸಿ ಭುಜಂಗನವೋಲ್ ಸುೞಿಗುಂ ಸಮೀರಣಂ ೬೦

ಉತ್ಪಲ.

ಸೋಗೆದುಱುಂಬು ರಂಜಿಸೆ ಲತಾಂಗಮೆ ಸೊಂಪಡರ್ದೊಪ್ಪೆ ಮಾಣದಿಂ
ಬಾಗಿರೆ ಬಾೞೆನುಣ್ದೊಡೆ ಮನಂಬುಗೆ ಗುಚ್ಛಪಯೋಧರಂ ಬೆಡಂ
ಗಾಗಿ ವಿರಾಜಿಸಿರ್ಪ ವನಲಕ್ಷ್ಮಿಗೆ ಭೂರಮೆ ತೋರ್ಪ ದರ್ಪಣಂ
ಪೂಗೊಳನಪ್ಪುದಲ್ಲಮೊಡೆ ತತ್ಪ್ರತಿಬಿಂಬಮದಲ್ಲಿ ತೋರ್ಕುಮೋ ೬೧

೧ ಶರ (ಕ, ತ, ರ)
೨ ಅಮರ್ದು (ರ)
೩-೩ ಬಿನ । ಮುಮು (ಉ)

ಗುರುಕುಜಸುಮನಃಸುರಭಿ
ಸ್ಫುರಿತಂ ಪ್ರಮದಾಳಿಮಂಜುಘೋಷಾನ್ವಿತಮು
ಚ್ಚರಿಪೆರಸಿದ ಗಿರಿವನಮುದು
ಸುರವನಮೆನೆ ಗಂಧವಾಹಪುನ್ನಾಗಯುತಂ ೬೨

ಚಂಪಕ.

ಸರಸಸರೋಜಕೈರವವಿರಾಜಿ ಸರೋವರದಿಂ ಮಹಾಫಲೋ
ತ್ಕರಪರಿನಮ್ರಭೂಜತತಿಯಿಂ ಪ್ರಮದಾಳಿಸಮುಲ್ಲಸಲ್ಲತಾಂ
ತರುಚಿರಕುಂಜಪುಂಜದಿನಲಂಕೃತಿವೆತ್ತು ಪವಿತ್ರಸತ್ರಬಂ
ಧುರತರಮೊಪ್ಪುಗುಂ ಸುರಭಿಮಂದಮರುತ್ಪ್ರಯುತಂ ತಪೋವನಂ ೬೩

ಉತ್ಪಲ.

ಪೂಗಿಡಗಳ್ಗೆ ನೀರೆಱೆವ ಪುಷ್ಪಕದಂಬಮನೆಯ್ದೆ ಕೋದು[೧] ಚೆ
ಲ್ವಾಗಿರೆ ದಂಡೆಗಟ್ಟುವ ಶಿವಾರ್ಚನೆಗರ್ಘ್ಯಜಲಂಗಳೀವ ನೀ
ಡಾಗದೆ ಸಾಧನಂಗುಡುವ ಗಟ್ಟಿಮಗುಳ್ಚುವ ದೀಪವರ್ತಿಯಂ
ಸಾಗಿಪ ತಾಪಸೇಂದ್ರರ ಕುಮಾರಿಯರೊಪ್ಪುಗುಮಲ್ಲಿ ಸಂತತಂ ೬೪

ಮಹಾಸ್ರಗ್ಧರೆ

ಪಸಿದೆಯ್ತಂದುಣ್ಬುದಾ ಪೆಣ್ಬುಲಿ[೨]ಯ ಮೊಲೆಯನಲ್ಲಿರ್ದ ಸಾರಂಗಶಾಬಂ
ದ್ವಿಶಿರಂ ತಾಯ್ದಪ್ಪಿ ಪಾಯ್ದೆಂಟಡಿಗೆ ಕುಟುಕನೊಲ್ದೂಡುಗುಂ ದಂತಿಪೋತ
ಪ್ರಸರಕ್ಕಂಗಾಲ್ಗಳೊಳ್ ಮುಳ್ ಮುಱಿದೊಡುಗುರ್ಗಳಿಂ ತೀರ್ಚುಗುಂ ಸಿಂಹಮಾದು
ಬ್ಬಸಮಂ ಸರ್ಪಾರ್ಭಕಕ್ಕಾತಪದೆ ತೊಲಗಿಕುಂ ಬರ್ಹದಿಂ ಬರ್ಹಿಬೃಂದಂ ೬೫

ರವಿ ಬಿಸುಗದಿರಂ ಕಱಿಯುಂ
ದವಾಗ್ನಿ ಸವಿಧಸ್ಥಳಂಗಳೊಳ್ ಮೆಯ್ದೋಱಂ
ಪವನಂ ಬಿಱುಬಿಂ ಬೀಸಂ
ಜವನವರೆಡೆಯಾಡಲಣ್ಮರಾ ಮುನಿವನದೊಳ್ ೬೬

ದೇವೇಶ ನಿಮ್ಮ ಪದರಾ
ಜೀವದ ಭಾವನೆಯ ಪೆರ್ಮೆಯಿಂತುಟೊ ಮುನಿಪರ್
ತೀವಿರ್ದ ಬನದ ಪರಿಸರ
ದೋವರಿಯೊಳ್ ಮಿಟ್ತು ಸುಱಿಯಲ[೩]ವುರ್ದವಿಜಸ್ರಂ ೬೭

೧ ಕೊಯ್ದು (ಚ, ಜ)
೨ ಪೆರ್ಬುಲಿ (ಯ) ೩ ಲಳುವುವ (ರ)

ಮತ್ತೇಭ.

ಜಡೆಯಂ ಸುಂಕಿಡುವಕ್ಷಮಾಲೆಗಳನೊಳ್ಪಿಂ ಕೋವ ಯೋಗಾಂಗಮಂ
ಬಿಡದಭ್ಯಾಸಿಪ ಜನ್ನಮಂ ನೆಗಟ್ವ ಭಸ್ಮೋದ್ಧೂಳನಂಗೆಯ್ವ ಸ
ನ್ಮೃಡನಂ ಜಾನಿಪ ನಾರ ಸೀರೆಯನಲಂಪಿಂ ಮಾಟ್ಪ ವೇದಾಂತದಿಂ
ಪಡೆದರ್ಥಂಗಳನಾಲಿಪುಜ್ಜುಗದೊಳಿರ್ಕುಂ ತಾಪಸಶ್ರೋತ್ರಿಯರಂ ೬೮

ಒಡಲಂ ಪುತ್ತಡರ್ದೆತ್ತಲುಂ ಮುಸುಕೆ ಪಾವೆಟ್ಟಾಡೆ ತನ್ಮಸ್ತಕಂ
ಬಿಡದುದ್ಯನ್ನಖಪಂಕ್ತಿ ಬೇರ್ವರಿಯೆ ದೀರ್ಘಶ್ಮಶ್ರುವೊಳ್ ಪಕ್ಕಿ ಗೂ
ಡಿಡೆ ಸುತ್ತಂ ಜಡೆವಳ್ಳಿ ಪರ್ಬಿರೆ ಮೃಡಧ್ಯಾನಾಮೃತಾಸ್ವಾದನಂ
ಬಡೆದುದ್ಯತ್ತಪಮಾಂತು ನಿಶ್ಚಳತೆಯಿಂ ಕಣ್ಗೊಪ್ಪಿದರ್ ತಾಪಸರ್ ೬೯

ಸ್ಥಿರಪದ್ಮಾಸನದಿಂದೆ[೧] ಸರ್ವಕರಣವ್ಯಾಪಾರಮಂ ಮಾಣ್ದು ಸಂ
ಚರಣಂಬೆತ್ತು ಸುವೃತ್ತಿಯಂ ತಡೆದುಮಾಜ್ಞಾಚಕ್ರಪಂಕೇಜವಿ
ಷ್ಟರಮಧ್ಯಸ್ಥಿತಮಂಡಲತ್ರಯದಖಂಡಜ್ಯೋತಿಯಂ ಶುದ್ಧಭಾ
ಸುರಚಿಚ್ಚಕ್ಷುವೊಳೀಕ್ಷಿಸುತ್ತೆ ಯಮಿವೃಂದಂ ತಾಳ್ಗುಮಾನಂದಮಂ ೭೦

ಮಹಾಸ್ರಗ್ಧರೆ

ಪದದೊಂದಂಗುಷ್ಠದಗ್ರಂ ನೆಲಸಿ ನೆಲದೊಳೊಂದಂಘ್ರಿಯಂ ಕೊಂಕಿ[೨]ಸುತ್ತೆ
ತ್ತಿ ದುರಾಶಾಪಾಶಮಂ ನೀಟ್ಕರಿಸಿ ನಿಜಭುಜದ್ವಂದ್ವಮಂ ನೀಡಿ ಮೇಗ
ಣ್ಗೆದಿರೊಳ್ ಸೂರ್ಯಂಗೆ ನಿಂದುಚ್ಚರಿಸುತಭವಸನ್ಮಂತ್ರಮಂ ಜಾನಿಸುತ್ತ
ಗ್ಗದ ಭಾಸ್ವದ್ಭರ್ಗಪಾದಾಂಬುಜಮನಚಲಯೋಗಾನ್ವಿತರ್ ಕಣ್ಗೆವಂದರ್ ೭೧

ಮತ್ತೇಭ.

ಚಮರೀರಾಜಿ ರಜಂಗಳಂ ಕಳೆಗುಮುದ್ಯದ್ದಂತಿ ನೀರಿಟ್ಟು ಸಂ
ಭ್ರಮದಿಂ ಸಾರಣೆಗೆಯ್ವುದಲ್ಲಿ ಪವನಂ ಪೂದೂಳಿಯಿಂ ರಂಗಮಂ
ಕ್ರಮದಿಂ ಮಾಟ್ಪುದು ಕೇಕಿ ಬರ್ಹದೆಲರಿಂ ಹೋಮಾಗ್ನಿಯಂ ವರ್ಧಿಕುಂ[೩]
ಸುಮನಃಸ್ತೋಮಲಸತ್ಫಲಪ್ರಸರಮಂ ಶಾಖಾಚರಂ ಸಾರ್ಚುಗುಂ ೭೨

ಮತ್ತಂ,

ಮತ್ತೇಭ.

ಪುಲಿ ಕೃಷ್ಣಾಜಿನಮಂ ಸೆಲಂದಿ ಪೊಸನೂಲಿಂ ನೆಯ್ದು[೪] ಪೊಂಬಟ್ಟೆಯಂ
ವಿಲಸದ್ಭೂರುಹರಾಜಿ ವಲ್ಕಲಮನೀಗುಂ ತಾಪಸರ್ಗಲ್ಲಿ ಕಂ
ದಲಸನ್ಮೂಲಮನೊಟ್ಟುಗುಂ ಮೃಗಕುಲಂ ಶೃಂಗಂಗಳಿಂ ಮಿಾಂಟಿ ತಂ
ದೆಲರೊಳ್ಗಂಪನಮರ್ಚುಗುಂ ಕರಡಿ ತಾಂ ತರ್ಕುಂ ಸಮಿದ್ವೃಂದಮಂ ೭೩

೧ ರಾಗಿ (ಯ) ೨ ಸೊಂಕಿ (ಜ) ೩ ಹೊದ್ದಿಕುಂ (ಚ) ೪ ನೆಯ್ದು (ವ)

ಚಂಪಕ.

ಫಣಮಣಿದೀಪಮಂ ಬೆಳಗಿ ದೀಪದ ಕಂಬದ ಮಾಟ್ಕೆಯಿಂ ಲಸತ್
ಫಣಿತತಿ ಸಾರ್ದು ನಿಲ್ವುಮಿರುಳಪ್ಪುದುಮೊಲ್ದು ಟಜಂಗಳಲ್ಲಿ ಮ
ನ್ನಣೆವಡೆದೋದುಗುಂ ಗಿಳಿ ಪುರಾಣಮನಲ್ಲಿಯ ದಿವ್ಯಧೇನುಗಳ್
ಪ್ರಣಯದೆ ತನ್ಮಖಾಹುತಿಗೆ ಬೇಳ್ಪ ಸುಧಾರಸಮಿಾವುವಾಗಳುಂ ೭೪

ಬಡವಾಮೊಡಲತಿವೃದ್ಧರ
ಗಡಣಕೆ ಬೆನ್ನಿತ್ತು ಪೊತ್ತು ಕೇಸರಿಗಳ್ ಸಂ
ಗಡಮೆಯ್ದುಗುಮಾ ನದಿಯಿ
ರ್ಪೆಡೆಯತ್ತಲ್ ಕೊಂಡು ಪೋಪುವಂಚೆಗಳವರಂ ೭೫

ಮಹಾಸ್ರಗ್ಧರೆ

ಶುಕ ಮಾರ್ಕಂಡೇಯ ಬೋಧಾಯನ ಕಪಿಲ ಕಣಾದಾಕ್ಷಪಾದಾತ್ರಿ ಮೈತ್ರೇ
ಯಕ ಕಣ್ವಾಗಸ್ತ್ಯಪಾರಾಶರ ಭೃಗು [1]ವಿಮುದರ್ ಸೂತ[1] ವಾಲ್ಮೀಕಿಗಳ್ ಶೌ
ನಕ ವಿಶ್ವಾಮಿತ್ರ ಧೌಮ್ಯ ಚ್ಯವನ ದಮನ ಶಾತಾತಪರ್ ಪೂರ್ಣಭದ್ರಾ
ದ್ಯಕರಿರ್ದರ್ ತತ್ತಪೋನಂದನದೊಳಘಹರಧ್ಯಾನಸಾಂದ್ರರ್ ಮುನೀಂದ್ರರ್ ೭೬

ಚಂಪಕ.

ತೊಳಪ ಕಿರೀಟಮುಜ್ವಳಮ್ಬದುಸ್ಮಿತವಕ್ತ್ರಮನೂನಕಾಂತಿ ಸಂ
ಗಳಿಸಿದ ಕಾಯಮಾಂತ ಶರಚಾಪಮುದಾಯುಧಮಾಳ್ದ ಬೆನ್ನ ಬ
ತ್ತಳಿಕೆ ನವೀನ[2]ಭೂಷಣಚಯಂ[2] ಮೆಱೆಯುತ್ತಿರೆ ಬಂದನಲ್ಲಿಗ
ಚ್ಚಳಿಯದ ಜವ್ವನಂ ಮಿಸುಪ ಸೌಂದರ[3]ನೊರ್ವನಪೂರ್ವವಿಭ್ರಮಂ ೭೭

ವಚನ

ಅಂತೆಲ್ಟಿಂದು ಗಿರಿಕಂದರದ ತತ್ತಪೋವನಮನವಂ ಪೊಕ್ಕು,

ಮಹಾಸ್ರಗ್ಧರೆ

ತತವಿಧ್ಯುಕ್ತಪ್ರಕಾರಂ ಮಿಗೆ ಸದಮಳತೀರ್ಥಾಂಬುವಿಂ[4] ಮಿಂದು ಶೈವ
ವ್ರತಮಂ ಕೈಕೊಂಡು ತಾಳ್ದಂ[5] ಸುಸಿತಭಸಿತರುದ್ರಾಕ್ಷಮಾಲಾಳಿಯಂ ವಿ
ಶ್ರುತತತ್ತನ್ಮಂತ್ರದಿಂ ಮಂಗಳಮಯತನು ತಾನಾದನತ್ಯಂತಶಾಂತಿ
ಸ್ಥಿತಿಗಿತ್ತಂ[6] ಚಿತ್ತಮಂ ತನ್ಮನಿ ಶಿವಪದಸದ್ಭಕ್ತಿಸಂಪತ್ಪ್ರಯುಕ್ತಂ ೭೮

ವಚನ

ಆಗಳಿಂತೆಸೆದಲ್ಲಿ ಪೆಸರ್ವೆತ್ತು[7] ಮಿಸುಪ ಸರಸಸರೋವರದ ಪರಿಸರದ ಶುಕನಿಕರ
ಮುಖವಿದಾರಿತಸಾರ[8]ಸಹಕಾರ ಖರ್ಜೂರ ಕದಳೀ ಜಂಬೂ ದ್ರಾಕ್ಷಾದಿ ಪರಿಪಕ್ವ

೧-೧ ಸನಕಾತ್ರೇಯರು (ಯ) ೨-೨ ತಾಪಸಗುಣಂ (ರ) ೩ ಸುಂದರ (ಯ, ರ) ೪ ತೀರ್ಥಾಂ
ಬುವಂ (ಯ) ೫ ತಾಳ್ದಂ (ಕ, ಯ) ೬ ಗಿತ್ತುಂ (ತ, ಗ) ೭ ಪೆರ್ಮೆವೆತ್ತು (ಯ) ೮ ಸರಸ (ಚ)

ಫಳಕುಳಕ್ಷರಿತಮಧುರತರರಸವಿಸರಪ್ರವಾಹದ ಪರಿಕಾಲ್ಗಳಿಂ ಬಳಸಿದ ಪರಮ ಕೈವಲ್ಯಕಲ್ಪತರುವೆಂಬಂತೆಸೆದು ನಳನಳಿಕೆವೆತ್ತ ವಿಮಳಕೋಮಳದಳತ್ರಯವಿಳಸಿತಸರಳಶಾಖಾನಿಕಾಯಾ¹ಕಲಿತಬಿಲ್ವವೃಕ್ಷದ ಕೆಳಗೆ ನಿಲ್ವುದುಂ, ತಪಸ್ಸಮುಚಿತಸ್ಥಳಮಿದಪ್ಪುದಿಲ್ಲಿಯೇ ನಿಲ್ಲೆಂಬ ಗಗನಗಂಭೀರವಾಣಿಯಂ ಕೇಳ್ದು ಮಹೋತ್ಸವಂದಾಳ್ದು ತದ್ವೃಕ್ಷಮೂಲಮನಾಶ್ರಯಿಸಿ ನಿಂದು,

ಚಂಪಕ.

ಅರೆಮುಗುಳ್ದಕ್ಷಿಗಳ್ ಮಿಡುಕುಗುಂದದ ಚೆಂದುಟಿ ನಿಶ್ಚಳಾಂಗಮು
ರ್ವರೆಯೊಳೆ ತಳ್ತ ಕಾಲ್ವುದಿ ಸಮುದ್ಧೃತ²ಬಾಹುಗೆ ಬದ್ಧ²ಚಾಪಭಾ
ಸುರತರಖಡ್ಗಮಗ್ಗದ ಕಠಾರಿಯಡಾಯುಧಮಾಳ್ದ ಬೆನ್ನ ವಿ
ಸ್ಫುರಿತನಿಷಂಗಮೊಪ್ಪೆ ಪೊಸವೇಷದ ತಾಪಸನೊಪ್ಪಿ ತೋಱಿದಂ ೭೯

ತುದಿಗೊಳಿಸಿದಂಘ್ರಿಯಿಂದೆ
ತ್ತಿದ ಭುಜದಿಂ ನಿಮಿರ್ದ ದೇಹದಿಂ ನಿಳ್ಕದ³ ಚಿತ್
ಪದಮಂ ಮುಟ್ಟುವೆನೆಂಮೋ
ವದೆ ನಿಮಿರ್ದೋರಂತೆ ನಿಂದ ಮಾಟಕ್ಕೆಯೊಳೆಸೆದಂ ೮೦

ವಚನ

ಆಗಳಾ ಪೊಸತಪಸ್ವಿ ತಪಮಿರ್ಪೆಡೆಯಱಿದು ಪುರಂದರಂ ಧರಾಮರಾಕಾರಮಂ ತಾಳ್ದೆಯ್ತಂದು ಕಟ್ಟಿದಿರೊಳ್ ನಿಂದು ನಿರೀಕ್ಷಿಸಿ ಘನಗಂಭೀರಧ್ವನಿಯಿಂದಿಂತೆಂದಂ,

ಮೃಗಮದಕೆ ಕರ್ದಮಕೆ ಸಂ
ಪಗೆಯಲರ್ಗಳ ಸರಕೆ ಸರವಿಗೊಳ್ಮೃತ್ತಿನ ಮಾ
ಲೆಗೆ ಗಾಜುದೊಡಿಗೆಗಾವುದು
ಬಗೆವೊಡೆ ಸಂಪರ್ಕಮಾಂಪ ಭೂಷಣವಿಧಿಯೊಳ್ ೮೧

ಚಂಪಕ.

ಕರಜಪಮಾಲೆಯೆತ್ತ ಪೊಸಕೂರಸಿಯೆತ್ತ ವಿಭೂತಿಲಿಪ್ತವಿ
ಸ್ಫುರಿತಶಿವಾಕ್ಷಮಾಲ್ಯವಪುವೆತ್ತ ನಿಬದ್ಧನಿಷಂಗಚಾಪವ
ಲ್ಲರಿ ಮಿಸುಪಂಗಮೆತ್ತ ಘನಶಾಂತಿ⁴ ಸಮುನ್ನತಿಯೆತ್ತ ನಿನ್ನ ಭೀ
ಕರತರವೇಷಮೆತ್ತ ಪಿರಿದದ್ಭುತಮದ್ಭುತಮೇನನೆಂದಪೆಂ ೮೨

೧ ಕಾಯ (ಚ, ತ)
೨-೨ ಬಾಹುನಿಬದ್ಧ (ಯ)
೩ ನೀಳ್ಕದ (ರ) ೪ ಶಾಂತ (ಚ)

ತಪಮಿರ್ಪ ತಾಪಸರನಾ
ನಪರಿಮಿತರನಱಿವೆನಭವವೇಷಾಂಕಿತರಂ
ವಿಪರೀತವೇಷಧರ ನಿ
ನ್ನುಪಮೆಯ ಕಿತ್ತಡಿಯನೆಲ್ಲಿಯುಂ ಕಂಡಱಿಯೆಂ ೮೩

ವಚನ

ಎಂದು ನುಡಿದಾಖಂಡಲನ ತಪೋವಿಡಂಬನೋಕ್ತಿಯನವನಾಕರ್ಣಿಸಿ, ಕಣ್ದೆಱೆದಭೀಕ್ಷಿಸಿ,

ಪೊಱಮೆಯ್ಯ ವೇಷದಿರವೇ
ತೆಱನಾದೊಡಮೇನೊ ಮಾನಸಾಬ್ಜಾಂತರದೊಳ್
ಕಱೆಗೊರಲನಂಘ್ರಿದಳದ
ಟ್ಕಱಿಗೊಳಾಂ[1] ಜಾನಿಸಿ ಮಹೇಶನಂ ಮೆಚ್ಚಿಸುವೆಂ ೮೪

ವಚನ

ಎನೆ ಮತ್ತಮಿಂದ್ರನಿಂತೆಂದಂ,

ಮತ್ತೇಭ.

ಬಿಡದತ್ಯುಗ್ರತಪಂಗಳಂ ತಳೆದುಮತ್ಯಾಯಾಸದಿಂ ಯೋಗಿಗಳ್
ಮೃಡಸಂದರ್ಶನಮಂ ವಲಂ ಪಡೆಯರೆಂದುಂ ಕಾಣವಾಮ್ನಾಯವಾ
ವೆಡೆಯೊಳ್ ದುರ್ಲಭನೀಶನಂತವನನೆಂತುಂ ಕಾಣ್ಬೆನೆಂದಿರ್ಪೆ ನೀಂ
ಗಡ ನಿನ್ನೀ ಪೃಥುಸಾಹಸಂ ಬಡೆ[2]ದುದೆನ್ನೊಳ್ ಪೆರ್ಚಿದಾಶ್ಚರ್ಯಮಂ ೮೫

ಅತಿಸುಖಿ ನೀಂ ಸುಕುಮಾರಂ
ಪ್ರತಿದಿನಮಾಭೀಳತಪಮನೆಂತೆಸಗುವೆ ಪೇೞ್
ಸಿತಗಳ[3] ಶಿತಿಕಂಠನಲ್ಪ
ವ್ರತಕ್ಕೆ ತನುತರತಪಕ್ಕಮೇನೊಲ್ದಪನೇ ೮೬

ಪೆೞವಂ ಮರದುದಿಯ ಮಹಾ
ಫಳವಂ ಮಿಗೆ ಬಯಸುವಂತೆ ತನಗಸದಳವಂ
ತಿಳಿಯದೆ ಕಜ್ಜವನೆಸಗುವ
ಬಳರಹಿತಂ ಜಗದ ನಗೆಗೆ ಪಕ್ಕಾಗಿರನೇ ೮೭

೧ ಱಿನಾಂ (ರ)
೨ ಪಡೆ (ಯ)
೩ ಕೃತಿಯೆ (ರ)

ಮುನ್ನೆಂದುಂ ತಪವಱಿಯದ
ನಿನ್ನಿರವೆತ್ತ ಭವನೊಲ್ಮೆ ತಾನೆತ್ತ ಪೋದ
ೞ್ದಿನ್ನತಿಕೆಗೆಡದೆ ತಳರೆನೆ
ತನ್ನಗ[1]ರಿಪು ನಗುತೆ ಮತ್ತಮಾ[1]ವನಿಂತೆಂದಂ ೫೮

ಶಾರ್ದೂಲ.

ನೀನೆಂದುಕ್ತಿಯೆ ಸತ್ಯಮಾಗಮಚಯಕ್ಕಂ ತಾಪಸರ್ಗಂ ಭವಾ
ನೀನಾಥಂ ಸಲೆ ದುರ್ಲಭಂ ಪರಿಕಿಪಂದಂತಾದೊಡಂ ಭಕ್ತಿಸಂ
ಧಾನಕ್ಕಾತನಸಾಧ್ಯನಲ್ತು ದಿಟಮುದ್ಯದ್ಭಕ್ತಿಯಿಂ ತತ್ಪದ
ಧ್ಯಾನಂಬೆತ್ತು ದಯಾಬ್ಧಿಯಂ ಘನತಪಂಗೆಯ್ದೊಚ್ಚತಂ ಮೆಚ್ಚಿಪೆಂ ೫೯

ಚಂಪಕ.

ಬೆಸಸಮನೇಱಿನೊತ್ತರಿಸಿ ಷಡ್ರಿಪುವರ್ಗಮನೊತ್ತಿ ಮೆಟ್ಟಿ ಬಾ
ಧಿಸುವ ಹೃಷೀಕಸಂಚಯಮನಳ್ಕಿಸಿ ದುರ್ಮದಮೆಂಟನಿಕ್ಕಿ ಬಂ
ಧಿಸಿ ಪೊಱಸೂಸದಂತುಸಿರನರ್ದಿಸಿ ಕಾಯಗುಣಂಗಳಂ ಮಸಂ
ಮಿಸುಕದ ಮಾೞ್ಕೆಯಿಂ ತಡೆದು ಭಕ್ತಿಯೊಳಾಂ ಪಿಡಿವೆಂ ಮೃಡಾಂಘ್ರಿಯಂ ೬೦

ಸ್ಥಿರಭಕ್ತಿಭಾವದಿಂ ಶಂ
ಕರನಂ ಮೆಚ್ಚಿಸುವೆನೊಚ್ಚತಂ ಮೆಚ್ಚದೊಡೀ
ಹರಣಮನೀವೆಂ ತತ್ಪದ
ಸರಸಿರುಹಕ್ಕೆಂತುಮೆಡೆಯೊಳಾಂ ಬಿಟ್ಟಪೆನೇ ೬೧

ವಚನ

ಎಂದು ಪೂಣ್ದಪಂ ನುಡಿಯಲೊಡನೆ,

ಬೆರಲೆತ್ತಿ ಪೊಗೞ್ದು ಮಗುೞ್ದ
ಚ್ಚರಿವಟ್ಟತಿನಿಷ್ಠೆಗವನ ಸದ್ಭಕ್ತಿಗೆ ಜಂ
ಭರಿಪು ನಿಜರೂಪುಮೋಱುತೆ
ಪರಸಿ ಮುದಂಬೆತ್ತು ಸಗ್ಗಕೆಯ್ದಿದನಿತ್ತಲ್ ೬೨

ಪರಷಟ್ತ್ರಿಂಶತ್ತತ್ತ್ವೋ
ಪರಿಗತನನವಿದ್ಯೆ ಪುಗದ ಶುದ್ಧಾತ್ಮಸನ
ಕ್ಷರನನನುಪಮನನಭವನ
ನುರುತರಚಿದಖಂಡರೂಪನಂ ಜಾನಿಸಿದಂ ೬೩

೧-೧ ರಿಪುವಿಂಗೆ ನಗುತ (ಜ) ೨ ನೆಂಬು (ಚ)

ನೆಗೆದ ಪುಳಕಾಂಕುರದ ನೆಱೆ
ಮುಗುಳ್ದಕ್ಷಿಯ ಮಿಡುಕದಂಗದಿೞ್ದೇಱದೆ ನೆ
ಟ್ಟಗೆ [೧]ನಿಂದ ಸುಯ್ಯ[೧] ಸುೞಿಯುದ[೨]
ಬಗೆಯು ಪೊಡರ್ಪಸೆಯೆ ತಾಪಸಂ ತಪನಿರ್ದಂ ೯೪

ಪೊಱಗಣ ಮಾಯಾಭ್ರಮೆಯಂ
ಪಱಿದಿಕ್ಕಿ ಮನೋಬ್ಜಮಂಡಲತ್ರಯದೆಡೆಯೊಳ್
ಮಿಱುಗುವ ಕರೆಮರೆಯಿಲ್ಲದ
ಕುಱುಪೊಂದದ ಸೂಕ್ಷ್ಮರೂಪನಂ ಜಾನಿಸಿದಂ ೯೫

ಚಂಪಕ.

ದಶವಿಧನಾದಮಂ ಪಡೆದು[೩] ಕೇಳ್ವ ಸಮುಜ್ಜ್ವಳಬಿಂದುತೇಜಮಂ
ಸ್ವಶುಭಚಿದಕ್ಷಿಯಿಂ ಬಿಡದೆ ನೋೞ್ಪ ವಿಕಾಶಿ[೪]ಮನೋಬ್ಜಗಂಧಮಂ
ಕುಶಲದೆ ಕೂರ್ತು ವಾಸಿಪ ಮಹಾಸುಖಸಂಶ್ರಯಮಧ್ಯನಾಡಿಕಾ
ವಿಶದಮೃತಪ್ರವಾಹಮನೆ ಪೀರ್ವ ವಿಳಾಸಮುಳುಂಬಮಾತನೊಳ್ ೯೬

ಜ್ಞಾತೃಜ್ಞಾನಜ್ಞೇ[೫]ಯಕ
ತೀತನನಾ[೫]ದ್ಯಂತಶೂನ್ಯನಂ ನಿರಘಪರಂ
ಜ್ಯೋತಿಃಸ್ವರೂಪನಂ ಪ್ರ
ಖ್ಯಾತಚಿದಾನಂದರೂಪನಂ ಚಿಂತಿಸಿದಂ[೬] ೯೭

ಚಂಪಕ.

ನೆನೆದನನಂತತತ್ತ್ವಮಯನಂ ಪರಮಾತ್ಮನನಪ್ರಮೇಯನಂ
ಮುನಿಜನಮಾನಸಾಮಳಸರೋವರಹಂಸನನದ್ವಿತೀಯನಂ
ಘನನಿಗಮಾಂತಮೃಗ್ಯನನನಾಮಯನಂ ಚಿದಚಿತ್ಪ್ರಪಂಚರಂ
ಜನನನವಂ ತುರೀಯನನಖಂಡನಿಜೋನ್ನತಚಿತ್ಪ್ರಕಾಶನಂ ೯೮

ಮತ್ತೇಭ.

ತ್ರಿದಿನಕ್ಕೊರ್ಮೆ ಫಲಾದನಂ ನೆಗೞ್ದುದಾತಂಗೊಂದು ತಿಂಗಳ್ ದ್ವಿಮಾ
ಸದೊಳಾಱುಂ ದಿನಕೊರ್ಮೆ ತತ್ಫಳಚಯಾಹಾರಂ ತ್ರಿಮಾಸಂ ಬೞಿ
ಕ್ಕೊದವಿರ್ದತ್ತುರುಕಂದಮೂಲಸುರಸಂ ನಾಲ್ದಿಂಗಳೊಳ್ ಜೀರ್ಣಪ
ರ್ಣದ ಸಂಸೇವನೆ ಮಾಸಪಂಚಕದೊಳಾಯ್ತಾತಂಗೆ ವಾತಾಶನಂ ೯೯

೧-೧ ನಿಂದಸೂಯೆ (ರ) ೨ ಸುಯ್ಯದ (ಚ) ೩ ಪಡೆದು (ಚ, ಜ, ತ) ೪ ವಿಕಾಶ (ಜ); ವಿಕಾಸಿ (ಯ, ರ) ೫-೫ ಯು। ಕ್ಕತೀತನಾ (ಏ, ಗ) ೬ ಚಾನಿಸಿದಂ (ಗ, ಚ)

ಚಂಪಕ.

ಸ್ಥಿರತರಭಕ್ತಿಯೆಂಬ ಸುಧೆಯಂ ಸವಿದುರ್ಬುತೆ ಕಂದುಕುಂದನಾ
ಳ್ದಿರದೆಸೆವಂಗಮುರ್ವಿದ ಲಸತ್ಪುಳಕಾಂಕುರಮುಜ್ಜ್ವಲನ್ಮುಖಾಂ
ಬುರುಹಮುರಲ್ದ ಸತ್ತ್ವಮಯ೧ಮಾನಸಮೊಪ್ಪಿರೆ ಚಿತ್ಸುಖಾಬ್ಧಿಯೊಳ್
ಕರಮುವಗಾಹಮಿರ್ದನವನೀಶ್ವರಪಾದಸರೋಜಷಟ್ಪದಂ ೧೦೦

ಮತ್ತಂ,
ಮಹಾಸ್ರಗ್ಧರೆ

ತನುವೃತ್ತಂ ನೇತ್ರದೊಳ್ ನೇತ್ರದ ಬಗೆ ಮನದೊಳ್ ತನ್ಮನಂ ಬುದ್ಧಿಯೊಳ್ ಬು
ದ್ಧಿ ನಿತಾಂತಂ ಚಿತ್ತದೊಳ್ ಚಿತ್ತದ ನಿಲವದಹಂಕಾರದೊಳ್ ಸಂದಹಂಕಾ
ರನಿಯೋಗಂ ಜೀವನೊಳ್ ಜೀವನೆ ಪರಮನೊಳಾಳ್ದೈಕ್ಯಮಂ ನಿಲ್ವಿನಂ ಬೇ
ಱೆನಿಪಂದಂಬೊಂದದಾನಂದದ ನಿಧಿಯೆನಿಸಲ್ ಸಾಲ್ವನಿರ್ದಂ ಮುನೀಂದ್ರಂ

ಪಳಿಕುಗೊಡಮೊಳಹೊಱಗೆ ಪ
ಜ್ಜಳಿಪಂತಜ್ಯೋತಿಯಂತಿರೊಳಹೊಱಗೆ ಸಮು
ಜ್ಜ್ವಳಿಪಂತಶ್ಚಿಜ್ಜ್ಯೋತಿಯ
ಬೆಳಗಿನೊಳೊಡವೆರೆದು ಬೆರಸಿ ಬೆಚ್ಚವೊಲಿರ್ದಂ ೧೦೨

೨ಸ್ವಸ್ಥತುರೀಯಾ೨ತೀತಾ
ವಸ್ಥೆಯನೊಳಕೊಂಡು ತೊಳಪ ಶೃಂಗಾಟಕಪ
ದ್ಮಸ್ಥಿತನೊಳನಘನೊಳ್ ನಿರ
ವಸ್ಥನೊಳೊಡವೆರೆದು ಬಾಹ್ಯಮತಿಯಱತಿ೩ರ್ದಂ* ೧೦೩

ಮಱಪೊಂದ೪ದೆಚ್ಚಱದ ಕಣ್
ದೆಱಯದ ನಿದ್ರಿಸದ ಬೆರೆಯದಗಲದ ಕಣ್ಣಂ೫
ಪೊಱಸೂಸಮೊಳಗಿರದ ಸಯ್
ವೆಱಗಿನ ಸಮರಸದ ಭಾವಮೇಂ ರಂಜಿಸಿತೋ ೧೦೪

ನೀನಾನೆಂಬೆರಡಟಿದುದು
ಮಾನಸಮಂಭೋಧಿಯಾಲಿಕಲ್ಲೋಯ್ತು ಶಿವಂ
ತಾನಾದನೊ ತಾನೇ ಶಿವ
ನೇನಾದನೊ ಎಂಬ ತೆಱದಿನವನೊಪ್ಪಿರ್ದಂ ೧೦೫

೧ ಚಿನ್ಮಯದ (ಚ) ೨-೨ ಸ್ವಸ್ಥಂ ತುರಿಯಾ (ಗ, ವ) ೩ ಮರೆದಿ (ವ) ೪ ಪೊಂದ (ಯ, ರ) ೫ ಕರಣಂ (ಯ) * 'ಚ' ಪ್ರತಿಯಲ್ಲಿ ಈ ಪದ್ಯವಿಲ್ಲ; ಬಿಟ್ಟು ಹೋದಂತೆ ಕಾಣುತ್ತಿದೆ.

ವಚನ

ಇಂತೆಸೆವ ಸದೃಶಶಿವಧ್ಯಾನಾನುಸಂಧಾನದಿನುತ್ತರೋತ್ತರತಪಃಪ್ರಭಾ^೧ವದಿನಾ^೧ ತಪಸ್ವಿ ನಿಷ್ಕಂಪನಿರ್ವಿಕಾರತೆಯಿಂ ರಂಜಿಸಿರ್ಪನ್ನೆಗಂ,

ಮಹಾಸ್ರಗ್ಧರೆ

ಕ್ಷಿತಿಯೆಲ್ಲಂ ಕಾಯ್ದು ದಾಶಾಧಿಪರಗಿದರಮರ್ತ್ಯರ್ಕಳಲ್ಲಾಡಿದರ್ ಪ
ರ್ವತವೃಂದಂ ಕಾಯ್ಪುಗೊಂಡತ್ತತುಳಜಳಧಿ ಮೆಯ್ಗುಂದಿದತ್ತರ್ಕಚಂದ್ರೋ
ನ್ನತತೇಜಃಸ್ಫೂರ್ತಿಯೆತ್ತಂ ಮಸುಳ್ದುದಮಮ ತತ್ತಾಪಸಾತ್ತಪ್ರವೃದ್ಧೋ
ಗ್ರತಪೋಗ್ನಿಜ್ವಾಲೆಯಿಂದಂ ನೆಗೆದುದೊಗೆದ^೨ ತದ್ಧೂಮದಿಂ ಮೇಘವೃಂದಂ ೧೦೬

ವಚನ

ಆಗಳಾ ತಪೋವನದ ತಪೋಧನರ್ಗೆ,

ಮತ್ತೇಭ.

ಧೃತಿಯಳ್ಳಾಡಿದುದೇಟಿಗ್ಗುಂದಿದುದಧೀಶಧ್ಯಾನಮುದ್ಯತ್ತಪಃ
ಸ್ಥಿತಿ ಗೆಂಟಾದುದು ಶಾಂತಿ ಸೋರ್ದುದು ಜಪಾನುಷ್ಠಾನಮಿಲ್ಲಾಯ್ತು ಸದ್
ವ್ರತಮುಂ ಸೀಕರಿವೋದುದಟ್ಟುದುದು ವೇದಾಂತೋದಿತಜ್ಞಾನಮು
ನ್ನತಿಗೆಟ್ಟಿರ್ದುದು ಸದ್ವಿವೇಕಮುಱದತ್ತಾನಂದದೊಂದೆಟ್ಟರಂ ೧೦೭

ಚಂಪಕ.

ಅವನವನೀಶನೋ ಸುಭಟನೋ ಮುನಿಯಲ್ತು ಮುನೀಂದ್ರನಾದೊಡೇ
ಕವನುಡಿಯಲ್ಲಿ ಕಟ್ಟಿದ ಕಠಾರಿಯಡಾಯುಧಮಾಂತ ಸೀಸಕಂ
ಸವಗಮಡರ್ಪುವೆತ್ತ ಧನು ಬೆನ್ನ ನಿಷಂಗಮುಮಂತೆ ತಾಳ್ದ ಭೂ
ತಿ ವಿಲಸದಕ್ಷಮಾಲೆ ಕುಶೆಯುಂ ಮಗುಟಿದ್ದೀಸಿದು ಯೋಗಿಧರ್ಮಮೇ ೧೦೮

ವಿಪರೀತಮವನ ಚರಿತಂ
ತಪಮಧಿಕಂ ತದ್ವಿಚಾರದಿಂದೆಮಗೇಂ^೩ ವಂ
ದಪುದವನತ್ತಣಿನೊದವಿ
ರ್ದಪಟಳಮಂ ಕಳೆದು ಕಾಯ್ವುದೆಮ್ಮನುಮೇಶಾ ೧೦೯

ಚಂಪಕ.

ಮನದೊಳೆ ನಿನ್ನ ಚಿಂತನೆಯನಲ್ಲದೆ ಮಾತಿನೊಳೆಯ್ದೆ ದೇವ ನಿ
ಮ್ಮನುಪಮಪಂಚವರ್ಣಮಯಮಂತ್ರಮನಲ್ಲದೆ ಕಾಯದಲ್ಲಿ ನಿ
ನ್ನನಘಪದಾಬ್ಜಸೇವನೆಯನಲ್ಲದೆ ನಚ್ಚಿರೆವಾಗಳುಂ ಕೃಪಾ
ವನನಿಧಿ ಮಿಕ್ಕ ಮರ್ವಿಷಯಮಂ ತಿಳಿದಿರ್ದಪೆ ನೀನಿದೆಲ್ಲಮಂ ೧೧೦

೧–೧ ವಿದಿತನಾ (ಗ, ತ, ವ)
೨ ದೊಗೆದು (ರ)
೩ ದೆಮಗೇ (ಯ)

ಪತಿಯುಂ ಗತಿಯುಂ ಹಿತನುಂ
ಪಿತನುಂ ದೇವೇಶ ನೀನೆ ಪೆಱತೆ¹ಮಗಿಲ್ಲಿ¹
ಲ್ಲತಿಶ²ಯಕಿತವ²ತಪಸ್ವಿಯ
ಕತದಿಂದಾವಟಲನೊರಸಿ ಪೊರೆ ಕರುಣಾಬ್ಧೀ ೧೧೧

ಆ ಗಿರಿತಟದಿಂದವನಂ
ಪೋಗಿಸಿ ತದ್ವನನಿವಾಸಮಂ ಕರುಣಿಪುದಂ
ತಾಗದೊಡೆಮಗೀವುದು ನೀ
ಡಾಗದೆ ಪೆಱತೊಂದನುಚಿತನಗನಂದನಮಂ ೧೧೨

ಪ್ರಣಯಮಣಮಿಲ್ಲದೊಡಮಾ
ಗುಣಿಯ ಗುಣಂಗಳನೆ ಮಱೆಸದುಸಿರ್ದಂ ಮುನಿಪಾ
ಗ್ರಣಿ ಪಗೆಯೊಳಾದೊಡಂ ಗುಣ
ಗಣಮಿರೆ ತಾಂ ಗ್ರಹಿಸಿ ಪೊಗೞದಿರ್ಪನೆ ಸುಜನಂ ೧೧೩

ವಚನ

ಎಂದಿಂತು ಬಿನ್ನಪಂಗೆಯ್ದ ಮುನಿವರನುಕ್ತಿಯಂ ಕೇಳ್ದು ಪನ್ನಗಧರಂ ಮುಗುಳ್ನಗೆನಕ್ಕು,

ತಳತಳನೆ ತೊಳಪ ರದನದ
ಬೆಳಗಂತಃಸ್ಥಿತಕೃಪಾಸುಧಾಂಭೋನಿಧಿಯು
ಗ್ಗಳಿಸಿ ತೆರೆಮಸಗಿದಂತಿರೆ
ಜಳರುಹರಿಪುಮೌಳಿ ತಾಪಸಂಗಿಂ³ತೆಂದಂ ೧೧೪

ಮಲ್ಲಿಕಾಮಾಲೆ

ಆ ತಪೋಧನನಾವನೆಂಬಭಿಶಂಕೆಯೇಕೆ ಜಗತ್ರಯ
ಖ್ಯಾತನರ್ಜುನನಿಂದ್ರಸೂನು ಮುಕುಂದದೇವರನುಗ್ರಶೌ
ರ್ಯಾತುಳಂ ಭವದೀಯಭಾಗ್ಯಮನೇನು⁴ಮಂ ವಲಮು⁴ರ್ಥಿಸಂ
ಭೀತಿ ಬೇಡವನತ್ತಣಿಂ ನಿಮಗಂತವಂ ತಪಮಿರ್ದೊಡಂ ೧೧೫

೧-೧ ಮಗಿನಿತಿ (ಚ)
೨-೨ ಯದ ತವ (ಪ)
೩ ತಾಪಸರ್ಗಿಂ (ಜ, ಯ)
೪-೪ ಮಂ ನಲವ (ಕ, ಗ, ಚ); ಮುಂಡಲೆಪ (ರ)

ಮತ್ತೇಭ.

ಪಡೆ ನೀಂ ಪಾಶುಪತಾಸ್ತ್ರಮಂ ಗಿರಿಶನಿಂ ಪೋಗಿಂದ್ರಕೀಲಕ್ಕೆ ಪೆಂ
ಪಡರ್ದುದ್ಯತ್ತಪಮಾಂಪುದೆಂದು ಬೆಸಸಿತ್ತಂ ವ್ಯಾಸನೆಯ್ತಂದನೀಗ
ಯೆಡೆಗಾತಂ ಪದೆದಿತ್ತ ಮಂತ್ರಮನದಂ ಕೆಯ್ಕೊಂಡು ಮದ್ಭಕ್ತಿ ಸಂ
ಗಡಮಾಗುತ್ತಿರೆ ವೈರಿವರ್ಗವಿಜಯೋಪಾಯಾನ್ವಿತಂ ಫಲ್ಗುನಂ ೧೧೬

ರಿಪುಜಯಕಾರಣಶರಮಂ
ಪ್ರಪತ್ತಿಯಿಂ ಪಡೆವೆನೆಂದು ಬಯಸುತ್ತೆಮ್ಮಿಂ
ತಪಮಿರ್ದಪನಾ ಮುನಿಯಿ
ತ್ತುಪ೨ದೇಶಂಬಿಡಿದು೩ ನಿಶ್ಚಿತಾರ್ಥಂ ಪಾರ್ಥಂ ೧೧೭

ಉತ್ಪಲ.

ಆತನಭೀಷ್ಟಮಂ ಸಲಿಸಿ ಪಾಶುಪತಾಸ್ತ್ರಮನಿತ್ತು ತತ್ತಪೋ
ಜಾತಮಹೋಷ್ಣಮಂ ತವಿಸಿ ನಿಮ್ಮ ಮನೋರಥಮಿತ್ತು ರಕ್ಷಿಪೆಂ
ಮಾತಿದು ನಿನ್ನಿಯೆಂದಭಯಮಿತ್ತವರಂ ಕಳಿಪುತ್ತೆ ಭಕ್ತಸಂ
ಪ್ರೀತಿಯಿನೆಯ್ದಲುಜ್ಜುಗಿಸಿದಂ ಮೃಗಯಾರತ೪ನಿಂದುಶೇಖರಂ ೧೧೮

ಗದ್ಯ

**ಇದು ನಿಖಿಲ೫ಭುವನೈಕವಲ್ಲಭಸುರಾಸುರೇಂದ್ರವರದಕರುಣಾವರಣಪರಮಶಿವಲಿಂಗ ತರುಣಪತಂಗಸಂಗತಮಂಗಳಹೃದಯಾರವಿಂದಬಂಧುರಸರಸಸಜ್ಜನ೫ ಮಾನಿತೋಭಯ ಕವಿತಾವಿಚಕ್ಷಣ೬ ಶ್ರೀಷಡಕ್ಷರಿದೇವ ವಿರಚಿತಮಾದ ಕಿರಾತರುದ್ರಲೀಲಾಕಥನವಿಪುಳ ಪ್ರಬಂಧದೊಳ್ ದ್ವಿತೀಯಾಶ್ವಾಸಂ ಪರಿಸಮಾಪ್ತಂ.**

೧ ಪನಾ (ರ) ೨-೨ ದೇಶಂ ಪಡೆದು (ರ,); ದೇಶಂಬಡಿದು (ವ) ೩ ಯಾತ್ರೆಯ (ರ)
೪ ಸಮಸ್ತ (ಚ, ಜ) ೫ ಸರಸಜನ (ಯ) ೬ ವಿಶಾರದ (ಯ)

# ತೃತೀಯಾಶ್ವಾಸಂ

ಶ್ರೀಮದಗಪತಿಸುತಾಮುಖ
ತಾಮರಸಾಮೋದಭೃಂಗನಮಿತಕೃಪಾಂಗಂ
ಸಾಮಜಹರನಾನತಜನ
ತಾಮರತರು ಮಾೞ್ಕೆ ಸೌಖ್ಯಮಂ ಶಿವಲಿಂಗಂ ೧

ಉತ್ಪಲ.

ದೇವನ ಬೇಂಟೆಯುಜ್ಜುಗದ ಸಬ್ಬವಕಾಱಿರ ಡಿಂಡಿಮಾರವಂ
ತೀವಿದುದಾ ಮಹಾಕಟಕದೊಳ್ ಸುರದುಂದುಭಿನಿಕ್ವಣಾನ್ವಿತಂ
ಭಾವದೊಳುತ್ಸವಂ ನೆಗೞ್ದುದಲ್ಲಿ ಗಣಾಳಿಗೆ ಸಂಭ್ರಮಂ ಪೊದ
ೞ್ದಾವರಿಸಿರ್ದುದಗ್ಗದಮರರ್ಗದನೂಹಿಸಲಾರ್ಗೆ ಗೋಚರಂ ೨

ಮತ್ತಮಾಗಳ್,

ಚಂಪಕ.

ಜಡೆಗಳ ಬಂಬಲೇ ತಲೆದೞಿರ್ ಫಣಿ ಸುತ್ತಿದ ಬಳ್ಳಿ ತಾಳ್ದ ಬಾನ್
ಗಡಲದು ಪುಷ್ಪಮಾಲೆ ಗಱಿವೂಗಱಿ ತೆಳ್ವೆಱಿ ಬಗ್ಗಸಮ್ಮದೊ
ಳ್ಪಡೆ ಪೊಸಚಲ್ಲಣಂ ಕರಿಯ ಕುಪ್ಪಸಮಾನೆಯ ಕೃತ್ತಿಯಂಗದೊಳ್
ತೊಡೆದ ವಿಭೂತಿಯುದ್ಘಮಪರಾಗವಿಲೇಪನಮುಗ್ನಿಲೋಚನಂ ೩

ಗೈರಿಕಲಲಾಮಮಹಿಪ
ಸ್ಫಾರಫಣಾರತ್ನರಾಜಿ ಗುಂಜಾಭರಣಂ
ಸಾರಪಿನಾಕಂ ಪದವಿಲ್
ಕೂರಂಬೆಸೆವಾತ್ಮಶಕ್ತಿ ತನಗೊಪ್ಪುವಿನಂ ೪

ಚಂಪಕ.

ಅರೆಯೊಡಲಾದ ಕಾಳಿಯುಟುದಂಗಮನಾವರಿಸಿರ್ದ ಮಾೞ್ಕೆಯಿಂ
ಕರಮೆಸೆದಿಂ[೧]ದ್ರನೀಲರುಚಿಕಾಂತಕಳೇವರಮೊಪ್ಪೆ ತಾಳ್ದನಾ
ದರದೆ ಕಿರಾತರೂಪಮನುಮಾಧಿಪನಲ್ಲಿ ಘನಸ್ವತಂತ್ರನ
ಚ್ಚರಿವಡೆದಾಗಮುಪ್ರತತಿ ಕೀರ್ತಿಸೆ ಬಣ್ಣಿಸೆ ಸರ್ವನಿರ್ಜರರ್ ೫

೧ ಮೆಸೆವಿಂ (ಯ)

ಶಬರವೇಷದಲ್ಲಿರುವ ಪರಶಿವ-ಪಾರ್ವತಿಯರು



ಶಬರಶಂಕರವಿಳಾಸಂ : ಆ. ೩, ಪ. ೫, ೬.

ಚಂಪಕ.

ತಳಿರುಡೆ ಸಂಜೆಗೆಂಪು ಪೊಸಮುತ್ತಿನ ಹಾರಮೆ ತಾರಕಾಳಿ ತ
ಳ್ತಳಿರುಚಿ ಕಾಯಕಾಂತಿ ಕಡುಗತ್ತಲೆ ಮೂಕುತಿ[೧]ಮುತ್ತು ಶುಕ್ರಮುಂ
ಡಳಮುಮದೊಪ್ಪೆ ಭಿಲ್ಲಿಯ ವಿಳಾಸಮನಾಳ್ದಿಸೆದಂದು ಸರ್ವಮುಂ
ಗಳೆ ನಿಜಕಾಳರಾತ್ರಿವೆಸರಂ ಮಿಗೆ ಸಾರ್ಥಕಮಂ ನೆಗಟ್ಚಿದಳ್ ೬

ಮಹಾಸ್ರಗ್ಧರೆ

ಅರನೇಱಲ್ವಣ್ಣ ಬಣ್ಣಂಬಡೆದ ತನು ಪೃಥುಶ್ರೋಣಿ ನೀಲಾಳಕಂ ಪಂ
ಕರುಹಾಸ್ಯಂ ಬಿಣ್ಪನಾಳ್ದೊಪ್ಪುವ ನೆಲೆಮೊಲೆ ಬಿಂಬಾಧರಂ ದೀರ್ಘನೇತ್ರಂ
ತರಳಾಪಾಂಗಂ ಬಟಲ್ಬಲ್ಮುಡಿ ಬಡನಡು ರಂಭೋರು ಕೊಂಕಾಂತ ಪುರ್ಬೊಂ
ದಿರೆ ನಾನಾಶಕ್ತಿಯರ್ ಬೇಡಿತಿಯರೆಸಕಮಂ ತಾಳ್ದು ಕಣ್ಗೆಡ್ಡಮಾದರ್ ೭

ಮತ್ತೇಭ.

ಹರಿಮಧ್ಯಂ ಮೃಗಶಾಬನೇತ್ರಮಳಿಮಾಲಾವೇಣಿ ಚಂಚದ್ರಥಾಂ
ಗರುಚಿಸ್ಫಾರಪಯೋಧರಂ ದ್ವಿರದಯಾನಂ ಕೋಕಿಲಾಲಾಪಮೊ
ಪ್ಪಿರೆ ಭಿಲ್ಲಾಂಗನೆಯರ್ಕಳಾದಮರಿಯರ್ ಸ್ವೈಜಾಂಗಮಂ ನೋಡಿ ಭೀ
ತಿರಸಂ ತನ್ಮೃಗವೃಂದಕಾಗದಿರವಂ ತಾಳ್ದಂತೆ ಕಣ್ಗೊಪ್ಪಿದರ್ ೮

ಚಂಪಕ.

ತೊಳಗುವ ದಂತಮೋಲೆ ಗುರು[೨]ಗಂಜಿಯ ಬಣ್ಣಸರಂ ತಮಾಲದೊ
ಳ್ದಳಿರುಡೆ ತಳ್ತ ಪೀಲಿಯ ತರಂಗದ ಬಲ್ನಿಱಗಟ್ಟು ಸೂಡಿದು
ತ್ಪಳದಳಮಾಲೆ ತಾಳ್ದ ಪುಲಿವಚ್ಚೆಯ ಬೊಟ್ಟು ಪಸಿರ್ಪುವೆತ್ತ ಪ
ಟ್ಟಳಿಯ ನಿಚೋಳಮೊ[೩]ಪ್ಪಿರೆ ಪುಳಿಂದಿಯರಾದರಮರ್ತ್ಯಕಾಂತೆಯರ್ ೯

ಮತ್ತಂ,

ಚಂಪಕ.

ತಲೆವಳಸುತ್ತೆ ಕಟ್ಟಿದ ತಳಿರ್ ನವಚಂಪಕಕರ್ಣಪೂರಮು
ಜ್ಜ್ವಲಸಿತಕರ್ಣಿಕಾರಚಿತಕಾಂಚಿ ಮುರಂಬದ ಬೊಟ್ಟು ಬೆನ್ನ ಮೇ
ಲೊಲೆದೆಸೆವೆಣ್ಣೆಗಂಟು ಪದವಿಲ್ ಮೊನೆಯಂಬು ಲತಾಂತಮಾಲೆ ಮುಂ
ಜುಲಗಜದಂತದೊಳ್ಪಳಿ ವಿರಾಜಿಸೆ ಕಣ್ಗೆಸೆದರ್ ಪುಳಿಂದಿಯರ್ ೧೦

ಮೃಗಮದದಂಗರಾಗಮಸಿತೋತ್ಪಲಮಾಲೆಯ ಚೊಲ್ಲೆಯಂ ಮನಂ
ಬುಗುವ ತಮಾಲಪಲ್ಲವದ ಮೆಲ್ಲುಡೆ ಕಟ್ಟಿದ ಪೀಲಿದಂಡೆ ಚೆ
ಲ್ವಗಲದ ಸಾಂದ್ರಕಜ್ಜಲಲಲಾಮಮುಗಾಹಿತರತ್ನಭೂಷಣಂ
ಸೊಗಯಿಸೆ[೪] ವೇವಿಯರ್ ಬಳಸಿ ನಿಂದೆಸೆದಿರ್ದರಗೇಂದ್ರಪುತ್ರಿಯಾ[೫] ೧೧

೧ ಮೂಗುತಿ (ಯ) ೨ ಗುಲು (ಚ) ೩ ನಿಚೊಲ್ಲಮೊ (ಚ, ಜ); ನಿಚೊಲ್ಲೆಯೊ(ಕ)
೪ ಸೊಗಯಿಪ (ಚ) ೫ ಪುತ್ರಿಯಂ (ಕ, ಯ)

ಚಂಪಕ.

ಸಿರಿ ಶಚಿ ವಾಣಿ ರೋಹಿಣಿ ಕರಾಳಿ ಕಳಾವತಿ ಕಾಳರಾತ್ರಿ ಸೌಂ
ದರಿ ವನಲಕ್ಷ್ಮಿ ಶಾಕಿನಿ ಕಪಾಲಿನಿ ಡಾಕಿನಿ ಕಾಳಿ ಮಾರಿ ಶಾ
ರ್ವರಿ ರತಿ ಮುಕ್ತಕೇಶಿ ಶವವಾಹಿನಿ ಮೋಹಿನಿ ಚಂಡಿ ಸಿದ್ಧಿ ಸಂ
ಗರಚರಿ ಚಕ್ರಧಾರಿಣಿ ಮನೋನ್ಮನಿ ಮಾಲಿನಿಯೆಂಬ ಶಕ್ತಿಯರ್ ೧೨

ಮತ್ತೇಭ.

ಕ್ಷಿತಿ ಶಾಕಂಬರಿ ವಾರದೇವತೆಯರಾಶಾದೇವಿಯರ್ ಯಜ್ಞದೇ
ವತೆ ಮಂತ್ರಾತ್ಮಿಕೆ ಸಪ್ತಮಾತೃಕೆಯರಂಭೋವಾಸಿನೀ ನಿಮ್ನಗಾ
ಸತಿಯರ್ ಜೋಗಿಣಿಯರ್ ಸುಧಾಂಶುವಧುಗಳ್ ಗಾಯತ್ರಿ ಸಾವಿತ್ರಿ ಸ
ನ್ಮತಿ ವಿಖ್ಯಾತಿಯೆನಿಪ್ಪ ದೇವಿಯರಮಂದೋತ್ಸಾಹದಿಂದೆಯ್ದಿದರ್ ೧೩

ಮತ್ತಂ,

ಚಂಪಕ.

ಬಡನಡು ಬಳ್ಕೆ ಬಟ್ಟಮೊಲೆ ಮೇಲುದನೆತ್ತೆ ನಿತಂಬಮಂಡಲಂ
ಪೊಡರೆ ಕಟಾಕ್ಷಕಾಂತಿ ಮಿಱುಗುತ್ತಿರೆ ಸೋರ್ಮುಡಿ ಜಾಱೆ ಮಾಱಿ ದಿಂ[1]
ಕಿಡೆ ರದನಾಂಶು ಬಿಲ್ಸರಲನಾಂತು ಕರಾಗ್ರದೊಳಾರ್ಪಿನಿಂದದೇಂ
ನಡೆದುದೊ ಕಾರ ಕಾರ್ಮುಗಿಲ[2] ಬಣ್ಣದ ತಿಣ್ಣದ ನಿರ್ಜರೀಜನಂ ೧೪

ಮತ್ತಂ,

ಅಳಿಕುಲನೀಲಕುಂತಳದ ಕಾಂತಿ ವಪುರ್ಲತೆಯಂ ಮುಸುಂಕಿದಂ
ತಳವಡೆ ಕರ್ಪು ಕಾರ್ಮುಗಿಲ ಮಿಂಚಿನೆ ಕಣ್ಗದಿರುರ್ವಿ ಮಿಂಚೆ ಸಾ
ರ್ದೆಳಸಿ ಪಗಿಲ್ತು ಕೇಕಿಯೆನೆ ಬಲ್ಮುಡಿ ತೋಱೆ ಕಲಾಪಮಾಲೆ ಸಂ
ಗಳಿಸೆ ನಗೇಂದ್ರಜಾತೆಯೊಡನೆಟ್ಟಿರುತಿರ್ದರಮರ್ತ್ಯನಾರಿಯರ್ ೧೫

ತಳಿರ್ಗಳಮರ್ಕೆವೆತ್ತ ತಲೆಕಟ್ಟು ಲತಾಂತದ ಮಾಲೆ ಬೆನ್ನ ಬ
ತ್ತಳಿಕೆ ಮರಂದದಣ್ಪು ಪಸುರಂಗಿಗೆ ಪೀಲಿಯ ಪಕ್ಕಜಲ್ಲಿ ಗೇ
ಣಳವಡೆ ತೊಟ್ಟ ಪೊಂಬುಲಿಯ ಸಮ್ಮದ ಚಲ್ಲಣಮೊಪ್ಪೆ ಬಲ್ಸರಲ್
ದಳೆದು ಗಣಾಳಿ ರುದ್ರತತಿ ತಾಳ್ದುದನೂನಪುಳಿಂದವೇಷಮಂ ೧೬

ಮಹಾಸ್ರಗ್ಧರೆ

ನೆರೆದೆಟ್ಟಿಂದಿರ್ದುದಾ ವೇಳೆಯೊಳ್ ವನಚರಾಕಾರಮಂ ತಾಳ್ದು ನಂದೀ
ಶ್ವರನುಂ ಭೃಂಗೀಶವೀರೇಶ್ವರಗುಹಗಣಪರ್ ದಾರುಕಂ ರೇಣುಕಂ ದು
ರ್ಧರನುಂ ಧೂಮ್ರಾಕ್ಷನುಂ ಧೂರ್ಜಟಿಯುಸಿತಗಳಂ ಬಭ್ರು ಶುಭ್ರಾಂಗನಂಭೋ
ಧರನಾದಂ ತಾಳಜಂಘಂ ಮೊದಲೆನಿಪ ಮಹಾಸತ್ತ್ವಸಾಂದ್ರರ್ ಗಣೇಂದ್ರರ್ ೧೭

೧ ಧೀಂ (ಮ)
೨ ಕರ್ಮು (ಮ)

ಮಹಾಸ್ರಗ್ಧರೆ

ಭುವನೇಶಂ ಭೂತಿಯುಕ್ತಂ ಭುಜಗಧರನಜೇಯಂ ಮಹಾಕಾಯನುಗ್ರಂ
ಶಿವರುದ್ರಂ ಪೂರ್ಣಭದ್ರಂ ಬಲವಿಕರಣನಭ್ರಾಂಗನಾದಿತ್ಯವರ್ಣಂ
ಭವನಾಶಂ ಶಂಭುರುದ್ರಂ ಕಲವಿಕರಣನೋಂಕಾರನೀಶಾನರುದ್ರಂ
ಧವಳಾಂಗಂ ಧರ್ಮರೂಪಂ ದಮನವಿಮದರುದ್ರರ್ಕಳೆಯ್ತಂದ[1]ರಾಗಳ್ ೧೮

ಮತ್ತೇಭ.

ಸಿಡಿಲಂ ನುರ್ಗುವ ಶೇಷನಂ ತುಡುವ ಕಲ್ಪಾಂತಾಗ್ನಿಯಂ ತೀಡಿ ಬೊ
ಟ್ಟಿಡುವಾಕಾಶಧರಾತಳಂಗಳನೆ ಕೆಯ್ದಾಳಂಗಳಂ ಮಾಳ್ಪ ಪೆರ್
ಗಡಲಂ ಪೀರ್ವ ಕುಲಾಚಲಂದಳೆದು ಪೊಯ್ಸೆಂಡಾಡುವಾದಿತ್ಯನಂ
ಮಿಡಿವಾರ್ಪುಳ್ಳ ಗಣಾಧಿನಾಥರೊಡನೇಟ್ತಂದರ್ ಮಹೋತ್ಸಾಹದಿಂ ೧೯

ವಚನ

ಅಂತೇಟ್ತಂದ ಗಣೇಂದ್ರಸಂದೋಹಮಲ್ಲದೆಯುಂ, ಬೇಱೆವೇಱೆ ನಿಜರಮಣಿಯರೊಡನೆ ಕಿರಾತನೂತ್ನವೇಶಾಲಂಕೃತರಾಗಿ,

ಚಂಪಕ.

ಕುಲಿಶಧರಂ ಧನಂಜಯನಿನಾತ್ಮಭವಂ ದನುಜಂ ಜಲಾಧಿಪಂ
ಜ್ವಲನಸಖಂ ಕುಬೇರನನಲಾಕ್ಷಮಹರ್ಪತಿ ಪದ್ಮವೈರಿ ಮಂ
ಗಲನುಶನಂ ಬೃಹಸ್ಪತಿಮುಖರ್ ವಸುಗಳ್ ಸುರಸಿದ್ಧಸಾಧ್ಯರು
ಜ್ಜ್ವಲತರಯಕ್ಷಚಾರಣಪಿಶಾಚಗಣಂ ನಡೆತಂದುದಟ್ಟಿಯಿಂ ೨೦

ಮುನಿಕೋಟಿ ಮುಗಿದ ಕೆಯ್ಗ[?]ಳಿ
ನನುನಯದಿಂ ಪೊಗೞೆ ಜಯಜಯಧ್ವನಿಯಿಂ ಪಾ
ವನಪದದಿಂ ಮೆಟ್ಟಿದನೊ
ಯ್ಯನೆ ಗಿರಿಶಂ ವಿಧಿನಿಷೇಧಮಯಪಾದುಕೆಯಂ ೨೧

ಚಂಪಕ.

ಮೊೞಗಿದುದಭ್ರದೊಳ್ ದಿವಿಜಭೇರಿಯ ಭೂರಿಗಭೀರರಾವಮು
ಜ್ಜ್ವಳಸಿತಶಂಖನಾದದೊಡನಾನಕಘೋಷಣಮುಣ್ಮಿದತ್ತು ಮಂ
ಗಳರವದಿಂದೆ ಪೊಂಬರಿಯಣಂಗಳೊಳಾರತಿಯೆತ್ತಿ ಪಾಡಿದರ್
ವಿಳಸಿತಭಾರ್ಗವೀ ವಿಧಿವಧೂ ರತಿಮುಖ್ಯನಿಳಿಂಪಕಾಂತೆಯರ್ ೨೨

೧ ಳೆಟ್ತಂದ (ಕ, ಯ)

ಮತ್ತೇಭ.

ಮಿಡಿವಿಲ್ ಮಿಂಟೆ ತುಪಾಕಮಿಟ್ಟೆ ಪದವಿಲ್ ಕೂರಂಬು ಬೆನ್ಗಲ್ಲಿ ಕೆಯ್
ಪೊಡೆ ಗಾಳಂ ಕಿಱುಗೂಳಿ ಬೀಸುವಲೆ ಬೆಳ್ಳಾರಂ ಸೊಡರ್ಮುಡ್ಡಿ ಕ
ರ್ಪಡ[೧]ಮಂಟ[೧]ಡ್ಡಣಮುಲ್ಬಣಂ ಕವಣೆ ನಾರಾಚಂ ಕವಲ್ಕಣ್ಣೆ ಪೇ
ರಡಿ ಖಡ್ಗಂ ಬಡಿಕೋಲ್ಗಳೊಪ್ಪೆ ಜವದಿಂದೆಟ್ಟುದರಾ ಧೀವರರ್ ೨೩

ಇಡುವಲೆ ಸಿಡಿವಲೆ ಕಿಱುವಲೆ
ನಡೆವಲೆ ಪೆರ್ವಲೆ[೨] ತೊಡಂಕುವಲೆ ಕೊಲ್ವಲೆ ಕ
ಕ್ಕಡವಲೆ ನಿಡುವಲೆ ಸಾಲ್ವಲೆ
ಬಿಡುವಲೆಗಳೆನಿಪ್ಪುವೆಸೆದುವಾ ಬೇಂಟೆಗರೊಳ್ ೨೪

ಮತ್ತ[೩]ಮದಲ್ಲದೆಯುಂ,

ಮತ್ತೇಭ.

ಪ್ರಣವಂ ಶೃಂಖಲೆ ಸಾರಮೇಯಮುಮುರ್ದಾಮ್ನಾಯಂ ಪುರಾಣವ್ರಜಂ
ಶಣ[೪]ಸೂತ್ರಂ ಸ್ಮೃತಿ ಜಂತ್ರಮಾಗಮಮೆ ಬೆಳ್ಳಾರಂ ಮಹಾದೀಕ್ಷೆ ಕೂ
ರ್ಗಣೆ ತರ್ಕಂ ಬಡಿಕೋಲ್ ಸಮಾಧಿ ಸಬಳಂ ಕೂರಿಟ್ಟೆ[೫] ಯೋಗಂ ಸಲ
ಕ್ಷಣಮಂತ್ರಂ ಧನು ಜಾನಮೇ ಕವಣೆ ನಾರಾಚಂ ತಪೋವಿಸ್ತರಂ ೨೫

ಚಂಪಕ.

ಸುರಿಗೆ[೬] ವಿರಕ್ತಿ ಸುವ್ರತಮುಡಾಯುಧಮುಡ್ಡಣಮಾತ್ಮವಿದ್ಯೆ ಸ
ಚ್ಚರಿತಮೆ ಬೋಟಿಯಂಬು ಕಿಱುಗೇಣ್ ಶ್ರವಣಂ ಮನನಂ ಕರಾಸಿ ಶಾಂ
ಕರನವಭಕ್ತಿ [೭]ದೀಹದ ಮೃಗಾರಿಗಳಾಗೆ[೭] ಗಣಾಳಿ ತಾಳ್ದು ವಿ
ಸ್ಫುರಿತವಿಲಾಸ[೮]ದಿಂ ನಡೆದರೊ[೯]ಲ್ದೊಡಗೂಡಿ ಕಿರಾತರುದ್ರನಂ[೧೦] ೨೬

ಗಱಿಗಣೆ ಬೆನ್ನ ಬತ್ತಳಿಕೆ ಮೆಟ್ಟಿದ ಕೆರ್ಪು ತಮಾಲಪಲ್ಲವಂ [ಯೊಳ್
ತುಱುಗಿದ ಗೊಂಡೆಯಂ[೧೧]ಮಿಸುಪ ಬಿಲ್ ಗುರುಗುಂಜಿಯ ದಂಡೆ ಮುಂಡೆ
ಮಿಱುಗುವ ಪೀಲಿಗಟ್ಟು ಪೊಸನಿಗ್ಗವದೊಳ್ಪಳೆ ಪಚ್ಚೆಗುಪ್ಪಸಂ
ಕಿಱುದಳಿರಾಂತ ಚಲ್ಲಣಮದೇಂ ಬಗೆಗೊಂಡುದೊ ತತ್ಕಿರಾತರಾ ೨೭

ಕರಿರಿಪು ಮತ್ಸರಂ ಮದಮೆ ದಂತಿ ವಿಮೋಹಮೆ ಖಡ್ಗಿ ಕಾಮಮೇ
ಹರಿಣಮಸೂಯೆ ಸೂಕರಮನಲ್ಪತರಕ್ಷುವೆ ರೋಷಮಾಸೆ ಕಾಟ್
ಮರೆ ಘನದಂಭಮೇ ಕರಡಿ ಲೋಭಮೆ ಸೈರಿಭಮನ್ಯಪಾತಕೋ
ತ್ಕರಮೆ ವಿಹಂಗಸಂಘಮೆನಿಸಿರ್ದುದು ತದ್ವನದೊಳ್ ಮೃಡಾಜ್ಞೆಯಿಂ ೨೮

೧-೧ ಪೆರ್ಮ (ಚ) ೨ ಪೆರ್ಬಲೆ (ಕ) ೩ ಅಂತು (ಗ, ತ) ೪ ಚಣ (ಕ, ಗ, ಜ) ೫ ಕೂರೀಟಿ (ಚ, ಜ) ೬ ಸುರಗಿ (ಯ) ೭-೭ ದೀಹದ ಮೃಗಾದಿಗಳಾಗೆ (ಚ, ಜ); ದೀಪಕಮೃಗಾವಳಿಯಾಗೆ (ಯ) ೮ ವಿಶಾಲ (ಕ) ೯ ನಡೆದುದೊ (ಯ) ೧೦ ರುದ್ರನಾ (ಯ) ೧೧ ಯಿಂ (ವ)

ವಚನ

ಆಗಳ್ ವಿಪುಳಪುಳಿಂದವೇಷದಗಣಿತಗಣಪ್ರತಾನಮುಮಪರಿಮಿತನಿರ್ಜರವಿತಾನಮುಮಂ ಬೆನ್ನನೆಟ್ಟಿರೆ ಬಿಂಕದ ಬೆಡಂಗಿನ ಬಿಯದವೆಣ್ಗಳೊಡನೆ ಸಂಭ್ರಮಾಡಂಬರಂ ಮಿಗೆ ಬಂದ ಗಿರಿತನೂಜೆವೆರಸು ಕಿರಾತಮ[೧]ಹೇಶ್ವರಂ ವಿಪುಳತರೋತ್ಸಾಹದಿನಡಿದಾವರೆಯ ಸೋಂಕಿನಿಂ ಪೊಡವಿವೆಣ್ಣೊಡಲ್ಗೆ ಪುಳಕಾಂಕುರಮನೊಡರ್ಚುತುಂ ನಡೆತಂದಿಂದ್ರಕೀಲಕುತ್ಕೀಲಕಟಕದ ಪೇರಡವಿಯಂ ಪೊಕ್ಕು ನಿಂದು ನಿರೀಕ್ಷಿಸಾಗಳ್,

ಮಹಾಸ್ರಗ್ಧರೆ

ಶುಕ ಭಾರದ್ವಾಜ ಶಾಂಡಿಲ್ಯ ರುರು ಕಪಿಲ ಸತ್ಕೌಶಿಕಾಗಸ್ತ್ಯಯುಕ್ತಂ
ಪ್ರಕಟೋದ್ಯತ್ತಾಪಸಾವಾಸಮನದು ನಭಮಂ ಋಕ್ಷರಾಜಾನ್ವಿತಂ ನಾ
ಗಕದಂಬಾನಂತವಿಭ್ರಾಜಿತಮಹಿಪುರಮಂ ಕರ್ಣಭೀಷ್ಮಾದ್ಭುತಧ್ವಾ
ನಕಠೋರಂ ಪಿಂಗಚಕ್ಷುರ್ಬಲಮನಮನು ಪೋಲ್ತೊಪ್ಪುತಿರ್ದತ್ತರಣ್ಯಂ ೨೯

ಮಱುಜವಣಿ[೨] ಮಾಣಿಕದ ಪಾ
ಸಱೆ ಪರಿಸದ ಮೊರಡಿ ಪರಿವ ಸಿದ್ಧರಸದ ಬಲ್[೩]
ದೊಱೆ ಬಜ್ಜರಗವಿ ಪಸಿರ್ಗ
ಲ್ಲಱೆ ಸಸಿಗಲ್ಗೋಡು ಮೆಱೆಗುಮಾ ಗಿರಿತಟದೊಳ್ ೩೦

ಇದು ದವಶಿಖಿಯಿದು ಕಿಂಶುಕ
ಮಿದು ಕಾರ್ಮುಗಿಲಿದು ತಮಾಲಮಿದು ಮದಗಜಮಿಂ
ತಿದು ಗಂಡಶೈಲಮೆಂದೆಂ
ಬುದು[೪] ತಿಳಿವೊಡಶಕ್ಯಮೆನಿಪುದಾ ಪೆರ್ಗಾಡೊಳ್ ೩೧

ಮಹಾಸ್ರಗ್ಧರೆ

ಬೆಟಿಲಾಲಂ ಮತ್ತಿ ಬೇಲಂ ಪುಣಿಸೆಯಣಿಲೆ ದಿಂಡಾಲಮಂಕೋಲೆ ಬೇವಿಂ
ಗಳಮೆಕ್ಕಂ ಕಕ್ಕೆ ಮಾಪಂಬಟೆ ಬಿದಿರರಿಟಾಳಂ ಬಕಂ ಚಂದನಂ ಗು
ಗ್ಗುಳಮಿಾಚಲ್ ಬನ್ನಿ ಗೇರ್ ಮುತ್ತುಗಮರಳಿ ಪತಂಗಂ ಪುಲಿಂಗಿಲ್[೫] ತಮಾಲಂ
ಮೊಳಗಾಚಂ ನೆಲ್ಲಿ ನೇರಿಲ್ ತದುಕು ಪನೆ[೬]ಗಳೊಪ್ಪಿರ್ಕುಮಾ ಕಾಡೊಳೆತ್ತಂ ೩೨

ಗರುಡಂ ಕರ್ಬಕ್ಕಿ ಕಂಕಂ ಗೊರವಮೊರಲೆ ಪೆರ್ಬಕ್ಕಿ ಪಾರಾವತಂ ಹೆಂ
ಗುರು ಟೀವಂ[೭]ಟಿಟ್ಟಿಭಂ ತೊಂಡಿಗನುರುಳಿಗನಿರ್ಬಾಯನುಂ ಚಾತಕಂ ತಿ
ತ್ತಿರಿ ಚೆಂಬೋತಂ ಪಿಕಂ ಮಿಾಂಗುಲಿ[೮] ಮರಕುಟಿಗಂ ಗೀಜಗಂ ಗುಬ್ಬಿ ಘೂಕಂ
ಸರಟಂ ಸಾಳ್ವಂ ಪಸುಂಬಂ ಪರಡೆ[೯] ಶಿಖಿ ಶುಕಂ ತದ್ವನಾಂತಸ್ಥಮಿರ್ಕುಂ ೩೩

೧ ಮಾ (ಗ, ಜ, ತ) ೨ ವಣೆ (ಯ) ೩ ಬಾನ್ (ವ) ೪ ಬುದ (ಗ, ತ) ೫ ಗೆಲ್ (ಗ, ತ) ೬ ಪರಿ (ಚ) ೭ ಲಾವಂ (ಯ) ೮ ಮಿಾಂಗಿಲಿ (ಖ) ೯ ಪರಡಿ (ಜ)

ಚಂಪಕ.

ಶರಭನಿಭಾರಿ ಸೈರಿಭಮಿಭಂ ಬನವಂದಿ ತರಕ್ಷು ಖಡ್ಗಿ ಶಂ
ಬರ ಮೃಗ ಮೇಷಮೇಣಮಜಭೇದನವೃಕ್ಷಮಗೌಕಸಂ ಮೊಲಂ
ಮರೆ ನರಿ ಪೂತಿವೆಕ್ಕು ನಕುಲಂ ಮರವಾವುಗಳೆಂಬಿವಾಗಳುಂ
ಕರಮೆಸೆದಿರ್ಪಿನಂ ಮೆಱೆದುದಾ ವಿಪಿನಂ ವಿಪಿನದ್ಧಕಂದರಂ ೩೪

ಜ್ಯೋತಿರ್ಲತೆಗಳ ರುಚಿಸಂ
ಜಾತಂ ಫಣಿಗಣಫಣಾಮಣಿಪ್ರಭೆ ಬಿಡದು[೧]
ದ್ಯೋತಿಪುದದಲ್ಲದಾ ಖ
ದ್ಯೋತಶಶಾಂಕಾಂಶು ಪುಗದು ತತ್ಕಾನನದೊಳ್ ೩೫

ವಚನ

ಮತ್ತಮಲ್ಲಿ ಬಿತ್ತರಮಾದ ಸಿಂಗರಂಬೆತ್ತು ಬಿನದದಿಂ ಮನದನ್ನನಂ ಸಮ್ಮದಂ[೨] ಮಿಗೆ ನೆರ್ಮಿ ಕುಳ್ಳಿರ್ದ[೩] ಶಶಿಕಾಂತದೊಡ್ಡುಂಗಲ್ಲೊಳ್ ತನ್ನ ಪಡಿನೆೞಲಂ ಕಂಡು ಮೆಯ್ಯಾನ್ದಿರ್ದು ನಿಂದು ಸಪತ್ನಿಯೆಂದು ಬಗೆದು ಮುಳಿದು ಮುಗಿಲ್ವಟ್ಟೆಗೆ ಮೀಱಿ ಪಾಱುವ ಬಿಜ್ಜೋದರಿ ಬಿಗಿದುಟ್ಟ ಸುವರ್ಣಾಂಬರದ ಸೆಱಂಗು ನಿಶಿತಮೊನೆ ಕೊಂಕಿದ ನಿಜಕಂಟಕದೊಳ್ ತೊಡರ್ದು ಸರ್ಱನೆ ಪಱಿದು ಸಿಲ್ಕಿ ಪಸರಿಸಿ ಪವನ ನಲೆಪದಿನೊಲೆದು ಗಿರಿವರನ ನೆಗೞ್ತೆಗೆ ನೇಮಿಸಿದ ಕೇತುಪಟದಂತೆಸೆಯೆ ತದ್ಧ್ವಜ ದೀರ್ಘದಂಡಾಕಾರಮುಂ ತಳೆದು ಬಾಂದಳಮುಂ ಮುಟ್ಟೆ ನಿಮಿರ್ದು ನಿಂದ ವೇಣು ಕಾಂಡದಿಂ; ಕರಿ ಮುಱಿದ ಪೆರ್ಗೊಂಬಿನಿಱುಂಬಿನೊಳೊಱೆತುಗುವ ಪಾಲ ಪಗಿನ ದೊಳ್ ಮಿಗೆ ನೆಗೆವ ಗಗನಚರಿಯ ನಿಡುಜಡೆ ತೊಡಂಕಿ ಜಿಗಿಲ್ತು ತೆಗೆಯಲ್ ಬಾರ ದಿರೆ ಪಾಱುಗೆಟ್ಟು ಬಿಡಿಸಲೊಡರ್ಚುವ ತನ್ನಿತಂಬಿನಿಗೆ ಕುಳ್ಳಿರಲ್ ಕೊಂಬನಿಂಬು ಗೊಟ್ಟು ಸೆಳೆಮಿಂಚಂ ತಳೆದ ಕಾರ್ಮುಗಿಲ ಪಿರಿಯ ಸಿರಿಯನೊಳಕೊಂಡು ಕೆಲ ದೊಳ್ ಕಣ್ಗೊಳಿಪ ತರುಣತಮಾಲದಿಂ; ಪರಿಸರದೊಳ್ ಸಂಚುವೆತ್ತಿಂಚರದಿಂ ತನ್ನ ಚೆನ್ನಕಿನ್ನರಿಯೊಳ್ ಶ್ರುತಿಗೂಡಿ ಪಾಡುವ ಕಿನ್ನರಿಯ ಸರಸಸಂಗೀತಮಂ ಕೇಳ್ದು ಗಡಣಂಗೊಂಡು ಪೆಡೆಯೆತ್ತಿ ನಲಿವ ನಾಗಂಗಳಂ ಕೊನೆಗೊಂಬುಗಳೊಳ್ ತಾಳ್ದು ಮಿನುಗು[೪]ವಡೆದ ಪೆಡೆವಣಿದುಱುಗಲಿಂ ತಳ್ತು ಮಾಣಿಕ್ಯದ ಮರಂಗಳಂತಿ ರಂದಂಬೆತ್ತ ಚಂದನಧರಾರುಹಂಗಳಿಂ; ಶಶಿಶಿಲಾಸದನದೋವರಿಯ ಪೂವಸೆ[೫] ಯೊಳ್ ಸವಿಸುಸಿಲೆಸಗುವ ಖಚರದಂಪತಿಗಳ ಗಳರವದ ಕಳಕಳಮಂ ಕೇಳ್ದು ಗಳಿಲನೆ ತಲೆಯೆತ್ತಿ ನಲಿದುಲಿದಳವಿಗಱಿದೆಳಸುವ ಪರಿವಿಡಿಯ ಪಾರಿವಂಗಳಂ ತಳೆದು[೬] ಮದನಾಗಮದ ಮಂತಣಸಾಲೆಯಂತೆ ಮನೋಜ್ಞಮಾದ ಕುರವಕಾನೋ

೧ ಬಿಡಿದು (ಜ) ೨ ಸಂದು (ಚ, ತ) ೩ ಕುಳ್ಳಿರ್ದು (ತ) ೪ ಮಿರುಗು (ಚ) ೫ ಪೊಸವಸೆ (ಯ) ೬ ತಳೆದ (ಚ)

ಕಹದಿಂ; ಮನಃಪ್ರಿಯನೊಡನೆ ಮನಂಬಂದ ಬಂಧದಿಂ ತನು ಕರಗಿ ತನಿಸುಸಿಲ ಸೊಗದ ಸೊಗಸನನುಭವಿಸಿ ಶಶಿಕರಂ ಸೋಂಕಿದ ಸಸಿಗಲ್ಲ ಪುತ್ತಳಿಯಂತೆ ಬೆಮರ್ತು ಸುರಸುದತಿಯೊರಸಿದ ಬೆಮರ ಪರಿಮಳಮುಂ ತಳೆದು ಪರಿಸರದ ಸುರಯಿಯಲರ್ಗಳ ಸುೞಿದು ಪರಿಮರಿ[೧]ಗೊಂಡೆರಗಿದ ಪಱಿಮೆವಱಿದುಱುಗಲಿಂ ತಳ್ತ[೨] ನಿಱು[೩]ದಳಿರ ನಾಳ್ದ ಕೊಂಬುಗಳಿಂ ಪಣ್ತ ಜಂಬೂಕುಜದಂತೆ ಕಮನೀಯಮಾದಶೋಕದ್ರುಮದಿಂ; ರತಿಮದನರನೋಜೆಯಿಂ ಪೂಜಿಸಲ್ಕೆ ಪೂದಿಱಿಯಲೇಱಿದೇಱುಂಜವ್ವನದ ಸೊಂಪೆಸೆವ ಕಿಂಪುರುಷನಿತಂಬಿನಿಯ ಸಡಿಲ್ದೆೞಲ್ವ ಕಡುನಿಡಿದಾದ ಕೇಶಪಾಶದಿಂ ತೊಡರ್ದು ತಳಿರ್ತ ತಮಾಲಲತೆ ತಳ್ತಂತೆ ಪೆಂಪನಾಳ್ದ ಚಂಪಕಕುಜಂಗಳಿಂ; ಕಾದಲನಗಲ್ದಗಲ್ಕೆಯುರಿಪಂ ಸೈರಿಸಲಾಱದೆ ಹರಣಂಗಳೆಯಲುಜ್ಜುಗಿಸಿ ತುಱುಗಿ ತೀವಿದ ಕೆಂಬೊಗರನಾಳ್ದ ಪೂದೊಡಂಬೆಯ ಮೊಗ್ಗರಮುಂ ಕಂಡು ದವಶಿಖಿಯ ಕೆಂಡದೊಟ್ಟಿಲ್ಗೆತ್ತು ಪೊಕ್ಕ ಸಿದ್ಧಸೀಮಂತಿನಿಯನೊಳಕೊಂಡು ಮದನಪ್ರತಾಪ ಲಕ್ಷ್ಮಿಯುಂ ಪೊತ್ತಂತೆ ಚಿತ್ತಂಗೊಳ್ವ ಕಿಂಶುಕನಿಕುಂಜದಿಂ; ಕಣ್ಬೊಲಂದಪ್ಪಿ ಕಡೆಸರಿದು ತನ್ನನಱಿಸಿ ತೊಳಲ್ವ ಕಾದಲನಂ ಕಾದಲ್ಮೆಯಿಂ ಕಾಡಲೆಳಸಿ ಘೞಿಲನೆ ಬೀೞಲ್ವಿಡಿದಡರ್ದು ನಿಡುಗೊಂಬಿನೆಲೆದುಱುಗಲ ಪೊದಱ ಪೊರೆಯೊಳ್ ಮೆಯ್ಗರೆದಿರ್ದ ಗಂಧರ್ವಸೌಂದರಿ ನೆಲೆವಡೆದಕ್ಷೀಣರೂಪಯಕ್ಷಿಣಿಯಂತೆಸೆಯೆ ಮಿಸುಪ ವಟವಿಟಪಿಯಿಂ; ಬಾನ್ನಟ್ಟೆಯೊಳ್ ಬಿಱುವಿಸಿಲ್ ಬೆನ್ನಂ ಸುಡೆ ಬಿಂಕಂಗುಂದಿ ಬೞಲ್ದು ಬರ್ಪ ಗರುಡದಂಪತಿಗೆ ತಂಪಂ ಪರೆಪಲೆಂದು ವಿಪಿನಲಕ್ಷ್ಮಿ ವಿಲಾಸದಿಂ ಬೀಸಲ್ ನಿಡುದೋಳ್ಗಳಿಂ ನೆಗೆಪಿ ಪಿಡಿದ ವ್ಯಜನ[೪]ಮೆನಿಸಿ ರಂಜಿಪ ಪರ್ಣಪಾಳಿಯಿನೇೞ್ಗೆವೆತ್ತ ತಾಟ ಭೂರುಹದಿಂ; ಪೆಂಪುವೆತ್ತಪರಿಮಿತ ಫಲಪರ್ಣಪುಷ್ಪಗುಚ್ಛಂಗಳಿನತಿನಿಬಿಡತೆಯನಪ್ಪುಕೆಯ್ದು ರವಿಶಶಿಕರಂಗಳೆಡೆಯಾಟಕ್ಕೆ ತೆಱಪುಗುಡದೆ ತಮದ ತವರ್ಮನೆಯೆನಿಸಿ ವಿಚಿತ್ರತರಖಗಮೃಗಂಗಳ್ಗೆ ವಿಹರಣಸ್ಥಲ[೫]ಮಾಗಿ ಮಹಾಗಹನಮೊಪ್ಪಿರ್ದುದಲ್ಲಿ.

ಮತ್ತೇಭ.

ಮೊೞಗಂ ಬೃಂಹಿತಮೆಂದು ತಳ್ತ ಕುಡಿಮಿಂಚಂ ಕೋಡಿದೆಂದಣ್ಮಿ ಪೆರ್
ಮೞೆಯಂ ಸೋರ್ವ ಮದಾಂಬುವೆಂದು ಬಗೆದಂದಂಭೋದಮಂ ದಂತಿಯೆಂ
ದಳಿಪಿಂ ಪಾಯ್ದು ವಿಲಂಘಿಸುತ್ತುಗುರ್ಗಳಿಂ ಪೊಯ್ದುತ್ತದಂ ಮೌಕ್ತಿಕಾ
ವಳಿ ಝುಲ್ಲೆಂದುಗೆ ಭೀಮಗರ್ಜನಮಿಳತ್ಕಂಠೋಗ್ರಕಂಠೀರವಂ ೩೬

೧ ಪರಿಮಳಂ (ಚ) ೨ ತಳೆದು (ಚ)
೩ ನಿಡು (ಯ) ೪ ಬಿಜ್ಜಣ (ಯ)
೫ ಸ್ಥಾನ (ಕ)

ನಿಡುಗಟ್ಟಿಲೆಯ ನೊನೆಯುರ್ಚಿದ
ಜಡಧರವೆಸೆದುದು ನಗಾಹಿತಪ್ರಣಿಧಿಯಿದೆಂ
ದಡರ್ದತಿರೋಷದಿನಾ ಗಿರಿ
ತೊಡರ್ಚಿ ಪಿಡಿದುಗ್ರಶೂಲದೊಳ್ ತೋಱುವವೋಲ್ ೩೭

ಒರಸೆ ಕರಿ ಕಟವ ಮದದಿಂ
ಪೊರೆಮರುಚಂದನಸಮೊಳೆಱಗಿ ನಿಂದಳಿಕುಳಮಂ
ಹರಿನೀಲಮೆಂದು ತಿಱಿಯಲ್
ಸುರತರುಣಿ ತುಡುಂಕಿ ಸಖಿಯನೇಂ ನಗಿಸಿದಳೋ ೩೮

ಜರದಜಗರಮಂ ಕರದಿಂ
ಕರಿ ಪಿಡಿದಿಡೆ ನಭದೊಳದು ವಿಧುಂತುದನೆಂತಂ[೧]
ತಿರೆ ಪಾಯ್ದುದು ಮುನ್ನುಂಗಿದ
ಪುರೆಯಡಗುಚ್ಚಳಿಸೆ ಮುಖದಿನಳಱಿ ದಿನೇಶಂ ೩೯

ಹರಿ ಬೆಸಸಿದೊಡಾರ್ದೆಱಗಿ
ರ್ದರಿಜಳಧರಭಟನ ಮಿಂಚೆನಿಪ್ಪಸಿಲತೆಯಂ
ಗಿರಿ ಸೆಳೆದೊಳಗಿಟ್ಟಂತಿರೆ
ಕರಮೋಷಧಿ[೨]ಲತೆಯದೇಂ ಮನಂಗೊಳಿಸಿದುದೋ ೪೦

ಚಂಪಕ.

ಪದಗೊಳಿಸುತ್ತೆ ದಾನರಸದಿಂ ರಸೆಯಂ ಮದಭೃಂಗಮಾಲೆಯಂ
ಕೆದಱುತೆ ಕರ್ಣವಾಳ[೩]ದೆಲರಿಂ ಬಿಸಕಾಂಡಮಿದೆಂದು ಚಂದ್ರಕಾಂ
ತದೊಳಿದಿರಲ್ಲಿ ಮಾರ್ಪೊಳೆವ ತನ್ನಯ ಕೊಂಬನೊಱಲ್ದು ನೋಡುತುಂ
ಮೃದುಗತಿಯೊಪ್ಪೆ ತೂಗಿ ತೊನೆದಾಡುತೆ ಬಂದುದದೊಂದು ಸಿಂಧುರಂ ೪೧

ಕೊಳಮೊಳೆ ಕಿಟ್ಟು ಪಂಕರುಹಮಂ ಪ್ರತಿಮಾನದೊಳೊಟ್ಟಿಕೊಂಡು ಪಾ
ಯ್ವಳಿಗಳನಗ್ರಪಲ್ಲವದೆ ಸೋವುತೆ ಪಂಕಜರೇಣು ತಳ್ತ ಮಂ
ಜುಳರದನಂ ತೆಱಂಬೊಳೆಯೆ ಶೈವಲವಲ್ಲರಿ ಪತ್ತಿ ವಕ್ಷದೊಳ್
ಮಿಳಿರೆ ಕರೇಣುವಿರ್ದೆಡೆಗದೇಂ ತಳರ್ದತ್ತೊ ಮದಾಂಧಸಿಂಧುರಂ ೪೨

೧ ನೆಂಬಂ (ಯ) ೨ ಕರಮೆಸೆದೀ (ಚ)
೩ ಕರ್ಣತಾಳ (ಯ)

ಮತ್ತಮಲ್ಲಿ,

ಪಿಡಿಯ ಮೊಲೆಯುಂಡು ತಣಿಯುತೆ
ಕಡೆವಾಯೊಳ್ ಪಾಲ ಧಾರೆ ಮೊಳೆವಲ್ಗಳವೋಲ್
ಬಿಡದೆಸೆಯೆ ಮುದ್ದುವೀಱು
ತ್ತಡಿಯಿಡುವುವು ಪಲ್ಲಮುಱಿಯ ಮಱಿಗಳ್ ವನದೊಳ್ ೪೩

ಎರಡುಂ ಕಡೆವಾಯೊಳ್ ತ
ಳ್ತಿರೆ ಬಿಸಕಾಂಡಂಗಳೆರಡುರದನದ ಬಟು ಸಂ
ದುರುಜಳಫೇನವಳಕ್ಷಂ
ಕರಮೆಸೆದುದದೊಂದು ದಂತಿ ಚೌದಂತನವೋಲ್ ೪೪

ವಚನ

ಇಂತು ಸಂತತಮೊಪ್ಪುವ ಕಾಂತಾರದಂತರಾಳದೊಳ್ ಬಿಯದರ್ ಬೇಂಟೆಯಾಡಲೆಂದು ಸಂಭ್ರಮಂ ಮಿಗೆ ಸರುವಿಡಿದು ಪಣೆಯಿರ್ಪೆಡೆಗೆಯ್ತಂದು ನಿಂದು ನೆರೆದು ಪರೆದು,

ನೊರೆ ತುಪ್ಪುಟ್ ಕೊಳಗು ಕೆಸಱ್
ನೊರಜುಗಳುಗುರಡರ್ದ ಸೊವಡು ಪಜ್ಜೆಗಳಂ ಪಾ
ಯ್ದಿರದಱಿಸಿ ನೋಟ್ಟಿ ಬಿಯದರ್
ತ್ವರಿತದಿನಲ್ಲಲ್ಲಿ ಪರಿದರಾ ಪೆರ್ಗಾಡೊಳ್ ೪೫

ಚಂಪಕ.

ಮದರಸಮೊಕ್ಕುದಿಲ್ಲಿ ಕರಿ ಪೋದುದು ಸಿಂಗದ ಬಟ್ಟೆ ನೋಟಿಪ್ಪೊಡಿಂ
ತಿದು ಗಜಮೌಕ್ತಿಕಂ ಸಿಡಿದುದಿಲ್ಲಿ ಲುಲಾಯದ ಮಾರ್ಗಮಪ್ಪುದಾ
ಸ್ಯದ ನೊರೆ ಬಿಟ್ಟುದಿಲ್ಲಿ ಕೆಸಱೆರ್ದಪುದಿಲ್ಲಿ ವರಾಹಮೆಯ್ದಿದ
ತ್ತಿದಿರೊಳೆ ಪುಲ್ಲೆ ಪಾಯ್ದೆಡೆಯಿದಪ್ಪುದು ಸೂಸಿದುವಾ[1]ಸ್ಯದೂರ್ವೆಗಳ್ ೪೬

ವಚನ

ಎಂದು ಪಲವಜ್ಜೆಯಂ ಪರೀಕ್ಷಿಸಿ,

ಚಂಪಕ.

ಕರಿಗೆ ಕರಾಗ್ರಮಂ ನೆಗೆಪಿ ಕೋಟ್ಟಾಗ್ರಕಿರ್ವೆರ[2]ಲೆತ್ತಿ ಸಿಂಹಕೊ
ಪ್ಪಿರೆ ರಸನಾಗ್ರಮಂ ತೆಱೆದು ಕೆಯ್ಯೆರಡಂ ನಿಮಿರ್ದೆತ್ತಿ ಬಗ್ಗಕೆ
ಟ್ತಿರದ ಕುರುಳ್ಗಳಂ ಪರೆಪಿ ಜಲ್ಲಿಮಿಗಕ್ಕೆ ವರಾಹಯೂಥಮೇ
ಟ್ತಿರೆ ಮಣಿಕಾಲ್ಗಳಂ ಮಡಿದು[3] ತೋಱಿದರೊಯ್ಯನೆ ಸನ್ನೆವೇಂಟೆಯೊಳ್ ೪೭

೧ ಸೂಸಿದುದಾ (ಕ, ತ) ೨ ಕಿರ್ಬೆರ (ಕ) ೩ ಮಣಿದು (ಯ)

ಚಂಪಕ.

ಸರಳಿಸುವೇಣನೋಡುವ ಮೊಲಂ ಬಗೆಗುಂದುವ ಖಡ್ಗಿ ನಿಲ್ವ ಸೂ
ಕರನಡಿಗೊಳ್ವ ಪೆರ್ಮರೆಯಡಂಗುವ ಪೆರ್ಬುಲಿ ಕಣ್ದೊಟಲ್ವ ಬಲ್
ಗರಡಿ ಕಡಂಗಿ ಮೆಯ್ಮುರಿವ ಕೇಸರಿಯಾಲಿಪ ದಂತಿ ಪಾಱಿ ಸಯ್
ವರಿವ ಖಗಾಳಿಯೊಪ್ಪೆ ಪಿರಿದಾದುದು ಬೇಂಟೆಯ ವಾದ್ಯದಬ್ಬರಂ ೪೮

ಮತ್ತಮಾಗಳ್,

ಮಹಾಸ್ರಗ್ಧರೆ

ನಡೆ ಸಾರ್ ಮುಂದೆಯ್ದು ಬೆಳ್ಳಾರಮನೆ ಬಿಗಿ ನಿಕುಂಜಂಗಳಂ ಸೋದಿಸಂಬಂ
ಬಿಡು ನೀರ್ದಾಣಂಗಳೊಳ್ ನಿಲ್ ಪಸರಿಸು ಬಲೆಯಂ ಪಜ್ಜೆಯಂ ನೋಡು ನೀಂ ಪೇ
ರಡಿಯಂ ಕೆಯ್ಸನ್ನೆಗೆಯ್ ನಿಂದೆಱಗದಿರುಲಿಪಂ ಮೆಲ್ಲನಾಕರ್ಣಿಸೊಳ್ಪಿಂ
ದಡರುದ್ಯದ್ಭೂಜಮಂ ಮಾರ್ಗಮನೆ ತಡೆವುದೆಂಬಬ್ಬರಂ ಪರ್ಬಿತೆತ್ತಂ ೪೯

ಮತ್ತಂ,

ಚಂಪಕ.

ಬಡಿಯುಡುವಂ ತೊಡಂಕದಿಡು[1] ಪೆರ್ನೊಲನಂ ಬಲೆವೀಸಿ ಪುಲ್ಲೆಯಂ
ಕೆಡೆಪು ಲುಲಾಯಮಂ ತಱಿ ಪೊದಟ್ದಿಸು ದಂತಿಯನಾರ್ದು ಖಡ್ಗದಿಂ
ಕಡಿ ಪುಲಿಯಂ ಕರುತ್ತಿಱಿ ವರಾಹನನಿಟ್ಟೆಯೊಳುಗ್ರಸಿಂಹಮಂ
ಪೊಡೆ ಬಿಡದಣ್ಮಿ ಕೂರಸಿಯಿನೆಂಬ ರವಂ ಪಿರಿದಾಯ್ತರಣ್ಯದೊಳ್ ೫೦

ನಡುಗುವ ಕಾಲ್ಗಳುಬ್ಬರಿಪ ಕಿಬ್ಬರಿ[2]ಗಳ್ ಪೊಡೆವಳ್ಳೆ ಬಾಯ್ಗಳಿಂ
ಕಡೆಗುಗುತಿರ್ಪ ದೂರ್ವೆ ಬೆದರ್ದೀಕ್ಷಿಪ ನೀಳ್ದಲರ್ಗಣ್ ಪೊದಟ್ದಿ ಸುಯ್
ಬಿಡದಿರೆ ನೀಟ್ದಿ ಕೋಡಲುಗೆ ಬತ್ತಿದ ಬಾಯ್ವೆರಸಲ್ಲಿ ಭೀತಿ ಕೆಯ್
ಗುಡೆ ಕಡುವೇಗದಿಂದೆ ಕೊಣಕಿಟ್ಟುದು ವನ್ಯಮೃಗೀಕದಂಬಕಂ ೫೧

ಉತ್ಪಲ.

ನೀಡಡಿಗೊಂಡು ನಿಂದು ಡೊಣೆಯಿಂ ಕಣೆಯಂ ತೆಗೆದಾರ್ದು ಬಿಲ್ಗದಂ
ಪೂಡಿ ಪೊಡರ್ಪುವೆತ್ತು ಕಟಕಾಮುಖ[3]ದಿಂ ಸೆಳೆದುರ್ವಿ ಲಕ್ಷ್ಯಮಂ
ನೋಡಿ ಕಟಾಕ್ಷಮಂಬುಮುದಿಯೊಂದಿರೆ ತೆಳ್ಪಡು ಬಳ್ಳೆ ಗಾಡಿ ಕೆಯ್
ಗೂಡಿರೆ ತೊಟ್ಟನೆಚ್ಚು ಮೃಗವೃಂದಮನಿಕ್ಕಿದರಲ್ಲಿ ಭಿಲ್ಲಿಯರ್ ೫೨

೧ ತೊಡಂಕುತಿಡು (ಕ)
೨ ಕಿಬ್ಬರಿ (ಯು)
೩ ಕಾರ್ಮುಕ (ಕ)

ಚಂಪಕ.

ಪಸರಿಸಿ ಪತ್ತಿ ಧಾತ್ರಿಗೆ ಕುನುಂಗಿ ವಿಲಂಘಿಪ ಮಾನವಮಂ ಪರೀ
ಕ್ಷಿಸಿ ತೆಱೆದಿರ್ದ ಬಾಯ್ ನಿಮಿರ್ದ ಗೋಣೆಮೆಯಿಕ್ಕದ ಪಿಂಗಳಾಕ್ಷಿ ಸುಯ್
ಮಿಸುಕದ ಮೂಗು ಸುರ್ಕುಗಿವಿ ಭೂಮಿಯೊಳಾಡಿಪ ಬಾಲವೊಪ್ಪೆ ಗ
ರ್ಜಿಸಿ ಮಿಗೆ ಪಾಱೆ ಮೇಲ್ವರಿವ ಬಗ್ಗಮನಿಕ್ಕಿದನುಗ್ರಲುಬ್ಧಕಂ ೫೩

ಒದೆದಿಳೆಯಂ ಪುಟಂ ನೆಗೆದು ಗರ್ಜಿಸಿ ಮುಂದಣ ಕಾಲ್ಗಳಿಂದೆ ಕಾ
ಯ್ದೊದವೆ ಭುಜಾಗ್ರದೊಳ್ ನಡೆ ನಖಂ ಪೊಡೆದುಗ್ರತೆಯಿಂ ಸಿರಕ್ಕೆ ಪಲ್
ದುದಿಯನವುರ್ಚುತವ್ವಳಿಪ ಬಗ್ಗದ ಗಂಡಿಕೆಗಂಡು ನೆತ್ತಿಯ
ಗ್ರದೆ ಮೊನೆಯುರ್ಚೆ ಕೆಯ್ಸುರಿಗೆಯಿಂಡಿರದಿಕ್ಕಿದನಾ ವನೇಚರಂ ೫೪

ಮತ್ತೇಭ.

ನೆಲನಂ ಪೊಯ್ದು ಬೆರಂಟುತಗ್ರಪದದಿಂ ಕೆಂಗಣ್ಗಳಿಂ ನೋಡುತುಂ
ಮಲೆಯುತ್ತುಂ ಮದವೇಱೆ ಮಾಮುಸಕದಿಂದಂ [೧]ಮೋಱೆಯಂ ಬಾಗಿ[೧]ಮೂ
ಗಲರುತ್ತುಂ ಸುಱುಕಿಟ್ಟು ಸೂಸೆ ನೊರೆ ಬಾಯಿಂ ಬಾಲಮೆತ್ತುತ್ತೆ ಕೋ
ಡಲುಗುತ್ತುಂ ಪುಟವೆಟ್ಟು ಪಾಯ್ದುದಿದಿರೊಳ್ ಶೈಲಪ್ರಭಂ ಸೈರಿಭಂ ೫೫

ಅದಿರದಿದಿರಾಂತು ರೊಂಕಿ
ಟ್ಟೊದಱುತ್ತುಂ ಬರ್ಪ ಕಾಡ ಕೋಣನ ಗೋಣಂ
ಮದಯುತನೊರ್ವಂ ತಱೆದಿ
ಕ್ಕಿದನಾರ್ಪಿಂ ನಿಶಿತಖಡ್ಗದಿಂದೆ ಪುಳಿಂದಂ ೫೬

ಮತ್ತಮೊರ್ವಂ,

ಮತ್ತೇಭ.

ಮರಗೊಂಬಂ ಮುಱೆದಾಂತು ನೀಳ್ದ ಕರದಿಂ ಕಾಯ್ಪೇಱುತುಂ ಸೋರ್ವ ದಾ
ನರಸಾಸಾರದೆ ಸೀಯೆ ಮಾರ್ಗದ ತೃಣಂ ಕೆಂಗಣ್ಗಳಿಂ ನೋಡಿ ನಿ
ರ್ಭರದಿಂ ಗರ್ಜಿಸಿ ಕೋಡೊಳೀಡಿಱೆಯಲಾರ್ಪಿಂ ಬರ್ಪ ಸಂದೃಪ್ತಸಿಂ
ಧುರಮಂ ಪಾಯ್ದು ಪಳಂಚಿ ಪೊಯ್ದನಸಿಯಿಂ ಧೀರೋತ್ತಮಂ ಧೀವರಂ ೫೭

ನೀಡಿದ ಭರಿಕೆಯ್ವಿಲದೊಳ್
ಕಾಡೊಡೆಯಂ ಪೊಡೆದ ಬಾಣಮಿಭಮಸ್ತಕದೊಳ್
ಮೂಡಿದುದು ನೆತ್ತಿ ಮುತ್ತೊಡ
ಗೂಡಿರೆ ಸುಗಿದಗಿದು ಬಿಟ್ಟುದಾ ಗಜಮಿಳೆಯೊಳ್ ೫೮

೧-೧ ಮೋರೆಯಿಂಬಾಗಿ (ಗ, ತ)

ವಚನ

ಪೆಱತೊಂದು ತಾಣದೊಳ್,

ವನಚರನೆಚ್ಚಂ ಕರಮುಂ[1]
ವಿನುತರದದ್ವಯಮುನೊಡನೆ ಪಡಲಿಡೆ ಕರಿ ತಾ
ನೆನಸುಂ ಪೋಲ್ತುದು ಸುರಿವರೆ[2]
ಘನರುಧಿರಂ ರುಧಿರವೃಷ್ಟಿಗಱೆವಂಬುದಮಂ ೫೯

ಕರಿಯ ಗುರುಕುಂಭಮುಂ ತ
ನ್ನರಸಿಯ ಕುಚಕುಂಭಮೆಂದು ಪರಿಕಿಪ ಶಬರಂ
ಶರದಿಂದೆಚ್ಚಂ ಹರಿಯದ
ಕಿರವೆಱಗೆ ತದೀಯಮುಸ್ತಕಂ ಪಱಿವಿನೆಗಂ ೬೦

ಮತ್ತೇಭ

ನಡೆಗಲ್ತಂಜನಶೈಲದಂತೆ ಪದೆದೇಟ್ಟಿರ್ಪಾನೆಯಂ ಕಂಡು ಬಲ್
ಸಿಡಿಲೆಂತಂತಿರೆ ಗರ್ಜಿಸುತ್ತಡರ್ದದಂ ತತ್ಕುಂಭಮುಂ ಸೀಳ್ದು ಕಾ
ಯ್ಪಿಡಿದುದ್ಯದ್ದ್ವಿಪವೈರಿಯರ್ಗಳಸಿರಂ ಬೀಟ್ವಿಂತಿರೆಚ್ಚಂ ಜವಂ
ಗೆಡದರ್ಧೇಂದುಮುಖಾಸ್ತ್ರದಿಂ ರುಧಿರಮೆತ್ತಂ ಪಾಯ್ವಿನಂ ಧೀವರಂ ೬೧

ಮಹಾಸ್ರಗ್ಧರೆ

ಕುಡಿವಾಲಂ ನೆತ್ತಿಯೊಳ್ ಮಿಳ್ಳಿಱಿಯೆ ಪೊಳೆಯೆ ಕೂರ್ದಾಡೆ ಕೆಂಗಣ್ಗಳಿಂ ಕೆಂ
ಗಿಡಿ ಸುತ್ತಂ ಸೂಸೆ ಪೆರ್ಮೂಗಲರೆ ತೆಱೆವ ಬಾಯ್ ಭೀತಿಯಂ ಬೀಱೆ ಕಾಯ್ಪಿಂ
ಪಡೆದಾರ್ಪಿಂ ಗರ್ಜಿಸುತ್ತುಂ ಕೆಳರ್ದು ಕೆದಱುತುಂ ಕೇಸರವ್ರಾತಮುಂ ಮುಂ
ಗಡೆಯೊಳ್ ಪಾಯ್ತುಂದುದುದ್ಯತ್ಪದನಖವಿದಳತ್ಕುಂಜರೇಂದ್ರಂ ಮೃಗೇಂದ್ರಂ ೬೨

ಅತಿರೌದ್ರಾಕಾರದಿಂದುತ್ಕಟಿಸಿ ಮುಳಿದು ತಿಂಬಂದದಿಂ ನೋಡಿ ಶೌರ್ಯೋ
ನ್ನತಿಯಿಂ ಮುಂಗಾಲ್ಗಳಂ ಮುನ್ನೆಗೆಪುತುಗುರ್ಗಳಿಂ ಪೊಯ್ದು ಮೇಲ್ವಾಯ್ದು ಗರ್ವೋ
ದ್ಧತಗರ್ಜತ್ಸಿಂಹಮುಂ ಬೀೞೆನುತೊಗೆದದಟಿಂ ಖಡ್ಗದಿಂ ಪೊಯ್ದನತ್ಯ
ದ್ಭುತಸತ್ತ್ವಂ ಧಾತ್ರಿಯೊಳ್ ತಚ್ಛಿರಮುರುಳೆ ಕನಲ್ದೊರ್ವಸುದ್ಯತ್ಕಿರಾತಂ ೬೩

ವಚನ

ಇಂತು ಕಾಂತಾರಾಂತರಾಳದೊಳ್ ಪುಳಿಂದನಿಳಿಂಪರ್ ಪಲವೇಂಟೆಯಾಡುತ್ತುಮಿರೆಯಿರೆ,

[1] ಕರಿಮುಂ (ಜ); ಶರಮುಂ (ಯ)
[2] ತರೆ (ಯ)



ದಾ. ವೀ. ಹಾಲಬಾವಿ **ಕಿರಾತವೇಷದಲ್ಲಿಯ ಶಿವ-ಪಾರ್ವತಿಯರು ಮಂದಾರವೃಕ್ಷದ ನೆಳಲಲ್ಲಿ ವಿಶ್ರಮಿಸಿದುದು** ಲಿಂಗರಾಜ ಪ್ರೆಸ್, ಧಾರವಾಡ

– ಶಬರಶಂಕರವಿಳಾಸ (ಆ. ೩, ಪ. ೬೩)

ಮಹಾಸ್ರಗ್ಧರೆ

ವಿಳಸನ್ಮಂದಾರಭೂಜಾತದ ಬಿಟಿನೆಟಲೊಳ್ ನಿಂದು ಚಂದ್ರಾಶ್ಮಪೀಠ
ಸ್ಥಳದೊಳ್ ಪೂಗೊಂಚಲೊಂದಂ ಪಿಡಿದಡಿಗಡಿಗಾಘ್ರಾಣಿಸುತ್ತೊಲ್ಮೆಯಿಂ ಚೆಂ
ದಳಿರುದ್ಯತ್ತಾಲವೃಂತಂಬಿಡಿದು ಪದೆಪಿನಿಂ ಬೀಸೆ ಕಲ್ಯಾಣಿ ತಾಂ ಕಣ್
ಗೊಳಿಸಿರ್ದ೯ ನೋಡುತುಂ ಬೇಂಟೆಯ ಪೊಸಪರಿಯಂ ಲೀಲೆಯಿಂ ಭಾಳನೇತ್ರಂ

ಗದ್ಯ

ಇದು ನಿಖಿಲ[೧]ಭುವನೈಕವಲ್ಲಭಸುರಾಸುರೇಂದ್ರವರದಕರುಣಾವರಣಪರಮಶಿವಲಿಂಗ ತರುಣಪತಂಗಸಂಗತಮಂಗಳಹೃದಯಾರವಿಂದಬಂಧುರ ಸರಸಸಜ್ಜನ[೨]ಮಾನಿತೋಭಯ ಕವಿತಾವಿಚಕ್ಷಣ[೩] ಶ್ರೀಷಡಕ್ಷರಿದೇವ ವಿರಚಿತಮಾದ ಕಿರಾತರುದ್ರಲೀಲಾಕಥನವಿಪುಳ ಪ್ರಬಂಧದೊಳ್ ಆರಣ್ಯಮೃಗಯಾವರ್ಣನಂ ತೃತೀಯಾಶ್ವಾಸಂ ಪರಿಸಮಾಪ್ತಂ.

೧ ಸಮಸ್ತ (ಚ, ಜ)
೨ ಸರಸಜನ (ಯ)
೩ ವಿಶಾರದ (ಯ)

# ಚತುರ್ಥಾಶ್ವಾಸಂ

ಶ್ರೀಕಾತ್ಯಾಯನಿಯರಸಂ
ಗೋಕರ್ಣಾಧೀಶಕಟಕನನುಪಮನಭವಂ
ಲೋಕೈಕಪ್ರಭು ಪರಮಕೃ
ಪಾಕರನೆಮಗೀಗೆ ಸೌಖ್ಯಮಂ ಶಿವಲಿಂಗಂ ೧

ಮತ್ತಮಾಗಳ್,

ಚಂಪಕ.

ಅತಿಬಳಮೂಕದಾನವನೆನಿಪ್ಪವನೊರ್ವನಖರ್ವಗರ್ವಸಂ
ಯುತನವನೀಧರೇಂದ್ರದ ನಿತಂಬದಿಜೃಂಬಿಸೊಳಿರ್ದು ನಿರ್ಜರ
ಪ್ರತತಿಯ ಪರ್ಬಿದಬ್ಬರಮನಾಲಿಸಿ ತಿಂದಪೆನೀ ಸುಪರ್ವಸಂ
ತತಿಯನೆನುತ್ತೆ ತಾಳ್ದು ಪೊಱಮಟ್ಟನುದಗ್ರವರಾಹರೂಪಮಂ ೨

ಇದು ಸಿರದಲ್ಲಿ ಕೋಡೊಗೆಯದಂತಕಸ್ಯೈರಿಭಮೋ ಬಟಿಕ್ಕಮಿಂ
ತಿದು ಭರಿಕೆಯ್ಯನಾನದ ಮಹಾಗಜದಾನವನೋ ವಿಚಾರಿಪಂ
ತಿದು[೧] ನಡೆಗಲ್ತು ಸಂಚರಿಪ ಮೇಚಕಶೈಲಮೊ ಸಾರ್ದು ನೋಟಿಕ್ಕೊಡಿಂ
ತಿದು ಪೃಥುಕಾಯಸೂಕರನೊ ಪೇಟಿನೆ ತೋರಿದುದಾ ವರಾಹಕಂ ೩

ಮತ್ತೇಭ.

ಬಡಬಜ್ವಾಲೆಯ ವಿಸ್ಫುಲಿಂಗತತಿಯೆಂಬಂತಿರ್ಪ ಕಣ್ ಚಕ್ರದಿ
ರ್ಕಡೆಯಂ ಬಾಯೊಳಿಱುಂಕಿದಂತೆ ಪೊಳೆಪಿಂ ಕೊಂಕಿರ್ದ ಕೊರ್ದಾಡೆ[೨] ಬಲ್
ಸಿಡಿಲುದ್ಯದ್ವ್ರವಮಾಳ್ದ ಭೀಕರಮುಖಂ ಕಲ್ಪಾಬ್ದಮಂ ಪೋಲ್ವ ಕಾ
ರೊಡಲತ್ಯದ್ಭುತಮಾಗೆ ಬಂದುದು ಮಹಾರೋಷಾಕರಂ ಸೂಕರಂ ೪

ಚಂಪಕ.

ಖರಖುರಘಾತದಿಂದೆ ಪುಡಿಯೇಱೆ ಶಿಲಾತಳಮೊತ್ತಿ ಮೆಟ್ಟೆ ಮೆ
ಯ್ಯೆರಸೆ ಬೃಹತ್ಕುಜಪ್ರತತಿ ಸುರ್ಗೆ ವಿಜೃಂಭಣಮಾಳ್ದು ಗರ್ಜಿಸು
ತ್ತುರುತರಪರ್ವತಂ ಪ್ರತಿರವಂಗುಡೆ ಬೆರ್ಚಿಸಿ ತನ್ನಗೇಂದ್ರಕಂ
ದರಮೃಗರಾಜಿಯಂ ಜವದಿನೇಱ್ತುರುತಿರ್ದುದು ಸೊರ್ಕಿದೆಕ್ಕಲಂ ೫

ವಚನ

ಆ ಕಟಕದೊಳಿಂತು ಬರ್ಪ ಕಿಟಿಯಂ ಕಟ್ಟಿನೆ ಕಂಡು,

೧ ದಿದು (ಯ) ೨ ಕೋರ್ದಾಡೆ (ಚ)

ಚಂಪಕ.

ಎಲೆ ಎಲೆ ಪಂದಿ ಪಂದಿ ಮಿಗೆ ಬಂದುದು ಬಂದುದು ಭಿಲ್ಲರೆಲ್ಲರಂ
ಬಲಿಗೊಳಲೆಂದು ಮೃತ್ಯು ಕಿಟಿರೂಪಮನಾಳ್ದವೊಲೊತ್ತು ಪತ್ತು ನಿಲ್
ತೊಲಗದಿರಟ್ಟು ಕುಟ್ಟು ತಿವಿ ಕೊಲ್ ತಱಿ ಗೋಣ್ಮುಱಿ ತುತ್ತು[೧]ಸೀಳ್ ಪಳಂ
ಚಲಸದೆ ಪೊಯ್ ಕರುತ್ತಿಱಿಯೆನಿಪ್ಪ ರವಂ ಪಿರಿದಾಯ್ತು ಬೇಡರೊಳ್ ೬

ವಚನ

ಎಂದು ಸೌ[೨]ರಂಭದಿಂ ಮುಟ್ಟೆ ಮೂದಲಿಸುತ್ತೊಟ್ಟಜೆಯಿಂ ತೊಟ್ಟನಿಟ್ಟೆಗಳಂ ತಾಳ್ದು ಕಟ್ಟುಬ್ಬಟೆಯಿಂ ಕವಿದ ದಿಟ್ಟಬಿಯದರ್ ಪರ್ಬಿದಬ್ಬರಮನಾಲಿಸಿ ಕನಲ್ಕೆ ಮಿಗೆ ದಾಡೆಯಂ ಮಸೆದಂಡುಗೊಂಡು ತೃಣಮಂ ತುಂಡಿಸಿ ಬಾಲಂ ನಿಮಿರೆ ಕಾಲಂ ತೂಗಿ ಪಟುತರಶೌರ್ಯದಿಂ ಪುಳಿಂದನಿಳಿಂಪರ್ಗಭಿಮುಖಮಾಗಿ ನಿಂದು,

ಚಂಪಕ.

ನಡುಗೆ ಧರಿತ್ರಿ ದಿಕ್ಕರಿಗಳಳ್ಕೆ ಭಯಂಗೊಳೆ ಸತ್ತ್ವಸಂಕುಳಂ
ಪಡಲಿಡೆ ಶೈಲಶೃಂಗತತಿ ತುಳ್ಕೆ ಮಹಾಬ್ಧಿ ಕರಾಳಘೋಷದಿಂ
ಘುಡುಘುಡುಸುತ್ತೆ ದಾಡೆಗಡಿದುರ್ಬೆ ಕಡಂಗುತೆ ಕಾಯ್ಪುವೆತ್ತು ಕಣ್
ಗಡೆ ಕಿಡಿಸೂಸೆ ನೋಡಿದುದು ನಿಂದು ಪುಳಿಂದರನುಗ್ರಸೂಕರಂ ೭

ಪೊಗೆ ಪೊಱಸೂಸೆ ಘೂರ್ಮಿಸುವ ಮೂಗಿನೊಳೀಕ್ಷಿಪ ಲೋಹಿತಾಕ್ಷಿಯಿಂ
ಭುಗಿಲೆನೆ ಪೊಣ್ಮೆ ದಳ್ಳುರಿ ಕರಂ ಮಸೆದಗ್ಗದ ದಾಡೆಯುಗ್ರದಿಂ
ದುಗುತಿರೆ[೩] ತೋರಕೆಂಗಿಡಿಗಳುಗ್ರತೆಯಿಂ ತಳೆದುರ್ಕೆ ಸೊರ್ಕಿನಿಂ
ದಗಲದೆ ನುಂಗಲವ್ವಳಿಸಿದತ್ತು ವರಾಹಕನಾ ಕಿರಾತರಂ ೮

ಕುಸಿದ ಸಿರಂ ಕೆಲಕ್ಕೊಲೆದ ಬಲ್ಮುಸುಡುರ್ಬಿದ ಮೆಯ್ಯ ರೋಮಮಾ
ರ್ಪೆಸೆವ ಮನಂ ಮರಲ್ದ ಕಿವಿ ಮಿಳ್ಳಿಱಿದಾಡುವ ಬಾಲಮುರ್ವಿ ಪಾ[೪]
ಯ್ವುಸಿರೊಡನೆಟ್ಟಿ ಬೆನ್ ಬಲಿದ ಗೋಣ್ ಕಿಡಿಪಾಱುವ ದಾಡೆ[೫]ತಳ್ತಗು
ರ್ವಿಸೆ[೫] ಮಲೆದುರ್ಕಿ ಗರ್ಜಿಸಿ ಕರಂ ಪರಿತಂದುದು ಪಂದಿ ಕಾಯ್ಪಿನಿಂ ೯

ಟೊಣೆದವರೆಚ್ಚ ಕೂರ್ಗಣೆಗಳಂ ಮಿಗೆ ಮುತ್ತಿದ ಜಾಯಿಲಂಗಳಂ
ಕ್ಷಣದೊಳಿದಿರ್ಚಿ ತುಂಡಿಸಿ ಕರುತ್ತಿಱಿವಿಟ್ಟಿಯ[೬]ನಂಡುಗೊಂಡು ಬಿ
ನ್ನಣವೆ ಬಿದಿರ್ಚಿ ನಿರ್ಭರದೆ ಪೆರ್ಬಲೆಯಂ ಪಱಿದಿಕ್ಕಿ ಕೇಣದಿಂ
ಕೆಣಕಿದ ಧೀವರಾಮರರನೆಕ್ಕಲನುರ್ಬತೆ ಸೀಳ್ದುದಾರ್ಪಿನಿಂ ೧೦

ಮತ್ತಂ,

೧ ಕುತ್ತು (ಯ) ೨ ಸಂ (ಯ) ೩ ತರೆ (ಯ) ೪ ಪೊ (ಗ, ಚ, ಜ) ೫-೫ ತಳ್ತು ಗೂರ್ಮಿಸೆ (ಕ, ಗ, ಜ) ೬ ದಿಟ್ಟಿಯು (ಕ)

ಚಂಪಕ.

ನೆರೆದಿದಿರಾದೊಡಟ್ಟುವ ಪೊದಟ್ಟಿರೆಯಟ್ಟಿದೊಡಂಡುಗೊಳ್ವ ಪಾ
ಯ್ತರೆ ಮುಸುಡೆತ್ತಿ ಗರ್ಜಿಪ ಕೆಲಂದೊಲಗುತ್ತಿರೆ ದಾಡೆಗುಟ್ಟಿ ನಿ
ರ್ಭರದೆ ಪಳಂಚಲವ್ವಳಿಪ ಬೊಬ್ಬಿಱಿಯುತ್ತಿರೆ ಮೆಯ್ಯ ರೋಮಮು
ಬ್ಬರಿಸೆ[1] ಕಡಂಗಿ ನಿಲ್ವ ಬಗೆ ಮೊಕ್ಕಳಮಾದುದು ಸೂಕರೇಂದ್ರನಾ ೧೧

ಮಲೆವ ಮರಲ್ವ ಜಿಕೊಪ್ಪುವ ಮಲಂಗುವ ಪೊಂಗುವ ತಳ್ತು ಪಾಯ್ವ[2] ಕೆಂ
ಗಲಿಪ ಕಟಾಕ್ಷದಿಂದಡರೆ ನೋಡುವ ಕಾಡುವ ದಾಡೆಗುಟ್ಟುವ
ಗ್ಗಲಿಸಿ ತೊಡಂಕುವಬ್ಬರಿಸಿ ಪತ್ತುವ ಸುತ್ತುವ ಘೂರ್ಮಿಸುತ್ತೆ ಸಂ
ಚಲಿಪ ಧರಿತ್ರಿಯಂ ಟೊಣೆವ ಸೂಕರನಾಟಮದೇನಳುಂಬಮೋ ೧೨

ತಿರುಗುತ್ತೊಂದೆರಡಡಿಯಂ
ಭರದಿಂ ನೋಡುತ್ತೆ ನಿಲುತೆ ಘೂರ್ಮಿಸುತುಂ ಕೊ
ಕ್ಕರಿಸುತಿದಿರಾಂತು ವಿಸಟಂ
ಬರಿದುದು ಸುರರಿದಿರೊಳರರೆ ಘೋರವರಾಹಂ ೧೩

ಮುತ್ತಿದರಮರ್ತ್ಯಲುಬ್ಧಕ
ರೆತ್ತಂ ಫಡಫಡಯೆನುತ್ತೆ ಕೂರ್ಗಣೆವಱಿಯಂ
ಸುತ್ತಿಱಿದು ಕಱಿದರಾರ್ದೊದ
ರುತ್ತಸಿ[3]ಯಂ ಜಡಿದು ಝುಂಕಿಸುತ್ತಿದಿರಾದರ್ ೧೪

ಇಱಿ ಬರಿ[4]ಯಂ ತರಿ ಕೊರಲಂ
ಮುಱಿ ಮೂಳೆಯನಡಗನುಗಿಯೆನುತ್ತಸವಸದಿಂ
ನೆಱಿ ಸುತ್ತಿದರಿರದೊತ್ತಿದ
ರುಱಿ ಮುತ್ತಿದರಮರಲುಬ್ಧಕರ್ ಪಟುಕಿಟಿಯಂ ೧೫

ವಚನ

ಆಗಳವರ ಸಂರಂಭಮಂ ಕಂಡು ರೋಷಾವೇಶಮಂ ಕೆಯ್ಕೊಂಡು ದಾಡೆಗಡಿದು ಮಾರ್ಮಲೆತು ಮಾಮುಸಕಂ ಮುಸಗಿ,

೧ ರಿಸಿ (ತ, ಯ)
೨ ಪಾಯ್ದು (ಚ)
೩ ರುತ್ತರಿ (ಯ)
೪ ಬದಿ (ಕ, ಗ)

ಚಂಪಕ.

ಒದೆದು ಧರಿತ್ರಿಯಂ ನೆಱೆ ಪುಟಂ ನೆಗೆದವಳ್ಕಿಸುತ್ತೆ ತುಂಡಮಂ
ಬಿದಿರ್ದು ಕಡಂಗಿ ಗರ್ಜಿಸಿ ಘನಾಘನನಿಸ್ವನದಿಂ ತುಡುಂಕಿ ಪೊ
ಯ್ದುದು ಕುಡುದಾಡೆಯಿಂದಿಱುದುದೆತ್ತಿದುದಿರ್ಬಗಿಯಾಗೆ ಕಾಯಮೊ
ಟ್ಟೆದುದವರಟ್ಟೆಯಂ ಕೊಱೆದು ತಿಂದುದು ತೇಗಿದುದುಗ್ರಸೂಕರಂ ೧೬

ಎಚ್ಚಂಬುಗಳವು ರೋಮಮು
ನುಚ್ಚಳಿಸಲ್ಕಾಱದಲ್ಲಿ ತೊಡರ್ದಿರೆ ಕೊಡಪು
ತ್ತೆಚ್ಚರಿಯ ಮುಳ್ಳ ಪಂದಿವೊ
ಲಚ್ಚಿಗಮಂ ಮಾಡಿ ಮಡಿಪಿದತ್ತದು ಸುರರಂ ೧೭

ವಚನ

ಆಗಳೆಚ್ಚಂಬಂ ಬಗೆಗೊಳದೆ, ಕನಲ್ಕೆಯಿಂ ಬಟ್ಸಂದು ಬವರಿವರಿದು ತುಱುಗಿ ತುಡುಂಕುವ ಜಾಯಿಲಂಗಳಂ ಲೆಕ್ಕಿಸದೆ, ಮಿಡಿಯಿಂ ಸಿರಂಬರಮೆತ್ತಿ ಸೀಳ್ದು ಸದೆವ ಸಮದಸೂಕರನಸಮಸಮರಾಟೋಪಮಂ ಸೈರಿಸಲಾರದೆ ಕಣ್ಗೆಟ್ಟು ಬೆನ್ಗೊಟ್ಟೋಡಿ ಬರ್ಪಮರವ್ಯಾಧಸಂಘದಭಿಷಂಗಮಂ ಪಿಂಗಡೆಯೊಳಂಗನೆವೆರಸು ಬನದೊಳೊರ್ವನೆ ಬಿನದಿಪ ಕಪರ್ದಿ ಕಂಡು, ಕರುಣಂ ಪುಟ್ಟೆ, ಜವದಿಂದವರ್ಗಂಜದಿರಿಮೆಂದ ಭಯಹಸ್ತಮಂ ನೆಗೆಪಿ ಮಡಿದಮರರ್ಗಸುವಿತ್ತು ಸಕ್ಷತಾಂಗರನ[1]ಕ್ಷತಾಂಗರನಾಕ್ಷಣಂ ನೆಗಟ್ದು[1], ನೆಗಟ್ಟಿವೆತ್ತ ನಿಜವಾಮಕರಕಲಿತಪ್ರಚಂಡಕೋದಂಡಕೋಟಿಯೊಳ್ ಮಂಜುಸಿಂಜಿನಿಯನಮರ್ಚಿ, ಕೆಯ್ಕೊಂಡು ತನ್ನನಗಲ್ದಲ್ಲಲ್ಲಿ ಸಂಚರಿಪ ಮನ್ನಣೆಯ ಗಣನಿವಹಂ ಕಳಕಳಮಂ ಕೇಳ್ದು ನಡೆತಂದೊಡನೇಱ್ತರೆ, ಮುಂದಣ್ಗೆ ಸಾರ್ದಮರರಂ ಬೆನ್ಗೊಳ್ವ ಸಂವರ್ತಸಮಯಯಮಮಹಿಷೋಪಮಾನನಾದ ಭೀಕರಾಕಾರ[2]ಮೂಕಾಸುರ[2]ನಂ ತೊಟ್ಟನೆ ಕಟ್ಟಿದಿರೊಳ್ ಕಂಡು, ಕಾಯ್ಪುಗೊಂಡು ಚಂಡಧನುರ್ಗುಣಮಂ ನೀವಿ ಜೇವೊ ಡೆ[3]ಯಲೊಡನೆ,

ನಡುಗಿದುದಿಳೆ ಗಿರಿಶಿಖರಂ
ಕೆಡೆದುದು ಕದಡೆಟ್ದು ಜಡಧಿ ತುಳ್ಕಿದುದುಡುಗಳ್
ಬಿಡದುಳ್ಕಿದು[4]ವಹಿಪತಿ ಪೆಡೆ
ಯುಡುಗಿದನಿನಬಿಂಬಮುದಿರ್ದುದಳ್ಕಿದರಹಿತರ್ ೧೮

೧–೧ ಕ್ಷತಾಂಗರಂ ನೆಗಳ್ದು (ಯ)
೨–೨ ಮೂಕಸೂಕರ (ಗ, ಚ, ಜ, ತ)
೩ ಜೇವಡೆ (ಯ)
೪ ದುಳ್ಗಿದು (ಯ)

ಮತ್ತಮಾಗಳ್,

ಗಣತತಿ ಕಿರಿಯಃಂ ಸದೆಯಲ್
ಕಣೆದುಡುತಿರೆ ಪುರ್ಬಿನಿಂದೆ ಜರ್ಬುತೆ ನಿಲಿಸು
ತ್ತಣಿಯರವುಭವಂ ತೆಗೆದಂ
ಡೊಣೆಯಿಂ ಪೊಗರುಗುವ ನಿಶಿತತರಮಾರ್ಗಣಮಂ ೧೯

ವಚನ

ಅಂತುಮಾ[1] ಕೂರ್ಗಣೆಯುಂ ಮಾಣದೆ ಬಾಣಾಸನದ ತಿರುವಾಯೊಳ್ ಪೂಡಿ ನೀಡಡಿಗೊಂಡಾಕರ್ಣಾಂತಂ ಸೆಳೆದು ಸುರರಂ ಪಿಂಗದೆ ಸುಂಗಲೇಟ್ಟಿರ್ಪ ಮಿಟ್ಟಿ ವಿನಂತದಿರದಿದಿರ್ಚಿ ಗರ್ಜಿಸುತ್ತುಂ ಬರ್ಪ ಬಲ್ಪಂದಿ[2]ಯನಭೀಕ್ಷಿಸಿ[2],

ಉತ್ಪಲ.

ಪಂದಿಯಿದಂದಿನಗ್ಗದ ಗಜಾಸುರನಿಂ ಮದವತ್ತರಕ್ಷಸಂ
ಕ್ರಂದನವೈರಿಯಿಂ ಬಲದೊಳುಗ್ರತರಾಕೃತಿಯೊಳ್ ಪೊದಟ್ಟಿ ನಿ
ಷ್ಪಂದಪರಾಕ್ರಮಸ್ಥಿತಿಯೊಳಿರ್ಪುಡಿ ವೆಗ್ಗಳಮಪ್ಪುದಿಂದಿದಂ
ಕೊಂದಪೆನಾನೆ ಮಿಕ್ಕಮರಸಂತತಿಗಿಂತಿದು ವಧ್ಯಮಕ್ಕುಮೇ ೨೦

ವಚನ

ಎಂದು ಬಗೆದಂತಕಾಂತಕಂ ಪ್ರತಿಜ್ಞಾರೂಢನಾಗಿ,

ಪ್ರಕಟಪಟುರೋಷಬದ್ಧ
ಭ್ರುಕುಟಿ ಕರಾಳಾಸ್ತ್ರದಿಂದೆ ತೆಗೆನೆಚಿದೆಚ್ಚಂ
ಪ್ರಕುಟಿಲದಂಷ್ಟ್ರಾಭೀಷಣ
ವಿಕಟಾಂಗನನಾ ವರಾಹನಂ ಪುರಮಥನಂ ೨೧

ಎಚ್ಚೊಡಿಳೆಯದಿರೆ ಶರಮಿರ
ದುಚ್ಚಳಿಸಿದುದೊಡಲನದರ ಕೆನ್ನೀರ್ ಭರದಿಂ
ಬೆಚ್ಚನೆ ಪಾಯ್ತರೆ ಕಣ್ಣರೆ
ಮುಚ್ಚುತ್ತುಂ ಮೂರ್ಛೆವೋದುದಲ್ಲಿ ವರಾಹಂ ೨೨

ವಚನ

ಅಂತು ಹಮ್ಮದಂಬೋಗಿ ವಜ್ರವಜ್ರನಿರ್ಘಾತದಿನುರುಳ್ದ ನೀಲಾಚಲದಂತೆ ಪೊಡವಿಯೊಳ್ ಕೆಡೆದಿನಿಸಾನುಂ ಬೇಗದಿನೆಟ್ಟುತ್ತು ಮದಮುಡಿಗಿ ಬೇರ್ವರಿವ ಭೀತಿಯಿಂ ಬೆಂಗೊಟ್ಟು ಪರಿದು,

೧ ಅಂತಾ (ಯ)
೨-೨ ಯಂ ನಿರೀಕ್ಷಿಸಿ (ಚ)

ಅರ್ಜುನನ ತಪಸ್ಸನ್ನೂ ಶಿವನನ್ನೂ ಪ್ರದರ್ಶಿಸುವ ದೃಶ್ಯ




ಚಿಂಗಲಪೇಟೆ ಜಿಲ್ಲೆ ಮಹಾಬಲಿಪುರದಲ್ಲಿ

( *By the Courtesy of the Director-General of Archaeological Survey of India* )

ಮಡು ಗಿಡು ಸರು ದರಿ ಪಳ್ಳಂ
ಸಿಡುಂಬು ಮೆಳೆ ಬಳ್ಳಿ ಪುಲ್ ಪೊದಱ್ ಬೆಟ್ಟುಗಳಿ
ಟ್ಟೆಡೆ ಕುತ್ತುಱು ನಾನಲ್ಗಳೊ
ಳೆಡೆವಿಡದೋಡಿತ್ತು ಪಂದಿ ಜವದಿಂದಾಗಳ್ ೨೩

ಬೆಂಬಱಿವಿಡಿದಟ್ಟುತ್ತುಂ
ತಾಂ ಬರೆವರೆ ಬಿಡದಧಿಜ್ಯಧನು ಶಬರೇಶಂ
ಮುಂಬರಿದರ್ಜುನನಿರ್ದ ಬ
ನಂಬೊಕ್ಕುದು ಪಂದಿ ಸುಱಿದುದಾತನ ಬಱಿಯೊಳ್ ೨೪

ವಚನ
ಆಗಳ್ ಬಱಿವಿಡಿದು ಬಳಸಿ ಕವಿದು ಕುಬುಬೆಂದು ಬೊಬ್ಬಿಱುವ ಸುರಕಿರಾತ ರಬ್ಬರಮಂ ಕೇಳ್ದಿದೆತ್ತಣದೆಂದು ಯೋಗಿ ಯೋಗಮನುಪಶಮಿಸಿ, ಕಣ್ದೆಱೆದು ಮುಂದಿರ್ದ ಭೀಕರಾಕೃತಿವೆತ್ತ ಮಹಾವರಾಹನಂ ನೋಡಿ, ಬನದ ತಪಸ್ವಿಗಳ್ಗೆ ಪಹತಿಗೆಯ್ವುದಿದಂ ತವಿಪುದೆನಗೆ ಕರ್ತವ್ಯಮಕ್ಕುಮೆಂದು ನಿಜಕ್ಷಾತ್ರಧರ್ಮಮಂ ಬಗೆದು, ಮೂಡಿಗೆಯಿಂ ತೋಡಿಲ್ಲದ ಚಂಡಕಾಂಡಮನುಗಿದು, ಗಾಂಡೀವಿ ಗಾಂಡೀವದಿರ್ದೆಸೆಯ ಕೊಪ್ಪನಾರಯ್ದು ಪೆದೆಯಂ ತೊಡರ್ಚಿ ಜೇವೊಡೆದು ಪೂಡಿ ನೀಡಡಿಗೊಂಡು ತೆಗೆನೆಱೆನಿಂದು,

ಕೆಡೆ ಕೆಡೆಯೆಂದಾರ್ದೆಚ್ಚಂ
ಘುಡುಘುಡಿಪ ಮಹಾವರಾಹನಂ ಕೂರ್ಗಣೆಯಿಂ
ಕಡುಗಲಿ ಪಾರ್ಥಂ ನೆಱೆ¹ನಂ
ನಡೆಗೋಣಡಿಗೊಂಡು ಪಂದಿ ಕೆಡೆದತ್ತಾಗಳ್ ೨೫

ತರಳ
ಜವದಿನಲ್ಲಿಗೆ ಬಂದು ಶಂಕರನೆಂದನೀ ಕಿಟಿಯೆಮ್ಮದಾಂ
ತವಿಸಿದೆಂ ತೆಗೆಯೆಂದು ಭೂತಗಣಕ್ಕೆ ಪೇಟ್ವುದುಮಾಲಿಸು
ತ್ತವಿಕಲಂ ಕೆಡೆದತ್ತಿದೆನ್ನಯೆ ಬಾಣದಿಂ ಕಡೆಸಾರ್ ಬಿಡೆಂ
ದವನನೀಶ್ವರನೆಂದು ಬಲ್ಲನೆ ಪಾರ್ಥನೊತ್ತಿ ಕೆರಳ್ಚಿದಂ ೨೬

ವಚನ
ಮತ್ತಮಿಂತೆಂದಂ,

೧ ನೆಲ ( ತ, ಯ )

ಎಲೆ ಶಬರ ಕಾಡ ಬಡನರಿ
ಮೊಲ ಪುಲ್ಲೆಗಳಲ್ಲಿ ನಿನ್ನ ಸಾಹಸಮುಂ ದೋ
ರ್ಬಲಮುಂ ಮೆಱೆಗುವುದಲ್ಲದೆ
ಚಲ[1]ದಂಕನೊಳೆನ್ನೊಳೆಂತುಮೇಂ ಮೆಱೆದಪುದೇ ೨೭

ಬೇಡ ನಿನಗೇಕೆ ಸಾಹಸ
ದಾಡಂಬರಮೆನ್ನೊಳಾಹವಕ್ಕನುಗುಣನಂ[2]
ಜೋಡಿಸು ನಿನಗುಳ್ಳೊಡೆಯನ
ನಾಡಲದೇಂ ತೋರ್ಪೆನೆನ್ನ ಸಾಹಸದಿರವಂ ೨೮

ಕರಿ ಕೇಸರಿಯಂ ಕೆಣಕಿದ
ಪರಿಯಂ ಪರುಟವಿ[3]ಸದಿರ್ ಮದಾಂಧತೆಯಿಂದಾಂ[4]
ತರಿಬಲಬಲಾಹಕಪ್ರ
ಸ್ಫುರಿತಮಹಾನಿಲನೊಳತುಳಬಳಗಾಂಡಿವಿಯೊಳ್ ೨೯

ಚಂಪಕ.

ಎನೆ ನಸುನಕ್ಕು ಮಾರರಿಪುವಾತನ ಧೈರ್ಯಮನಾತನೇೞ್ಗೆವೆ
ತ್ತನುಗತಶೌರ್ಯಮಂ ಬೞಿಯೊಳಿರ್ಪಗಜಾತೆಗೆ ಸೂಚಿಸುತ್ತೆ ಪು
ರ್ಬಿನ ಕೊನೆಸನ್ನೆಯಿಂ ಗೊರವ ನಿನ್ನಯ ಶೌರ್ಯಮದಿರ್ಕೆ ಖಡ್ಗವಿಾ
ಧನುಶರಮೆತ್ತ ನಿನ್ನ ತಪಮೆತ್ತ ವಿಚಿತ್ರಮಿದಲ್ತೆ ಧಾತ್ರಿಯೊಳ್ ೩೦

ವಚನ

ಎಂದೇಳಿದಂಗೆಯ್ದು ನುಡಿದ ಕಪರ್ದಿಯ ಕಟೂಕ್ತಿಯಂ ಕೇಳ್ದು,

ವಿಪಿನಚರ ನಿನಗೆ ತಕ್ಕುದು
ಚಪಲಮೃಗವ್ರಜದ ಬೇಂಟೆಯುಜ್ಜುಗಮೆಮ್ಮಾ
ತಪದ ವಿಚಾರಂ ತಕ್ಕುದೆ
ವಿಪರೀತಂ ನಿನ್ನ ನುಡಿಯನೊಲ್ವರೆ ಬಲ್ಲರ್ ೩೧

೧ ಛಲ (ಕ, ಚ)
೨ ಗುಣವಂ (ಕ, ಗ, ಜ); ಗುಣಮುಂ (ಚ)
೩ ಠವಿ (ಯ, ಜ)
೪ ಯಿಂದಂ (ಚ)

ಉತ್ಪಲ.

ಎಂದವನುಕ್ತಿಯಂ ಗಿರಿಶನಾಲಿಸಿ ತಾಪಸ ಲೇಸನಾಡಿದಯ್
ಕುಂದವೆ ಬೇಂಟೆಯುಜ್ಜುಗಮಿದೆಮ್ಮಯೆ ಕಜ್ಜಮಿದಪ್ಪುದಪ್ಪುದಾ
ವಂದದಿನಿಂತು ನಿನ್ನವೊಲದಾವನೊ ಶಾಂತಿಸಮಗ್ರನುಗ್ರಶೌ
ರ್ಯಂ ದಿಟಮಸ್ತ್ರಶಸ್ತ್ರಧರನಾದ ತಪಸ್ವಿ ಧರಾತಳಾಗ್ರದೊಳ್ ೩೨

ವಚನ

ಎಂದು ನುಡಿಯಲೊಡನೆ,

ಚಂಪಕ.

ಕಟಕಿಯಿದೇಂ ಪುಳಿಂದ ಬಿಡು ನಿನ್ನ ದುರುಕ್ತಿಯನೆಮ್ಮ ವೃತ್ತಿಯಂ
ಪಟುತಪಮಾಂತ ತಾಪಸರೆ ಬಲ್ಲರುಪಾರಜಟಾಮೃಗಾಜಿನ
ಸ್ಫುಟಭಸಿತಂಗಳಂ ಶರಶರಾಸನಖಡ್ಗಮನಾಂತು ತಾಪಸೋ
ತ್ಕಟಮೃಡನಿರ್ಜನಾ ಮೃಡನ ಶಿಷ್ಯತೆಯಾಂತೆನಗೇನಿದೊಪ್ಪದೇ ೩೩

ನೀನೆನ್ನೊಳಾಹವಕ್ಕೆ ಸ
ಮಾನನೆ ತೊಲಗಾಂಪ ಧೀರನಂ ಬರಿಸೀಗಳ್
ಕಾನನಚರ ಸಮರದೊಳಭಿ
ಮಾನಮನುಱಿಯೆನೆ ಮಹೇಶ್ವರಂ ಮಗುಟದಿಂದಂ ೩೪

ಏನಾದೊಡೇನೊ ನಿನ್ನ ತ
ಪೋನೀತಿಯದಂತದಿ[1]ರ್ಕೆ ನಿನ್ನ ಧನುರ್ವಿ
ದ್ಯಾನಿಪುಣತೆಯೆಂತೆಂತನು
ಮಾನಮದೇಂ ತೋರ್ಪುದೆನ್ನೊಳಡಗಿನಿ[2]ಸರಿವೆಂ ೩೫

ಬಱಿದೇಕೆ ಗಱಿಪಿದಪೆ ನೀಂ
ಪೊಱಮಡು ಸಮರಕ್ಕೆ ನಿನ್ನ ಭುಜಬಲದಿರವಂ
ನೆಱೆ ಕಾಣ್ಬೆನೆನ್ನ ವಾಸಿಯ
ತೆಱನಂ ಕಡೆಗಣ್ಚಿ ಪಿಂಗಿ ಪೆಱಸಾರ್ದಪೆನೇ ೩೬

ವಚನ

ಎಂದು ದೂರ್ಜಟಿ ಗಭೀರಧ್ವನಿಯಿಂ ಗಜರಿ ಗರ್ಜಿಸಿ ನುಡಿಯೆ,

೧ ತಿರಿ (ಯ)
೨ ಳದನಿನಿ (ಯ)

ಒಳಸೋರ್ದುದು ಶಾಂತಿರಸಂ
ಮೊಳೆತುದು ಕೋಪಾಗ್ನಿ ಪೊಗೆದುದುಸಿರೊಳ್ ನಿಡುಗ
ಣ್ಗಳ ಕಡೆಯೊಳ್ ಕಿಡಿಗೆದರ್ದುದು
ಬಳಿಕಲರ್ದುದು ಮೊಗದೊಳಚಲರಿಪುನಂದನನಾ ೩೭

ಬಡಬಾಗ್ನಿಯಳುರ್ಕೆಯೊ ಬಱ
ಸಿಡಿಲೇಳ್ಗೆಯೊ ಮುಳಿದ ಸಿಂಹದುಗ್ರತೆಯೊ ಪೊಡ
ರ್ಪಿಡಿದ ಲಯಕಾಲಮೃತ್ಯುವಿ
ನಡರ್ಪೊ ಎನೆ ಮಿಸುಪ ಮುಸಕಮುಂ ತಳೆದನವಂ ೩೮

ಮಹಾಸ್ರಗ್ಧರೆ

ಪಟುಕೋಪಾಟೋಪಬದ್ಧಭ್ರುಕುಟಿ ವಿಚಳಿತಶ್ಮಶ್ರು ಘರ್ಮಾಂಬುಭಾಸ್ವ
ನ್ನಿಟಿಲಂ ಶೋಣಾಕ್ಷಿಕೋಣಂ ಪೆದೆಯನೆಟಿ³ದು¹ ಗಾಂಡೀವದೊಳ್ ತೊಟ್ಟು² ರೌದ್ರೋ
ತ್ಕಟವೃತ್ತಂ ಜ್ಯಾರವಂಗೆಯ್ದಡಸಿ ಪಿಡಿದು ನಿಂದಾರ್ದು ಶಾತಾಸ್ತ್ರಮುಂ ಸಂ
ಘಟಿಸುತ್ತುಂ ಮಾಣದೆಚ್ಚಂ ಕಪಟಶಬರನಂ ಕೊಳ್ಳೆನುತ್ತಣ್ಮಿ ಪಾರ್ಥಂ ೩೯

ಮತ್ತೇಭ.

ಅದು ಪಿಂತಾಗಿರೆ ಮತ್ತಮೊಂದು ಶರಮೆಯ್ದಿತ್ತಂತದಂ ಪಿಂದುಗೆ
ಯ್ದೊದಱುತ್ತುಂ ಪೆಱತೊಂದು ಮಾರ್ಗಣಮುಳುಂಬಂ ಪಾಯ್ದುದಂಬೊಂದು ಮೇ
ಣದಱಿಂ ಮುಂಚಿ ಪಳಂಚಿ ಪಾಱಿದುದು ತಿಬ್ಬಂ ಬಾಣಮನ್ಯಂ ಬಱಿ
ಕ್ಕದುಮಂ ದಾಂಟಿ ಕಡಂಗಿ ಸೈವರಿದುದೇನೆಂಬೆಂ ತದಾಟೋಪಮಂ ೪೦

ಗಿರಿಯಗ್ರದೊಳುಱಿ³ ಕಱಿ³ವಂ
ಶರವೃಷ್ಟಿಯನಾತ್ಮಜನಕನಿಂದ್ರನೆನುತ್ತುಂ
ಪುರುಡಿಸಿ ಶರವೃಷ್ಟಿಯನಾ
ಗಿರಿಶಾಗ್ರದೊಳೆಯ್ದೆ ಕಱಿ³ದನರ್ಜುನನದಟಂ ೪೧

ಚಂಪಕ.

ಒದೆದೆಡೆಗೊಂಡ ಬಿಲ್ಲ ತಿರುವಂ ಮೊರೆದೆಟ್ತ್ತರದಿಂ ಪಳಂಚಿ ವೇ
ಗದೊಳಿದಿರಾಂತು ಬಲ್ಗರಿಯ ಗಾಢಮೊಡಂಬಡೆ ಮಾಱಿ ಪಾಱಿ ಪುಂ
ಖದ ಪೊಳೆಪುರ್ವೆ ಮುಮ್ಮೊನೆಯ ಕೆಂಗಿಡಿ ಸಾಲಿಡೆ ರೂಢಿ³ಸುತ್ತೆ ಪಿಂ
ಗದೆ ಪೊಗರಾಂತ ಕೂರ್ಗಣೆಗಳೇಂ ಪರಿತಂದುವೊ ಪಾಂಡುಪುತ್ರನಾ ೪೨

೧ ನೆಳವಿ (ಯ) ೨ ಕೊಟ್ಟು (ತ) ೩ ಜಾಡಿ (ಯ)

ಮತ್ತಂ,

ಮತ್ತೇಭ.

ಧರೆಯೆತ್ತಾಗಸಮೆತ್ತ ತಳ್ತ ದೆಸೆಯೆತ್ತೆಂಬಂತೆ ಮತ್ತಂ ಧನು
ರ್ಧರಪಾರ್ಥಂ ಬಿಡದೆಚ್ಚ ಮಾರ್ಗಣಕದಂಬಂ ಧಾರೆಯಿಂ[೧] ಪೊಣ್ಮೆ ದ
ಳ್ಪುರಿ ವಿದ್ಯುದ್ದ್ಯುತಿವಿಸ್ಫುಲಿಂಗತತಿ ಸುತ್ತಂ ಸೂಸೆ ಪಾಯ್ತಂದು ನಿ
ರ್ಭರದಿಂ[೨] ತೀವಿದುದಂಬಿನಂಬುಧಿಯಳುಂಬಂ ಮುತ್ತಿದತ್ತೆಂಬಿನಂ ೪೩

ಉತ್ಪಲ.

ಮಂಜಿನ ಪುಂಜಮೊತ್ತರಿಸಿ ಮುತ್ತಿ[೩] ಮುಸುಂಕೆ ಭಯಾರ್ತಿಗೊಳ್ವನೇ
ಕಂಜಸಖಂ ಪತಂಗತತಿ ಪಾಯ್ದೊಡೆ ಬೆರ್ಚುಗುಮೇ ದವಾಗ್ನಿ ವಾ
ತಂ ಜವದಿಂ ಪಳಂಚೆ ಗಿರಿ ಕಂಪನವಾಂಪುದೆ [೪]ಪಾಂಡುಪುತ್ರನಾ
ತಂ[೪] ಜಡಿದೊತ್ತೆ ಜಾಱಿ[೫] ಪೆಱಸಾರ್ವನೆ ಧೀರಧನಂಜಯಾಂಬಕಂ ೪೪

ಮೊರೆದು ಪರಿತಂದು ಮಶಕೋ
ತ್ಕರಮೆತ್ತಂ ಕವಿಯೆ ಸೆಡೆವುದೇಂ ಮದಗಜಮಾ
ನರನೆಚ್ಚ ಗಱಿಗಣೆಗಳಾ
ವರಿಸಿ ಕರಂ ಮುತ್ತೆ ಮೃತ್ಯುಹರನಂಜುವನೇ ೪೫

ಆಗಳ್,

ಚಂಪಕ.

ಮುಳಿದು ಗಜಾಸ್ಯನಬ್ಬರಿಸಿದಂ ಕೆರಳ್ದಂ ಗುಹನಲ್ಲಿ ರೋಷಮು
ಜ್ಜ್ವಳಿಸಿ ಗಣಾಳಿ ಗರ್ಜಿಸಿದುದಾ ನರನೇೞ್ಗೆಗೆ ಚಿತ್ರಮಿಂತಿದೇಂ
ಕಳಕಳಮೆನ್ನ ಭಕ್ತನಿವನೀತನೊಳಾಂಪ ವಿನೋದಮುಂಟು ನಿ
ಶ್ಚಳತೆಯೊಳಿರ್ಪುದೆಂದವರ್ಗೆ ನೇಮಿಸಿದಂ ಕರುಣಾಬ್ಧಿ ಶಂಕರಂ ೪೬

ವಚನ

ಅನಂತರಮಾ ಶಬರಶಂಕರಂ ಪ್ರಚಂಡಧನುರ್ದಂಡಮಂ ಕೆಯ್ಕೊಂಡು ತಿರುವೊಯ್ದು ಜೇವೊಡೆದು ಬಾಣಮಂ ಪೂಡಿ ತೆಗೆನೆಱೆದೆಚ್ಚಾಗಳ್,

ನರನೆಚ್ಚ ಕಣೆಗಳಂ[೬] ಕ
ತ್ತರಿಸಿದುವವನೊಡಲನಂಟದಿಳೆಗೆಱಗಿದುವೀ
ಶ್ವರನಾಣತಿಯಿಂದಾತನ
ಪೊರೆಯೊಳ್ ಪುರಮಥನನೆಚ್ಚ ಪೊಸಕೂರ್ಗಣೆಗಳ್ ೪೭

೧ ಧಾತ್ರಿಯಿಂ (ಯ) ೨ ರ್ಜರರಂ (ಯ) ೩ ಮುತ್ತೆ (ಜ) ೪-೪ ಪಾರ್ಥಪುತ್ರಜಾ । ತಂ (ಚ, ಯ) ೫ ಪಾರಿ (ಯ) ೬ ಕಣೆಗಳವ (ಚ)

ಮಹಾಸ್ರಗ್ಧರೆ

ಶರವೃಂದಂ ಮಾಣದೆಲ್ಲಂ ಕಡಿವಡೆ[೧]ದಿಳೆಯೊಳ್ ಬೀೞೆ ಕರ್ಣಾರಿ ಕೋಪಾ
ತುರಚಿತ್ತಂ ಮತ್ತಮೆಚ್ಚಂ ಕಿವಿವರೆಗುಗಿದುದ್ದಂಡಕಾಂಡಂಗಳಂ ಶಂ
ಕರನಾ ಬಾಣಂಗಳಂ ಖಂಡಿಸಿ ಮುಗುಳ್ದು ನಿಜಾಸ್ತ್ರಂಗಳಿಂದೆಚ್ಚನಾಗಳ್
ಬೆರಲಿತ್ತುತ್ತೆಯ್ದೆ ಕೊಂಡಾಡಿದನವನ ಮಹಾಶೌರ್ಯಮಂ ಪಾಂಡುಪುತ್ರಂ ೪೮

ಎಲೆ ಶಬರ ನಿನ್ನ ಪೃಥುಭುಜ
ಬಲಮೊಳ್ಳಿತ್ತೆಸುಗೆ ಪೊಸತು ಬಿಲ್ಲಾಳ್ತನದೊಳ್
ಕಲಿ[೨] ನೀನಲ್ಲದೆ ಪೆಱರಾರ್
ಚಲದಿಂ ಸಮನೆನಿಸಿ ಕಾದಿದಯ್ ಬಿಡದೆನ್ನೊಳ್ ೪೯

ಅರರೆ ಭವದೀಯಸಾಹಸ
ದಿರವತಿಶಯಮೆಂದು ಪೊಗೞ್ದು ತೊಟ್ಟೆಚ್ಚಂ ದ
ಳ್ಳುರಿ ಸೂಸುವ ಧಾರೆಯ ಕಿಡಿ
ಸುರಿವ ನಿಶಾತಾಸ್ತ್ರಬೃಂದಮಂ ಕಲಿಪಾರ್ಥಂ ೫೦

ಶರವರ್ಷಮನೇಂ ಕಱೆವುದು
ಪಿರಿದೆ ಮಹಾಕಾಲಮೇಘಮರ್ಜುನಜಲದಂ
ಭರದಿಂದಿದಿರಾಂತನವಧಿ
ಶರವರ್ಷಮನಲ್ಲಿ ಕಱೆದುದಿದು ಚಿತ್ರತರಂ ೫೧

ಮತ್ತೇಭ.

ಶಿವನಿಂ ದಿವ್ಯತರಾಸ್ತ್ರಮಂ ಪಡೆಯು[೩]ಲೇೞ್ತಂದಂದು[೩]ಪಾರ್ಥಂ ಮಹೋ
ತ್ಸವದಿಂದಂ ತನಗುಳ್ಳ ಸರ್ವಶರಮಂ ದೇವೇಶ ನೋಡೆಂದು ತೋ
ರ್ಪವೊಲೆಚ್ಚಂ ಕಡಿದಾ ಕಳಂಬಮನಿತಂ ನಿನ್ನಿಷ್ಟಮಾದಸ್ತ್ರಮಂ
ತವೆ ನೋಡೆಂದವನಲ್ಲಿ ತೋಱುವವೊಲಾತಂಗೆಚ್ಚನುಗ್ರಾಂಬಕಂ ೫೨

ವಚನ

ಅಂತೆಚ್ಚ ಪುಳಿಂದಪುರಾಂತಕನ ಬಿಲ್ಬಿನ್ನಣಕ್ಕೆ ಬೆರಗುವಟ್ಟು,

ಚಂಪಕ.

ನರಸುರ[೪]ದಾನವಾದಿಗಳೊಳಿನ್ನ ಶರಾಹತಿಗೊಡ್ಡಿ ನಿಲ್ವರಿ
ಲ್ಲರಿದರಿದಾರ್ಪುಗುಂದದಿದಿರೊಳ್ ನೆಱೆ ನಿಂದೆ ಕಿರಾತರಲ್ಲಿ ನೀ
ನುರುತರಸಾಹಸಾಂಕನೆನಿಪಯ್ ನಿನಗಾರ್ ಸರಿವರ್ಪರಳ್ಕದೋ
ಪರಿಸದೆ ನಿಲ್ವುದಿನ್ನುಮೆನುತುಂ ಪೊಗೞ್ದಾತನನೊಲ್ದು ಫಲ್ಗುನಂ ೫೩

೧ ಕಡಿಯೊಡೆ (ಚ) ೨ ಬಲ (ಚ) ೩-೩ ಲೆಂದೇಳ್ತಂದು (ಯ) ೪ ಸುರನರ (ಯ)

ಜಗಜಗಿಸುವ ಮೂಡಿಗೆಯಿಂ
ತೆಗೆದುಂ ದಿವ್ಯಾಸ್ತ್ರವೃಂದಮಂ ಮಂತ್ರಿಸುತುಂ
ಮುಗುೞ್ದೆಚ್ಚನಾರ್ಪು ಮಿಗೆ ಪ
ನ್ನಗಧರನಂ ಪಟುಪರಾಕ್ರಮಂ ಪಾಂಡುಸುತಂ ೫೪

ಮಹಾಸ್ರಗ್ಧರೆ

ಎನಿತಂ ತಾನೆಚ್ಚನಸ್ತ್ರಪ್ರಕರಮನಭಿಮಂತ್ರಾನ್ವಿತಂಗೆಯ್ದು ಕೂರ್ಪಿಂ
ದನಿತಂ ಕಾಲಾಂತಕಂ ನುಂಗಿದನಸವಸದಿಂದಂತದಂ ಕಂಡುಮಾಶ
ಕ್ತಿನಿಯುಕ್ತಂ ವ್ಯಾಧನಲ್ಲಾವನೊ ತಿಳಿದಪೆನೆಂಬೀ ವಿಚಾರಕ್ಕೆ ಪಕ್ಕಾ
ವನೆ ಪಾರ್ಥಂ ಕ್ಷಾತ್ರದುಸ್ತಾಮಸಮಡಸಿದವಂಗಕ್ಕುಮೋ ಸದ್ವಿವೇಕಂ ೫೫

೧ಕೊಂಡಾಹವದಹನದೊಳಂ೧
ಪಾಂಡವನಂ ಪೊರ್ದಿದಕ್ಷಯಾಸ್ತ್ರಾಂಬುಧಿಯುಂ
ಖಂಡಪರಶುಪ್ರತಾಪಾ
ಖಂಡಿತಬಡಬಾಗ್ನಿ ಪೀರ್ದುದಿನಿಸುೞಿಯದವೋಲ್ ೫೬

ಸವೆದುದು ನಿಷಂಗಶರತತಿ
ಸವೆಯದು ಕೋಪಾಗ್ನಿ ತಿಳಿವು ಮುಸುಳ್ದುದು ಸಮರೋ
ತ್ಸವಮತಿ ೨ಸಲೆ ಕಳೆಯೇಱಿದು೨
ದವಂಗೆ ಪಶುಪತಿಯ ಮಾಯೆಯಂ ನಿಮಿಱುವರಾರ್ ೫೭

ಉತ್ಪಲ.

ಶಂಕರನಂಘ್ರಿಪಂಕಜದ ಸೇವೆಗೆ ಕಂಟಕನಾದನೇ ಪುಳಿಂ
ದಂ ಕರಮಾತನುರ್ಕನುಗಿವೆಂ ಬಿಡೆನೆಂದು ಜಯೋದ್ಯಮಕ್ಕೆ ನಿಃ
ಶಂಕತೆವೆತ್ತು ನಿರ್ಭರದೆ ಗರ್ಜಿಸಿ ಮುಂಬರಿದೆತ್ತಿ ಚಾಪದಿಂ
ದಂ ಕಲಿಪಾರ್ಥನಪ್ಪಳಿಸಿದಂ ಪೞಿ ಪೊರ್ದವ ಚಂದ್ರಮೌಳಿಯಂ ೫೮

ದಂಡೆಗೊಳುತ್ತದಂ ಪೊಳೆದು ಚಿಮ್ಮಿದನೀಶ್ವರನಲ್ಲಿ ಮೇಣದಂ
ಕಂಡು ಕನಲ್ಕೆಯಿಂ ಮುಗುೞ್ದು ಬಳ್ಕಿದನೀ ಹತಿಗೆಂದು ಚಂಡಕೋ
ದಂಡಮನೆತ್ತಿ ಪೊಯ್ದನವನೀಶನ ಪೇರುರಮಂ ಕಪರ್ದಿ ಮುಂ
ಕೊಂಡು ಮೃದುಸ್ಮಿತಂ ಮಿಸುಗೆ ತದ್ಧನುವಂ ಸೆಳೆದಂ ಕರಾಗ್ರದಿಂ ೫೯

೧–೧ ಖಾಂಡವದಹನದೊಳಂದಾ (ಯ, ರ)

೨–೨ ಕಳೆಯೇಱಿದುದಂ (ಯ); ಮಿಗೆ ಕಳೆಯೇಱಿದು (ರ)

ವಚನ

ಅಂತುಮಾ ಗಾಂಡೀವಕೋದಂಡಮನುದ್ದಂಡಚಂಡಿಕಾರಮಣಂ ಸೆಳೆದುಕೊಳ್ವುದುಮತಿರೋಷಕಷಾಯಿತಕಟಾಕ್ಷನಾಗಿ,

ಚಂಪಕ.

ತಿಳಿವಣಮಿಲ್ಲದೆಟ್ಟಿರದ ತಾಮಸಪಂಕದೊಳಾಟ್ಟಿಡಾಯುಧಂ
ದಳೆದೊಱೆಯಿಂದೆ ಕಿಱ್ತು ಜಡಿದಾರ್ದು ಪಳಂಚಿ ಕಿರಾತ ಬೀೞೆನು
ತ್ತೊಳಱಿ ಕಡಂಗಿ ಪೊಯ್ದನಭವಾಂಗಮನರ್ಜುನನಾ ಪುರಾರಿ ಕೆಯ್
ಚಳಕದಿನೀಟ್ಟುಕೊಂಡನದನಾಗಳೆ ಕೆಯ್ ಬಱಿದಾಯ್ತು ಪಾರ್ಥನಾ ೬೦

ಶರತತಿಯೆಲ್ಲಂ ಬಯಲಾ[1]
ಯ್ತುರುಧನುವುಂ ಪೋಯ್ತುಡಾಯುಧಂ ಜಗುಟ್ದುದು ಕೋ
ಡಿರ[2]ದುದಿರ್ದಿಭದ[3]ವೊಲಿರ್ದಂ
ನರನೀಶ್ವರನೊಡನೆ ಸದರಮುಪ್ಪುದೆ ಸಮರಂ ೬೧

ಮತ್ತೇಭ.

ಶರಚಾಪಾಯುಧಮೆಲ್ಲಮುಂ ಜಗುಟ್ಟೊಡೇಂ ಬೆನ್ನಿತ್ತನೇ ಸಾಧ್ವಸಾಂ
ಕುರಮಂ ತಾಳ್ದನೆ ಪಾರ್ಥನಂದಮನು ಶೌರ್ಯೋದ್ರೇಕದಿಂದುರ್ಬಿ ಪೆರ್
ಮರಗೊಂಬಂ ಮುಱಿದಿಟ್ಟನಾತ್ಮಕರದಿಂ ಕಿಟ್ತಿತ್ತಿ ಕಲ್ಗುಂಡ ಬಲ್
ಸರಿಯಂ ಸೂಡಿದನಂತದಂ ಕಡಿದನೊಂದಂಬಿಂದೆ ಮೃತ್ಯುಂಜಯಂ ೬೨

ವಚನ

ಅಂತು ಕಡಿದು,

ಎಲೆ ಗೊರವ ಚಾಪಬಾಣಾ
ವಲಿಯಂ ಖಡ್ಗಮುಮನಕಟ ನೀಗಿದೆ ನಿನ್ನೀ
ಚಲಮಂ ಬಲಮುಮನಿನ್ನೊಂ
ದಲಗುಳ್ಳೊಡೆ ತಂದು ತಾಳ್ದು ಮೆಱೆ ಬಱಿಕೆನ್ಮೊಳ್[4] ೬೩

ಇಲ್ಲದೊಡಿಲ್ಲೆನ್ನಿತ್ತಪೆ
ನಿಲ್ಲಿಯೆ ನಿಂತಾ[5]ಯುಧಂಗಳಂ ಪಿಡಿ ರಣದೊಳ್
ಗೆಲ್ಲಲ್ಕೆ ಸಾರ್ದು ಕಲಿ ನೀ
ನೆಲ್ಲಂದದಿನೆನ್ನೊಳಾಂತು ಗೆಲ್ವುದೆ ಕಜ್ಜಂ ೬೪

೧ ಬರಿದಾ (ಯ)
೨-೩ ದುಡಿದಿಭದ (ಯ); ಡಿರದಿರ್ದಿಭವ (ಪ)
೪ ಕೆನ್ನೊಳ್ (ಕ, ಯ) ೫ ನಿನ್ನಾ (ಯ)

ಕಿರಾತ-ಅರ್ಜುನರ ಶಸ್ತ್ರಾಸ್ತ್ರ ಮತ್ತು ಮುಷ್ಟಿಯುದ್ಧಗಳ ದೃಶ್ಯ



ಕಡಪಾ ಜಿಲ್ಲೆ ಪುಷ್ಪಗಿರಿಯಲ್ಲಿಯ ಶಿವದೇವಸ್ಥಾನ

*(By the Courtesy of the Director-General of Archaeological Survey of India)*

ವಚನ

ಎನೆ ಧನಂಜಯಂ ದರಸ್ಮಿತಾಸ್ಯನಾಗಿ,

ಮತ್ತೇಭ.

ಇನಿತೊಂದುರ್ಬಟೆಯೇಂ ಪುಳಿಂದ ಬಿಡು ನಿನ್ನೀ ಬಿಂಕಮಂ ಮಾಣ್ಗೆ ಶ
ಸ್ತ್ರನಿಶಾತಾಸ್ತ್ರನಿಕಾಯದಿಂ ನೆಗಟ್ದ ಯುದ್ಧಂ ಮುಷ್ಟಿಯುದ್ಧಕ್ಕೆ [1]ನಿಂ
ದನು[1]ವಾಗೀಗಳೆ ತೋರ್ಪೆನೆನ್ನ ಬಲವದ್ದೋರ್ದಂಡಶೌರ್ಯಪ್ರವ
ರ್ತನಮಂ ನೋಡುಗೆ ನಿನ್ನ ನಚ್ಚಿನ ಕಿರಾತವ್ರಾತಮೆನ್ನಂದಮಂ ೬೫

ವಚನ

ಎಂದು ನುಡಿದ ಸಂಕ್ರಂದನನಂದನನ ನಿರರ್ಗಳನಿಸ್ಸಹಾಯಪರಾಕ್ರಮೋಕ್ತಿಗೇಳ್ದು ನೆರೆದ ಗಣಸಂದೋಹಮುಮಂದಾಶ್ಚರ್ಯಮಂ ತಾಳ್ದು ನಲವೇರ್ಚೆ ಪೊಗಟುತ್ತಿರೆ ಬಳಿ ನಿಂದಿರ್ದ ಗಿರಿನಂದನೆಯೊಡನೆ ಗಿರೀಶನಿಂತೆಂದಂ:

ಚಂಪಕ.

ಎಲೆ ಗಿರಿಜಾತೆ ನೋಡಿವನ ಸಾಹಸಮಂ ಸಲೆ ನಾಲ್ಕು ತಿಂಗಳುಂ
ವಿಲಸಿತಜೀರ್ಣಪರ್ಣಮನೆ ಮೆಲ್ದುಟಿದೊಪ್ಪುವ ನಾಲ್ಕು ತಿಂಗಳ
ಗ್ಗಲಿಸಿದ ವಾಯುವಂ ಸವಿದು ನಿಗ್ರಹಿಸಿರ್ದ ಶರೀರದಿಂದದೇಂ
ಕಲಿಯೊ ಕಡಂಗಿ ಕಾದಿದನಿವಂ ಸಮದಂಡಿಯೊಳೆನ್ಗೊಳರ್ಜುನಂ ೬೬

ಉತ್ಪಲ.

ಕಾಮುವ ಕೆಯ್ದು ಪೋದುದೆನುತಳ್ಕಿದನೇ ಭುಜಶೌರ್ಯಶಕ್ತಿ[2] ಗೆಂ
ಟಾದುದೆ ಸಾರವೀರರಸಮೇಂ ಬಿಸಿಗುಂದಿದುದೇ ಸಹಾಯಮಂ
ಸಾದರ[3]ವೊಚ್ಚತಂ ಪಡೆವೆನೆಂಬಭಿಲಾಷೆಯನಾಳ್ದುದೇ ಮನಂ
ಕಾದಲೆ ನೋಟ್ಪುದೀತನ ಸಮಗ್ರಪರಾಕ್ರಮಮುರ್ವಿ ಪೆರ್ಚು[4]ಗುಂ ೬೭

ಕುಲಗಿರಿ ಸಂಚಲಿ[5]ಸಿದೊಡಂ
ಜ್ವಲದೌರ್ವಂ ತಂಪನಾಳ್ದೊಡಂ ರವಿಬಿಂಬಂ
ಸಲೆ ಕರ್ಗಿ[6]ದೊಡಂ ರಣದೊಳ್
ಕಲಿ ಪಾರ್ಥಂ ಭೀತಿವಟ್ಟು ಬೆನ್ಗೊಟ್ಟ[7]ಪನೇ ೬೮

ಮಹಾಸ್ರಗ್ಧರೆ

ಹರಿಯಂಶೋ[8]ದ್ಭೂತನೀತಂ ಶುಭಗುಣನಿಧಿ ಮತ್ಪಾದಭಕ್ತಂ ಸಪತ್ನೋ
ತ್ಕರಸಂಹಾರಾರ್ಥಮೆನ್ನೊಳ್ ಪಡೆಯಲೆಳಸಿ ದಿವ್ಯಾಸ್ತ್ರಮಂ ದಲ್ ತಪಸ್ಸಂ
ಚರಣಂಬೆತ್ತಿಲ್ಲಿ ನಿಂದಂ ಕಿಟಿಯ ಕತದೆ ಮದ್ದ್ವೇಷಮಂ ತಾಳ್ದಿದಂ ಸಂ
ಗರಮಂ ಕೆಯ್ಕೊಂಡಿವಂಗಿತ್ತಪೆನಿವನೆಳಸಿರ್ದಸ್ತ್ರಮಂ ಶೈಲಪುತ್ರೀ ೬೯

೧–೧ ನೀ।ನನು (ಯು) ೨ ಶಕ್ತಿಶೌರ್ಯ (ರ) ೩ ಸಾಧನ (ಚ) ೪ ಪರ್ವು (ಯು) ೫ ಸಂಚರಿ (ಕ, ಗ, ತ, ರ) ೬ ಕುರ್ಗಿ (ಚ, ಜ, ರ); ತರ್ಗಿ (ಯು) ೭ ಬೆನ್ಕೊಡ್ಡಿ (ಚ) ೮ ವಂಶೋ (ಯು)

ಮತ್ತೇಭ.

ಶರದಭ್ಯರ್ಥನದಿಂ ತಪಃಸ್ಥಿತಿಯೊಳಿರ್ದುಂ[1] ಶಾಂತಿಯಂ ಮಾಣ್ದು ಸೂ
ಕರನಂ ಬಾಣದಿನೆಚ್ಚದಂ ಬಯಸುತೆನ್ನೊಳ್ ಕಾಳೆಗಂಗೆಯ್ದನೀ
ನರನೆಂದಾತನ ದೋಷಮಂ ನೆನೆಯದಾದಂ ಕೀರ್ತಿಸುತ್ತಿರ್ದನೀ
ಶ್ವರಿಯೊಳ್ ಶಂಭುಗೆ ಭಕ್ತವತ್ಸಲತೆ ಸಲ್ಗುಂ ಮೇಣ್ ಪೆಱರ್ಗಕ್ಕುಮೇ ೭೦

ವಚನ

ಎನಿಸಿ ಭಕ್ತಜನಪ್ರಣಯಲೀಲಾಲಾಲಸಂ ಶೂಲಧರನೊಯ್ಯನೆ ಪೊಗಟ್ದಿನಂತರಂ ಮುಷ್ಟಿಯುದ್ಧಸನ್ನದ್ಧನಾಗಿ ನಿಂದ ಪಾರ್ಥನಿದಿರ್ಗೆವಂದೋರೊರ್ವರು ದೀರ್ಣರೋಷಾವೇಶಪರುಷ[2]ಪಾಟಲಿತಕಟಾಕ್ಷದಿನಡರೆ ನೋಡಿ ಬಾಹಾಸ್ಫಾಲನಂಗೆಯ್ಯಲೊಡನೆ,

ತುಳ್ಕಿದುದಂಬುಧಿ ತಾರೆಗ
ಳುಳ್ಕಿದುವಾಗಸದೆ ನಡುಗಿದತ್ತಿಳೆ ಫಣಿಪಂ
ಬಳ್ಕಿದನಗಶಿಖರಂಗಳ್
ಕಟ್ಕಿನೆ ಕೆಡೆದುವು ತದೀಯಪಟುನಿಸ್ವನದಿಂ ೭೧

ವಚನ

ಅನಂತರಮಿರ್ಬರುಂ[3] ನಿರ್ಭರದಿಂದುರ್ಬಿ ಬೊಬ್ಬೆಗೊಟ್ಟಬ್ಬರಿಸಿ ಗಜರಿ ಗರ್ಜಿಸಿ ಕಡಂಗಿ ಕೆಯ್ವಿಡಿದು ಪಳಂಚಿ ಪತ್ತಿ,

ಚಂಪಕ.

ಕುಲಗಿರಿಯುಗ್ಮಮಾಳ್ದ ಪುರುಷಾಕೃತಿಯಿಂದೆ ಪಳಂಚುವಂತಿರು
ಜ್ಜ್ವಲಬಡಬಾಬ್ಧಿವಹ್ನಿಯುಗಮಾಂತು ನರಾಂಗಮನಣ್ಮಿ ಕಾದುವಂ
ತಲಘುಮೃಗಾಧಿಪದ್ವಯಮೊಡಂಬಡೆ ಮಾನವವೇಷಮುರ್ಕಿ ಸಂ
ಚಲಿಸವೆ ಪೋರ್ವವೊಲ್ ಪೊಣರ್ದರುರ್ಬಿ ವೃಷಧ್ವಜಮರ್ಕಟಧ್ವಜರ್ ೭೨

ಪಿಡಿಯೆ ಕರಾಗ್ರಮಂ ಬಿಡಿಸುತೌಂಕೆ[4] ಬಿದಿರ್ಚುವ ತಟ್ಕಿಗೆಯ್ಯೆ ಮೆಯ್ಗ್
ಗೊಡಪಿ ತೆರಳ್ಚುವವ್ವಳಿಸೆ ಸಿಲ್ಕದೆ[5] ಲಂಘಿಪ ಸಂಚಿನಿಂದೆ ಪೊ
ಯ್ದೊಡೆ ಪೊಳೆವಾರ್ಪಿನಿಂದೆಜಗೆ ಚಿಮ್ಮುವ ಬಾಹುಗಳಿಂದೆ ಕಂಠಮಂ
ತೊಡರೆ ಕುನುಂಗಿ[6] ಪಯ್ಸರಿಪ ಬಿನ್ನಣಮೊಪ್ಪೆ ಕಡಂಗಿ ಕಾದಿದರ್ ೭೩

ಮತ್ತಂ,

೧ ಇರ್ದಂ (ಚ, ಯ) ೨ ಪೌರುಷ (ಕ)
೩ ಮಿರ್ವರುಂ (ಯ) ೪ ಪೌಂಕೆ (ಚ, ಯ)
೫ ನಿಲ್ಕದೆ (ಚ) ೬ ಕುಸುಂಗಿ (ತ)

ಚಂಪಕ.

ಪೊಗುವ[೧] ತೊಡಂಕುವೆತ್ತುವ ಬಿದಿರ್ಚುವದಿರ್ಚುವ ಪಾಯ್ವ ಪೊಯ್ವ ಪಿಂ
ದೆಗೆವ ಮರಲ್ವ ಮೇಲ್ವರಿವ ಪೊಂಗುವ ಪಿಂಗುವ ನೂಂಕುವೌಂಕುವಾ
ರ್ದೊಗೆವ ಕನಲ್ವ ಜಾರುವ ಜವಂಗೆಡದೊತ್ತುವ ಪತ್ತುವಣ್ಮಿನಿಂ
ಬಿಗಿವ ತುಡುಂಕುವವ್ವಳಿಪ ಬಿನ್ನಣಮೊಪ್ಪೆ ಪಗಿಲ್ತು ಕಾದಿದರ್ ೭೪

ಮತ್ತೇಭ.

ತಳಹತ್ತಂ ದಣು[೨]ವಟ್ಟೆ ಖೊಪ್ಪರಮುರೋಬಂಧಂ ಲತಾಬಂಧಮು
ಜ್ಜ್ವಳಶಾಖಾಚರಬಂಧಮಾಯತಿಕೆಬಂಧಂ ಡೊಕ್ಕರಂ ಪಟ್ಟಿಸಂ
ವಳಯಾವೇಷ್ಟನಮಾಹತಂ ಭುಜಗಬಂಧಂ ತೋರಹತ್ತಂ ಶಿರೋ
ವಳಯಂ ಬಾಹುತಳಂ ಚಮತ್ಕರಿಸೆ ನಾನಾಕೌಶಲಂದೋಱದರ್ ೭೫

ಮುರಿವ ಮುಳಿ[೩]ದೊತ್ತುವಾರ್ದು
ಪ್ಪರಿಸುವ ಬೀೞ್ವೇೞ್ವ ಸುೞಿವ ಸುತ್ತುವ ಡಗೆಯಂ
ತರಹರಿಪ ಸಾರ್ವ ಪಾರ್ವ
ಬ್ಬರಿಪೆಸಕಂ ಮಿಾಱೆ ಕಾದಿದರ್ ಕಡುಗಲಿಗಳ್ ೭೬

ನಿಡುಸುಯ್ಯಿಂ ಭುಗಿಲೆನೆ ಪೊಱ
ಮಡೆ ಪೊಗೆ ಮಿಗೆ ಮುಷ್ಟಿ[೪]ಯುಗಳಘಟ್ಟನದಿಂ ಕೆಂ
ಗಿಡಿ ಕೆದಱೆ ಗರ್ಜನಕ್ಕಿಳಿ
ನಡುಗೆ ಮಹಾಹವಮನೆಸಗಿದರ್ ಧುರಗಲಿಗಳ್ ೭೭

ಮತ್ತೇಭ.

ಪದಘಾತಕ್ಕೆ ಧರಾತಳಂ ಕುಸಿಯೆ ಕೂರ್ಮಂ ಕುರ್ಗೆ ಭೋಗೀಂದ್ರನ
ಗ್ಗದ ದೀರ್ಘಸ್ಫಟೆ ಕಂಠದೊಳ್ ನೆಲಸೆ ಬಾಹುಭ್ರಾಂತಿಸಂಜಾತವಾ
ತದ ಘಾತಕ್ಕೆ[೫] ಪಯೋಧರಂ ಕೆದಱೆ ಬಾನೊಳ್ ಜೀರ್ಣಪರ್ಣಂ ದ[೬]ಲೊ
ಡ್ಡಿದ ವಿದ್ಯಾಧರಪುಷ್ಪಕಂ ಜಗುೞೆ ಯುದ್ಧಂಗೆಯ್ದರೀಶಾರ್ಜುನರ್ ೭೮

ತೊಡೆಯಂ ಪೊಡೆಯಂ ಭುಜಮಂ
ಮುಡುಪಂ ಪೇರುರಮನಳಿಕಮಂ ನೆತ್ತಿಯುಮಂ
ಪೆಡತಲೆಯಂ ಬರಿಯಂ[೭] ಕಾ
ಯ್ಪಿಡಿದೊರ್ವರನೊರ್ವರಣ್ಮಿ ಪೊಡೆದರ್ ಕಲಿಗಳ್ ೭೯

೧ ಪುಗುವ (ಯ) ೨ ಧಣು (ಯ) ೩ ಮುರಿ (ಯ)
೪ ಮುಟ್ಟಿ (ಹಸ್ತಪ್ರತಿಗಳಲ್ಲಿ) ೫ ಪಾತಕ್ಕೆ (ಯ)
೬ ಪರ್ಣಂಬೊ (ಯ) ೭ ಬದಿಯಂ (ಗ, ತ)

ಸೋಲಿಸೆ ಜವಮುದು ಜವಮಂ
ಸೋಲಿಸೆ ಲುಳಿ ಲುಳಿಯ ಬಿನ್ನಣಂ ಬಿನ್ನಣಮಂ
ಸೋಲಿಸೆ ಪೊಯ್ಗಳ್ ಪೊಯ್ಗಳ
ಸೋಲಿಸೆಯುಂ ಸೋಲಲಾರ್ತರಲ್ತಾ ಕಲಿಗಳ್ ೮೦

ಕ್ಷತರೇಷೆ ತಟ್ಟಲೀಯದೆ
ಮತಿ ಮಿಗೆ ಸಮುದಂಡಿಗೆಯ್ದನಿವನೆಂದು ಸಮು
ನ್ನತರೋಷದಿಂದೆ ತಿವಿದಂ
ಶತಮುಖಸುತನತನುಹರನ ವಕ್ಷಃಸ್ಥಳಮಂ ೮೧

ಆ ಕೆಯ್ ಮುಂಚದ ಮುನ್ನಂ
ಲೋಕೈಕಾಧೀಶನೆತ್ತಿ ದೃಢಮುಷ್ಟಿಯನಾ
ಪಾಕರಿಪುತನಯನಂಗಮ
ನಾ ಕಪಟಕಿರಾತನೋವಿ ಮೆಲ್ಲನೆ ತಿವಿದಂ ೮೨

ಚಂಪಕ.

ತರಹರಿಸುತ್ತೆ ಮತ್ತೆ ಪೊಡೆದಂ ನರನೀಶನ ವಕ್ಷಮಂ ಸುಧಾ
ಕರಧರನಾರ್ದು ಮೋಹೆಜಗಿದಂ ಕಲಿಪಾರ್ಥನನಾ ಧನಂಜಯಂ
ಮರಳ್ದು ಮಹೇಶನಂ ತಿವಿದನಂತಕಮರ್ದನನಾ ಕ್ಷಣಂ ಪುರಂ
ದರಸುತನುತ್ತಮಾಂಗವೆಡೆಯಂ ಪೊಡೆದಂ ಸುರರಲ್ಲಿ ನೋಳ್ಪಿನಂ ೮೩

ಅವರಿರ್ವರ ಕಾಳೆಗಮಂ
ಸವೆಯದ ಸಾಹಸಮನೀಕ್ಷಿಸಿದ ಸುರಗಣಮುಂ
ಶಿವಗಣಮುಂ ವಿಸ್ಮಯ[೧]ಮುಂ
ತನೆ [೨]ತಾಳ್ದುದು ಮಚ್ಚಿ[೨] ಪೊಗಳ್ವುದಗ[೩]ರಿಪುಸುತನಂ ೮೪

ಮತ್ತಮಾಗಳ್,

ಚಂಪಕ.

ಶಿವ ಶಿವ ಸತ್ತ್ವಮೆಂತುಟೊ ತಪಸ್ವಿಗಿವಂಗೆ ಮರುನ್ನಿಷೇವಣಂ
ಸವನಿಸೆ ದಂಡಿಸಿರ್ದೊಡಲೊಳದ್ಭುತಮೆನ್ನೊಡನೀತನಂತೆ ಕಾ
ದುವ ಕಲಿಯಾವನೀ ಭುವನದೊಳ್ ಸಮುದಂಡಿಯೊಳುದ್ಘಸಾಹಸಾ
ರ್ಣವನಿವನಲ್ತೆ ಸದ್ಗುಣಕಸೂಯೆಯೆ ಕಾಣೆನಿವಂಗೆ ಸಾಟಿಯಂ ೮೫

೧ ವಿಸ್ಮಿತ (ಕ) ೨-೨ ತಾಳ್ದುದಮರ್ಚಿ (ಕ, ಗ, ಜ, ತ)
೩ ದ್ವಿರಗ (ಎಲ್ಲ ತಾಡವಾಲ ಪ್ರತಿಗಳಲ್ಲಿ)

ವಚನ

ಎಂದುಮಾರಮಣಂ ನಿಜರಮಣಿಯೊಡನೆ ಕಿರೀಟಿಯುಂ ಪೊಗೞುತ್ತಿರ್ಪಿನಮಾ ತನಿದಿರ್ಗೆವಂದು ಮಾರ್ಕೊಂಡು,

ಉತ್ಪಲ.

ಎನ್ನ ಭುಜಾಗ್ರವಿಕ್ರಮಕೆ ಮೆಚ್ಚಿದೆ ನೀಂ ಭವದೀಯಸಾಹಸ
ಕ್ಕಾನ್ನೆಱೆ ವಿಸ್ಮಯಂಬಡೆದೆನೆನ್ನ ಪೊಣರ್ಕೆಗಿದಿರ್ಚಿ ನಿಲ್ವ ಧೀ
ರೋನ್ನತರಿಲ್ಲ ದೇವದನುಜರ್ಕಳೊಳೊರ್ವನೆ ನಿಂದು ಕಾದಿದಯ್
ಬಿನ್ನಣದಿಂದೆ ಭಾಪು ಶಬರೇಂದ್ರ ಎನುತ್ತುರೆ[೧] ಮೆಚ್ಚಿ ಫಲ್ಗುಣಂ ೮೬

ಮಾಣದೆ ಮತ್ತೆಱಗಿದನಾ
ಸ್ಥಾಣುವನಬ್ಬರಿಸಿ ಸಿಡಿಲ ಮಾಟ್ಕೆಯೊಳಭವಂ
ಕಾಣುತದಂ ಸೈರಿಸುತುಂ
ಕೇಣಂಬಡೆದೊತ್ತಿ ಮೆಟ್ಟಿದಂ ಗಾಂಡಿವಿಯಂ ೮೭

ಒಕ್ಕುದು ನೆತ್ತರ್ ಬಾಯಿಂ
ಮಿಕ್ಕಲರ್ದುಸಿರಿಡುವ ಮೂಗಿನೆರಡುಂ ಕಡೆಯಿಂ
ದಕ್ಕಟ ತಪ್ಪಾಯ್ತೆನುತುಂ
ಮುಕ್ಕಣ್ಣಂ ಮಱುಗಿ ಮನದೆ ಸಿಡಿಮಿಡಿಗೊಂಡಂ ೮೮

ವಚನ

ಅಂತು ಮರುಗಿ ಕರುಣಾಕರಂ ಕಪರ್ದಿ ಕೆಯ್ದೆಗೆದು ನಿಂದಾಗಳ್,

ಚಂಪಕ.

ಬಱೆತುದು ಧೈರ್ಯವಾರ್ಧಿ ಬಱನಾದುದು ಪೆರ್ಚಿದ[೨] ಶಕ್ತಿ ಬಿಂಕಮುಂ
ತೊಱೆದುದು ಚಿತ್ತವೃತ್ತಿ ನೆಱೆ ನೆರ್ಗಿದುದಿಂದ್ರಿಯರಾಜಿ ಬೀತುವೆ
ಟ್ಟೞುವೊಳಸೋರ್ದುದು[೩]ತ್ಸವಮುಡಂಗಿದುದುನ್ನತಿ ಕುಂದನಾಳ್ದನೆಂ
ಬೆಱಕದ ಹೇವಮಾವರಿಸೆ ನೊಂದು ಪಲುಂಬಿದನಾ ಧನಂಜಯಂ ೮೯

ಅಳ್ಳಿಱಿದುದು ಮಾನಸಮುಂ
ತಳ್ಳಂಕಂ ತನು ಬೆಮರ್ತುದಾಹವದೆಸಕಂ
ಪೊಳ್ಳಾದುದು ಚಿಂತೋ[೪]ದ್ಗಮ
ಮುಳ್ಳಲರ್ದವಂಗೆ ಸೋಲದಿಂ ಸುಖಮೊಳವೇ ೯೦

ಮತ್ತಂ,

೧ ತ್ತಿರೆ (ಯ) ೨ ಪೆರ್ಚಿನ (ಯ) ೩ ಸಾರ್ದುದು (ಜ)
೪ ಚೇತೋ (ಚ); ಚಿತ್ತೋ (ಗ, ತ)

ಪಳಯಿಸಿದಂ ಪಂಬಲಿಸಿದ
ನೊಳಗಾಱದನಾರ್ಪುಗುಂದಿದಂ ಬೇವಸದಿಂ
ಕಳವಳಿಸಿದನಾ ಪರಿಭವ
ದಳುರ್ಕೆಯಿಂ ನೊಂದ[೧]ನಂದಪಾರ್ಥಂ[೧] ಪಾರ್ಥಂ ೯೧

ವಚನ
ಅಂತುನೊಂದು,

ಒಳಗೊಳಗಱಲ್ದು ಚಿಂತಾ
ಕುಳತೆಯನೊಳಕೊಂಡು ಬೇಡನಿವನೆನ್ನಿಂದ
ಗ್ಗಳಿಸಿದನೆ ಮತ್ಪರಾಕ್ರಮ
ಮೊಳಸೋರ್ದುದೆ[೨] ಚಿತ್ರಮೆಂದವಂ ಖತಿ[೩]ಗೊಂಡಂ ೯೨

ಚಂಪಕ.
ಶಿವಪದಭಕ್ತಿಯಂ ತೊಱೆದೆನೋ ಶಿವನಿಂದೆಯನೆಯ್ದೆ ಕೇಳ್ದೆನೋ
ಶಿವನಿಜಭಕ್ತರಂ ಪೞೆದೆನೋ ಶಿವಪೂಜೆಯು[೪]ಗೆಯ್ಯದನ್ನಮಂ
ಸವಿದೆನೊ ಶೈವಸುವ್ರತಮನಾಳ್ದಡೆವಿಟ್ಟೆನೊ ಪೂರ್ವಜನ್ಮದೊಳ್
ಶಿವ ಶಿವ ತಾನದಲ್ಲದೊಡೆ ಸಾರ್ಗುಮೆ ಸಂದೆನಗೀ ಪರಾಭವಂ ೯೩

ಎಲ್ಲಂದದಿನಾಹವದೊಳ್
ಗೆಲ್ಲಂ ಶಬರಂಗೆ ಸೋಲಮೆನಗಾಯ್ತಕಟ
ನ್ನೆಲ್ಲಿಯದು ವಿಜಯನಾಮಸ
ಮುಲ್ಲಸಿತಖ್ಯಾತಿಯೆಂದು ಬಿಸುಸುಯ್ವುತ್ತುಂ ೯೪

ಜಗದೇಕವೀರಶಬ್ದಂ
ನಗೆಗೆಡೆಯಾಯ್ತೆನಗೆ ಪರ್ಬಿದತ್ತೆಣ್ದೆಸೆಯೊಳ್
ನೆಗಟ್ದಪಯಶಮಿಾ ಶಬರನಿ
ನೊಗೆದ ಪರಾಭೂತಿವೆತ್ತ ಕಾರಣದಿಂದಂ ೯೫

ಎತ್ತಣ ಬನಮೆತ್ತಣ ಕಿಟಿ
ಯೆತ್ತಣ ಕಾಟ್ಬ್ರಿಯದನಾಗಮಂ ಶಿವ ಶಿವ ಮೇ
ಣೆತ್ತಣ ಕಾಳೆಗದುಜ್ಜುಗ
ಮೆತ್ತಣ ಪರಿಭವಮಿದೆನಗೆ ಸಾರ್ದುದು ಚಿತ್ರಂ ೯೬

೧-೧ ನಂದು ಪಾರ್ದಂ (ಜ); ನಂದು ಪಾರ್ಥಂ (ಕ, ಗ, ತ) ೨ ಸಾರ್ದುದೆ (ಗ, ಚ, ತ)
೩ ಕತಿ (ಕ, ಗ) ೪ ಪೂಜನೆ (ಯ)

ಈತಂ ನರನಕ್ಕುಮೊ ಪಡಿ
ಮಾತೇಂ ಮುಗುಱ್ವಾನೆ ಶಬರನಪ್ಪನೊ ರಣಸಂ
ಜಾತಜಯಲಕ್ಷ್ಮಿಯಗ್ಗದ
ಬೂತಾಟಮೊ ತಿಳಿಯೆನೆಂದವಂ ಚಿಂತಿಸಿದಂ ೯೭

ವಚನ

ಎಂದು ತನ್ನೊಳಾಳೋಚನಂಗೆಯ್ದು,

ಚಂಪಕ.

ತಿಳಿದನೆ ಶಂಭುವೆಂದು ತಱಸಂದು ಮಹೋಜ್ಜ್ವಳಶೈವಶಕ್ತಿಯ
ಗ್ಗಳಿಕೆಯ ಕಂಡು ಕಂಡುಮವನಾಹವದೊಳ್ ತಿಳಿಯಲ್ಕೆ ಸಾಧ್ಯಮೇ
ವಿಳಸಿತವೇದರಾಶಿ ಸಲೆ ಕಾಣದ ದೇವನನದ್ವಿತೀಯನಂ
ತೊಳಗುವಖಂಡಚಿನ್ಮಯನನಾತ್ಮವಿಗುಪ್ತನನಪ್ರಮೇಯನಂ ೯೮

ತಪಮೊಳಸಾರ್ದುದು[1] ಮಂತ್ರದ
ಜಪಮಱಿದುದು ತೊಲಗಿದುದು ಮಹೇಶಧ್ಯಾನಂ
ಕುಪಿತಂಗೆನಗಂತವಱಿಂ
ದಪಜಯಮಿದು ನೆಗೞ್ದುದಲ್ಲದೊಡೆ ಸಮನಿಪುದೇ ೯೯

ವಚನ

ಎಂದು ಪಲವಂದದಿಂ ಪಲುಂಬಿ ವಿರೂಪಾಕ್ಷನುಪೇಕ್ಷೆಯಿಂದೀ ಪರಾಜಯಂ ತಗುಳ್ದುದೆಂದು ನಿಜಾಂತರಂಗದೊಳ್ ಬಗೆದು, ಕರುಣಾಬ್ಧಿಯಪ್ಪ ಶಂಕರನಂ ಕಿಂಕರತೆಯಿಂ ಸರಣ್ವೊಕ್ಕು, ತತ್ಕಾರುಣ್ಯಂಬಡೆದು ಪಗೆಯಂ ಪರಾಭವಿಪೆನೆಂದು ಕೌಂತೇಯಂ ಚಿಂತಾಪಂಕಮಂ ವಿವೇಕಜಳದಿಂ ತೊಳೆದು ವಿಮಳಮನಸ್ಕನಾಗಿ;

ಚಂಪಕ.

ಪರಮಶಿವಾಗಮೋಕ್ತವಿಧಿ[2]ಯಿಂ ಮಣಲಿಂ ನೆಗೞ್ದೊಂದು ಲಿಂಗಮಂ
ನಿರುಪಮಭಕ್ತಿಯಿಂ ತಿಱದು[3] ಪಡ್ಡಳಿ ಬಂದುಗೆ ಕಕ್ಕೆ[4] ಮುತ್ತ ಪಾ
ದರಿಗಳ ಪೂಗಳಂ ಮೃದುಳಬಿಲ್ವದಳಂಗಳನಲ್ಲಿ ತಂದು ಶಂ
ಕರನನೊಱಲ್ದು ಪೂಜಿಸಿದನರ್ಥಿತಪ್ಪೆರಿಜಯಂ ಧನಂಜಯಂ ೧೦೦

ಬಲವಂದು ರುದ್ರಸೂಕ್ತಮ
ನೊಲವಿಂದೋದುತ್ತೆ ಮಣಿದು ಮುಗುಳ್ದಿಱಗಿ ವಿನಿ
ರ್ಮಲಭಕ್ತಿಭಾವದಿಂ ಸಾಂ
ಜಲಿನಿಟಿಲಂ ನಿಗಮವಂದ್ಯ[5]ನಂ ಕೀರ್ತಿಸಿದಂ ೧೦೧

೧ ಸೋದರ್ದುದು (ಋ, ರ) ೨-೨ ಯಿಂದಲಿ ತನ್ನಯ ಚಿತ್ತಶುದ್ಧದಿಂ। ತಿರಿದು ವನೇಜ ಮೊಲ್ಲೆ ವರ (ಜ) ೪ ಎಕ್ಕೆ (ಚ) ೫ ವೇದ್ಯ (ಯ)

ತ್ರ್ಯಂಬಕ ಜಯಜಯ ವಿಧಿಕವ
ಳಾಂಬಕಶತಮುಖಮುಖಾವನತಪದ ಭುವನಾ
ಳಂಬಕ ಗಳರುಚಿಜಿತರೋ
ಳಂಬಕ ಹೇರಂಬಜನಕ ಜಿತಕುಸುಮಶರಾ ೧೦೨

ಚಂಪಕ.
ಜಯ ಜಯ ಕಾಲಕಾಲ ಫಣಿಭೂಷಣಭೀಷಣ ಸೋಮ ಕೋಮಲಾ
ಶಯ ಯಮಿನುತ್ಯ ನಿತ್ಯ ಶಿತಿಕಂಧರ ಸಿಂಧುರಕೃತ್ತಿವಸ್ತ್ರ ದು
ರ್ಜಯ ಭವಭಂಜನಾಂಜನವಿವರ್ಜಿತ ನಿರ್ಜಿತಘೋರಮಾರ ನಿ
ರ್ಜಯ ಭುವನೇಶ ಪಾಶಹರ ಕಿಂಕರಶಂಕರ ಪುಷ್ಟಿವರ್ಧನಾ ೧೦೩

ನಿನ್ನ ಪದಭೃತ್ಯ[೧]ನೆನಿಸಿ
ರ್ದನ್ನಂ ಗೆಲ್ದಂ ಕಿರಾತನೀತನನೀಗಳ್
ಬನ್ನಂಬಡಿ[೨]ಸುತೆ ಸೋಲಿಪ
ಪನ್ನತಿಕೆಯನಿತ್ತು ಪೊರೆ ಕೃಪಾಳುಗಳರಸಾ ೧೦೪

ಎನ್ನಾಳ್ದಂ ನೀನಿರುತಿರೆ
ಬನ್ನಮಿದೆನಗಾಗೆ ಕೊಱತೆಯಾವಂಗೆಂಬಾ
ಬಿನ್ನಣಮಂ ತಿಳಿದೆನ್ನಂ
ಮನ್ನಿಸಿ ರಿಪುಜಯಮನಿತ್ತು ಪೊರೆ ಪುರಮಥನಾ ೧೦೫

ವಚನ
ಎಂದು ಪಲವಂದದಿಂ ನುತಿಸಿ ದೈನ್ಯಂದೋಱಿ ಪಾರ್ಥಂ ಪ್ರಾರ್ಥಿಸಿ ಶಬರಂಗಭಿಮುಖನಾಗಿ ನಿಂದು ನಿರೀಕ್ಷಿಸಿ ನಿಜಭುಜಾಸ್ಫಾಲನಂಗೆಯ್ದು

ಉತ್ಪಲ.
ಇನ್ನಱಿಯಲ್ಕೆ ಬರ್ಪುದೆಲೆ ಧೂರ್ತಕಿರಾತ ಭವತ್ಪರಾಕ್ರಮ
ಪ್ರೋನ್ನತಿ[೩]ಯೆತ್ತರಂ ಪೊಱಮಡೆನ್ನಧಿನಾಥಮಹೇಶನೊಲ್ಮೆ ದಲ್
ಸನ್ನಿದಮಾ[೪]ದುದಿಂದೆ[೫]ನಗೆ ನಿನ್ನಸುವಂ ನೆಱೆ ಪೀರ್ವೆನಾವದೇ
ವನ್ನಿನಗೋತು ಬರ್ಪನವನಂ ಸದೆದಿಕ್ಕುವೆನೀಕ್ಷಣಾರ್ಧದೊಳ್ ೧೦೬

ವಚನ
ಎಂದು ರೋಷಾರುಣೇಕ್ಷಣದಿನಭೀಕ್ಷಿಸುತ್ತಿರೆಯಿರೆ,

೧ ಭಕ್ತ (ಚ) ೨ ಬಿಡಿ (ಗ, ತ)
೩ ದುನ್ನತಿ (ಚ) ೪ ಸನ್ನಿಧಿಯಾ (ವ)
೫ ದಿನ್ನೆ (ಚ)

ಚಂಪಕ.

ಸಲೆ ನೆಲಸಿರ್ದ ನುಣ್ಮಣಲ ಲಿಂಗದೊಳಂ ಶಬರಾಂಗದೊಳ್ ಸಮು
ಜ್ಜ್ವಲನರವಕ್ತ್ರಸಂಭವಮನಾ ಸ್ತವಮುಂ ಪಟಿಯಂ ಕಪರ್ದಿ ಮಂ
ಜುಲಗುಣವಾರ್ಧಿ ¹ಕೇಳ್ದುಮೆರಡಂ¹ ಸರಿಗಂಡು ಮನೋನುರಾಗಸಂ
ಕುಲತೆಯನಾಳ್ದನಂತೆ ನುತಿಯುಂ ಪಟಿಯುಂ ಸಮನಲ್ತೆ ಭವ್ಯರೊಳ್ ೧೦೭

ತರಳ

ಮಣಲ ಲಿಂಗದ ಮಸ್ತಕಾಗ್ರದ ಪುಷ್ಪಮಂಜರಿ ಮಾಣದಾ
ಕ್ಷಣಮೆ ತಳ್ತಡರ್ದಾ ಕಿರಾತನ ಮಂಡೆಯಲ್ಲಿರೆ ಕಂಡು ಕಾ
ರಣಮಿದೇಂ ಪೊಸತೆಂದು ಸಾದ್ಭುತಮಾನಸಂ ಮಗುಟ್ದೀಕ್ಷಿಸು
ತ್ತಣೆಯರಂ ಬಿಡದಿತ್ತ ಲಿಂಗದ ಶೂನ್ಯಶೀರ್ಷಮನರ್ಜುನಂ ೧೦೮

ಮತ್ತೇಭ.

ಇದನಿನ್ನುಂ ಮಗುಟ್ದೊರ್ಮೆ ನೋಟ್ಪೆನೆನುತುಂ ಪೂಗೊಂಚಲಂ ತಂದು ಸೂ
ಡಿದನಾ ಲಿಂಗದ ಮಸ್ತಕಾಗ್ರದೊಳೆ ಸಮ್ಯಗ್ಭಕ್ತಿಯಿಂದಾಗಮೋ
ಕ್ತದ ಮಾರ್ಗಂಬಿಡಿದೊಲ್ದು ಪೂಜಿಸಿ ಕರಂ ಕೊಂಡಾಡಿ ಮೆಯ್ಯಿಕ್ಕಿ ನೋ
ಡಿದನಿತ್ತಲ್ ಶಬರೋತ್ತಮಾಂಗದೆಡೆಯಂ ಪ್ರಾಂಚದ್ಗುಣಂ ಫಲ್ಗುಣಂ ೧೦೯

ಉತ್ಪಲ.

ಕಂಡನಖಂಡಪುಷ್ಪಭರಮಂಜರಿಯಂ ಶಬರೋತ್ತಮಾಂಗದೊಳ್
ಮಂಡಿತಲಿಂಗಮಸ್ತಕದೊಳಂತದನೀಕ್ಷಿಸಿ ಕಾಣದಾದನಾ
ಖಂಡಲಸೂನುವದ್ಭುತರಸಂಬಡೆದಾಟ್ದು ಭಯಾಬ್ಧಿಯಲ್ಲಿ ಮುಂ
ಕೊಂಡು ಮುಳುಂಗಿ ತೇಲ್ದುವವ²ನೀಕ್ಷಣಯುಗ್ಮಪಯಶ್ಚರದ್ವಯಂ ೧೧೦

ಚಂಪಕ.

ಹರ ಹರ ದೇವದೇವನಿವನಲ್ತೆ ಶಿವಂ ಭುವನೈಕವಲ್ಲಭಂ
ಗುರು ಸಕಲಾಮರರ್ಗೆ ಶಬರಾಕೃತಿಯಿಂ ಮದನುಗ್ರಹಾರ್ಥಮಿಾ
ಪರಿ ನಡೆತಂದನಲ್ತೆ ತಪದುಬ್ಬೆಗದುದ್ಭ್ರಮೆ ನೆತ್ತಿವತ್ತೆ³ ಸೈ
ತಿರದೆ ಮರುಳ್ತನಂದಳೆದಿದಿರ್ಚಿದೆನೆನ್ನವೊಲಜ್ಞನಾವನೋ ೧೧೧

ವಚನ

ಎಂದು ಬಗೆದಾಗಳ್,

ಚಂಪಕ.

ಪಡಿದೆಱಿದಂತೆ ಪಾಱಿತೆರ್ದೆ ಪವ್ವನೆ ಜುಮ್ಮನೆ ಮೆಯ್ನವಿರ್ ಪೊದ
ಟ್ದಡಿಕಿಱಿದತ್ತು ಘರ್ಮಜಲಮುಣ್ಮಿದುದಂಗದೊಳಾಗ್ರಹಗ್ರಹಂ
ಕಡೆದೊಲಗಿತ್ತು ಕೌತುಕರಸಂ ಬಗೆಗುರ್ವಿದುದುತ್ಸವಂ ಮಡ
ಲ್ತಡರ್ದುದು ಭೀತಿ ಬೇರ್ವಱಿದುದೇಟ್ಗಿಯನಾಳ್ದುದು ರಾಗಸಂಪದಂ ೧೧೨

೧-೧ ಕೇಳ್ದು ಮೆರೆದಂ (ಚ) ೨ ದವ (ಯ) ೩ ವತ್ತಿ (ಜ)

ಮತ್ತಂ,

ಉತ್ಪಲ.

ಬೀತುದು ಬಿಂಕಮೋಡಿದುದು ಮೂಢತೆ ಮೂಡಿದುದಶ್ರು ಕಣ್ಗಳೊಳ್
ಕಾತುದು ಭೀತಿವಲ್ಲರಿ ಮನೋಗದಮುಂ ತಱಿಸಂದು ನಿಂದುದು
ದ್ಭೂತಮಹಾದ್ಭುತಂ ಮನದೊಳಂಗದೊಳಾಯ್ತು ವಿವರ್ಣವೃತ್ತಿ ಚಿಂ
ತಾತುರನಾಗಿ ಬೆಳ್ಪಳಿಸಿ ಬೇವಸಮಂ ತಳೆದಂ ಧನಂಜಯಂ ೧೧೩

ಉಱಿವೆಳಗು ಸಂಜೆ ನಸುಮು
ಬ್ಬಳುರ್ದಂಬರದಂತೆ ತಿಳಿವು ರಾಗಂ ನೆಗಟ್ದು
ವ್ಮಳಮನೊಳಕೊಂಡ ಬಗೆಯಿಂ
ತಳವೆಳಗಾಗುತ್ತೆ ಪಾರ್ಥನಂದಿಂತೆಂದಂ ೧೧೪

ಚಂಪಕ.

ತಿಳಿದೆನೆ ಶಂಭುವೆಂದು ಬಹುಬಾಣದಿನೆಚ್ಚೊಡೆ ತಾಗದಂದದೇಂ
ತಿಳಿದೆನೆ ದಿವ್ಯಮಾರ್ಗಣದಿನಾನಿಸೆ ತಳ್ವದೆ ನುಂಗಿದಂದದೇಂ
ತಿಳಿದೆನೆ ಕೆಯ್ಯ ಚಾಪಮನಡಾಯುಧಮಂ ಸೆಳೆದೀಟ್ದುಕೊಂಡೊಡಂ
ತಿಳವೊಳಸಾರ್ದು[1]ದಕ್ಕಟ ಪುರಾಕೃತಕರ್ಮದ ಪೆರ್ಮೆಯೆಂತುಟೋ ೧೧೫

ಉತ್ಪಲ.

ಆವನ ಮಾಯೆಯಿಂ ತ್ರಿಜಗಮಾದುದು ಸೂರ್ಯಸುಧಾಕರರ್ ಪೊದ
ಟ್ದಾವನ ತೇಜದಿಂ ಬೆಳಗುವರ್ ಭುವನೋತ್ಕರರಕ್ಷೆ ಶಿಕ್ಷೆ ಮೇಣ್
ಆವನಧೀನಮಾವನೊಳೆ ತೋರ್ಪುದು ವಿಶ್ವಮಿದೆಂದುಮಾ ಮಹಾ
ದೇವನೊಳಾಹವಂ ಗಡೆನಗದ್ಭುತಮದ್ಭುತಮೇನನೆಂದಪೆಂ ೧೧೬

ಆವನನರ್ಚಿಪರ್ ಮಖದೊಳಾವನಮಂತ್ರಜಪಂಗಳಿಂದೆ ಸಂ
ಭಾವಿಪರಾವನಂ ಭಜಯಿಪರ್ ಮುನಿಗಳ್ ಮನುಗಳ್ ಸುಭಕ್ತಿಯಿಂ
ದಾವನ ಪಾದಪದ್ಮಮನೆ ಜಾನಿಪರಗ್ಗದ ಯೋಗಿವರ್ಯರಾ
ದೇವನೊಳಕ್ಕಟಾ ಪೊಣರ್ದೆನೆನ್ನದೊ ಸಂದ ವಿಮೋಹದೆಟ್ತರಂ ೧೧೭

ಅನವದ್ಯನೊಳಪ್ರತಿಮನೊ
ಳನಘನೊಳಾದ್ಯಂತಶೂನ್ಯನೊಳ್ ಸಕಲಜಗ
ಜ್ಜನಕನೊಳಭ್ಯರ್ಚಿತಚೇ
ತನಗತನೊಳಿದಿರ್ಚಿ ಧುರದೊಳೆಚ್ಚಾಡಿದೆನೇ ೧೧೮

[1] ಸೋರ್ದು (ಯ)

ಪರವೈಶ್ವರ್ಯಾಸ್ಪದನೊಳ್
ಪರಿಪೂರ್ಣಪರಪ್ರಕಾಶನೊಳ್ ಪಶುಪತಿಯೊಳ್
ಪರಶಕ್ತಿಯುಕ್ತನೊಳ್ ಪರ
ತರಮಹಿಮನೊಳಾಂತಿದಿರ್ಚಿತೆಚ್ಚಾಡಿದೆನೇ ೧೧೯

ಸ್ವಸಮಾನಾಧಿಕರಹಿತನೊ
ಳಸಮಾಕ್ಷನೊಳಾಗಮೌಘಜನಕನೊಳಸುರ
ಪ್ರಸರಪ್ರಹಾರಿಯೊಳ್ ತಾ
ಮಸರಹಿತನೊಳಾಂತಿದಿರ್ಚಿತೆಚ್ಚಾಡಿದೆನೇ ೧೨೦

ಪ್ರಣವಾರ್ಥನೊಳನುಪಮಗುಣ
ಗಣಯುತನೊಳತರ್ಕ್ಯವಿಭವನೊಳ್ ಶ್ರುತಿನಿವಹ
ಪ್ರಣುತನೊಳಖಿಳಸುಪರ್ವಾ
ಗ್ರಣಿಯೊಳ್ ಸೆಣಸಾಂತು ಮೃಡನೊಳೆಚ್ಚಾಡಿದೆನೇ ೧೨೧

ಗಿರಿಧನ್ವನೊಳಲ್ಪಧನು
ರ್ಧರನಾಂ ಸೆಣಸಲ್ ಸಮರ್ಥನೇ ಹರಿಶರನೊಳ್
ಪರಿಗತಕೃಶಶರನಖಿಳಾ
ಮರವರನೊಳ್ ನರನತರ್ಕ್ಯಮಹಿಮನೊಳಬಲಂ ೧೨೨

ಚಂಪಕ.
ಶಿವ ಶಿವ ಸಲ್ವುದೇ ಸಮರಮಿಂತೆನಗದ್ವಯನೊಳ್ ಮಹೇಶನೊಳ್
ಭವಹರನೊಳ್ ಮಹಾಮಹಿಮನೊಳ್ ಜ್ವಲನಾಕ್ಷನೊಳಕ್ಷಯಾಂಗನೊಳ್
ಪ್ರವಿದಿತನಾದಬಿಂದುಕಳೆಯಂ ಮಿಗೆ ಮೀಱಿದನೊಳ್ ಶ್ರುತಿಸ್ಮೃತಿ
ಸ್ತವನಕತೀತನೊಳ್ ಜಗದ ಜೀವರನಾಡಿಪ ಸೂತ್ರಧಾರನೊಳ್ ೧೨೩

ಮತ್ತೇಭ.
ಕಲಹಂ ತಕ್ಕುದೆ ನೋಟ್ಪೊಡಿಂತೆನಗೆ ಸಚ್ಚಿದ್ರೂಪನೊಳ್ ನಿತ್ಯನಿ
ರ್ಮಳನೊಳ್ ಪ್ರಾಕೃತನಾಮರೂಪಗುಣಚೇಷ್ಟಾಲಂಬನಂದೋಱದು
ಜ್ಜ್ವಳನೊಳ್ ಸಂದಣುವಿಂಗಣುಸ್ಥಿತಿ ಮಹತ್ತಿಂಗಂ ಮಹತ್ತಾದ ನಿ
ಶ್ಚಲನೊಳ್ ನಿರ್ಭಯನೊಳ್ ನಿರಸ್ತಜಡತಾಸಂಸರ್ಗನೊಳ್ ಭರ್ಗನೊಳ್ ೧೨೪

೧-೧ ಧನುವಿನೊ (ಜ)

ಹರನೊಲವನಾಂಪ ಬಗೆಯಿಂ
ಪಿರಿದು ತಪಂಗೆಯ್ದು ಬಱಿಕಮದನಳಿದೀಗಳ್
ಕರಮಜ್ಞತೆಯಿಂ ಪೊಣರ್ದೆಂ
ಹರಚರಣದ್ರೋಹಕಿಂತು ಭಾಜನನಾದೆಂ ೧೭೫

ಮತ್ತೇಭ.

ಕ್ಷಿತಿಯೊಳ್ ಕೃಚ್ಛ್ರಮುಖಪ್ರಸಿದ್ಧತಪದಿಂ ಯಾಗಂಗಳಿಂ ತೀರ್ಥಸಂ
ತತಿ[1]ಸೇವಾವಿಧಿಯಿಂದೆ ಮಂತ್ರಜಪದಿಂ ದಾನಾದಿಯಿಂ ನಾಡೆ ನಿ
ಷ್ಕೃತಿ ಶಾಸ್ತ್ರಂಗಳೊಳುಂಟು ದುಸ್ತರಮಹಾಪಾಪಕ್ಕಮಿಲ್ಲಿಲ್ಲ ನಿ
ಶ್ಚಿತಮೆಂತುಂ ಪರಿಹಾರಮುತ್ಕಟಶಿವದ್ರೋಹಕ್ಕೆ ಶಾಸ್ತ್ರೌಘದೊಳ್ ೧೭೬

ಉತ್ಪಲ.

ವನ್ಯಕಿರಾತನೆಂದು ಬಗೆದೆಚ್ಚೆನಿದಿರ್ಚಿದೆನಜ್ಞಭಾವದಿಂ
ಜನ್ಯಮನಾಂತು ನಿಂದು ಮಿಗೆ ಮೆಯ್ವೊಣರ್ದೆಂ ಮದನುಗ್ರಹಾರ್ಥಮಾ
ಮಾನ್ಯಮಹೇಶ್ವರಂ ಮಱಿಯೊಳೆಯ್ದಿದುದಂ ತಿಳಿದಾತನಲ್ತು ಸೌ
ಜನ್ಯವಿದೂರನಾದೆನಕಟೆನ್ನವೊಲಾವನೊ ಗಾಂಪನುರ್ವಿಯೊಳ್ ೧೭೭

ಚಂಪಕ.

ಸಕಲ[2]ಸುರೋರಗಾಸುರ[2]ನರರ್ಕಳನಸ್ತ್ರದೆ ಗೆಲ್ವ[3] ಪುಷ್ಪಸಾ
ಯಕಜಗದೇಕವೀರನ ಮದಂಗಿಡೆ ಮರ್ದಿಸಿದಪ್ರತರ್ಕ್ಯನೊಳ್
ಪ್ರಕಟಕೃತಾಂತಮರ್ದಕನೊಳಲ್ಪಧನುರ್ವಿಶಿಖಂಗಳಿಂ ಜಯೋ
ತ್ಸುಕತೆಯೊಳೆಚ್ಚು ಗೆಲ್ವ ಬಗೆಯಾಂತೆನಿದೆನ್ನಯ ಮೋಹಮೆಂತುಟೋ ೧೭೮

ಉತ್ಪಲ.

ಅಂಗುಟದಿಂ ರಸಾತಳಕೆ ಮೆಟ್ಟಿದನಾ ದಶಕಂಠನಂ ಮಹಾ
ಸಂಗರದೊಳ್ ವಿಭಂಗಿಸಿದನಾಂತಸುರರ್ಕಳನಾರ್ದು ಸುಟ್ಟನಾ
ರ್ಪಿಂ ಗಗನಸ್ಥಿತಾಸುರಪುರತ್ರಯಮಂ ಸದೆದಂ ಕೃತಾಂತನಂ
ತುಂಗಪರಾಕ್ರಮಂ ಗಿರಿಶನೀತನೊಳೆಂತುಟೊ ಗೆಲ್ವು[4]ದುಜ್ಜುಗಂ ೧೭೯

ಮಹಾಸ್ರಗ್ಧರೆ

ಮುಳಿದಾಂ ನೋಟ್ಪಂದಮಾ ಕಣ್ಣೆರಡರೊಳೆ ಮಹಾವಿಶ್ವತಶ್ಚಕ್ಷುವಂ ಕೆಯ್
ಗೊಳಿಸುತ್ತಿರ್ಕೆಯ್ಗಳಿಂ ಕಾದುವ ಸಡಗರಮಾ ವಿಶ್ವತೋಬಾಹುವೊಳ್ ಸಾ
ರ್ದೆಳಸುತ್ತುಂ ಪೋರ್ವ ಬಿಂಕಂ ಪದಯುಗದೊಳಮಾ ವಿಶ್ವತಃಪಾದನೊಳ್ ಸಂ
ಗಳಿಸಿತ್ತೀ ವಿಶ್ವತೋವಕ್ತ್ರನೊಳೆ ಪುರುಡುಮಾತೆನ್ನದೋ ಮದ್ವಿಮೋಹಂ ೧೮೦

೧ ತತಿ (ಚ) ೨-೨ ಸುರಾಸುರೋರಗ (ಯ) ೩ ಗೆಲ್ವ (ಯ) ೪ ಗೆಲ್ಲ (ಕ, ಯ)

ಉತ್ಪಲ.

ಮೂದಲೆವಾತುಗಳ್ ಗಡ ಮಹಾನಿಗಮೋಕ್ತಿಗತೀತನೊಳ್ ಜಯಾ
ಹ್ಲಾದದ ಝುಂಕೆಗಳ್ ಗಡ ಜಗತ್ತ್ರಯದುರ್ಜಯನೊಳ್ ಶರೌಘದಿಂ
ಭೇದಿಪ ಬಿನ್ನಣಂ ಗಡ ಜಿತಾಂತಕನೊಳ್ ಮಿಗೆ ಮುಷ್ಟಿಯುದ್ಧದಿಂ
ಕಾದುವ ಕಜ್ಜಮುಂ ಗಡ ನಿರಂಗನೊಳಿಂತಿದು ಚಿತ್ರಮಲ್ಲವೇ ೧೩೧

ಚಂಪಕ.

ಹರ ಹರ ತಾರ್ಕ್ಷ್ಯನೆತ್ತ ಫಣಿಯೆತ್ತ ಮಹಾವನವಹ್ನಿಯೆತ್ತ ಕಾಱ್
ಮರಮುಮದೆತ್ತ ವಜ್ರಧರನೆತ್ತ ಧರಾಧರಮೆತ್ತ ಮತ್ತಕೇ
ಸರಿಪತಿಯೆತ್ತ ವನ್ಯಗಜಮೆತ್ತ ಪೊಣರ್ಕೆಗಿವೆಂತು ನಿಲ್ವುವಾ
ಪರಿ ಜಗದೇಕದೇವ ಶಿವನೆತ್ತ ಧನಂಜಯನೆತ್ತ ಧಾತ್ರಿಯೊಳ್ ೧೩೨

ಮತ್ತೇಭ.

ಭಯಭಕ್ತಿಸ್ಪೃಹೆವೆತ್ತು ನೋೞ್ಪ ನಯನಂ ರೋಷಾರುಣಾವೇಶದು
ರ್ನಯಕಿಂಬಾಯ್ತು ಪದಾಬ್ಜಪೂಜನಕೆ ಪಕ್ಕಾಗಿರ್ದ ಕೆಯ್ ಕೆಯ್ದುವಂ
ರಯದಿಂ ತಾಳ್ದಿದಿರಾಂತುದೀಶ್ವರಮಹಾಮಂತ್ರಕ್ಕೆ ಬೀಡಾದ ಜಿ
ಹ್ವೆಯೆ ಮಾಱುತ್ತರವಾಂತುದಕ್ಕಟ ಮಹಾವ್ಯಾಮೋಹಮೇಗೆಯ್ಯದೋ ೧೩೩

ಉತ್ಪಲ

ಆವಳ ಪಾದಪಂಕಜದಧಸ್ಸ್ಥಳದೊಳ್ ಸಲೆ ಸುಪ್ರತಿಷ್ಠಿತರ್
ಭಾವಿಸೆ ಧಾತೃದೈತ್ಯರಿಪುರುದ್ರಮಹೇಶಸದಾಶಿವರ್ಕಳಾ
ಪಾವನಶಕ್ತಿಯಾವನಡಿಗಾತ್ಮಶಿರಸ್ಕಮನಾನ್ಕೆಗೆಯ್ದ[1]ಳಾ
ದೇವನೊಳಾಂ ದಿಟಂ ಶಿವ ಶಿವಾ ಮುಳಿಸಿಂ ಸೆಣಸಲ್ ಸಮರ್ಥನೇ ೧೩೪

ಪುಟ್ಟಿದ ಪೊಂದದುಂಟೆನಿಸದಿಲ್ಲೆನಿಸುತ್ತಿರದೆಯ್ದೆ ಮಾಯೆಯಂ
ಮುಟ್ಟದ ಪಿಂಗದೋಸರಿಸದೊಂದಿರದಾತ್ಮರನಾತ್ಮಪಾಶದಿಂ
ಕಟ್ಟುವ ಕಟ್ಟುವಗ್ಗಮನದಂ ಪಱಿದಿಕ್ಕುವ ಮಿಕ್ಕು ತೋರ್ಪ ಕೆಯ್
ಗೆಟ್ಟುವ[2] ಮುಟ್ಟೆ ಸಿಲ್ಕದ ಮಹಾತ್ಮನೊಳಪ್ಪುದೆ ಮತ್ಸರಾಕ್ರಮಂ ೧೩೫

ಎಂ[3]ದಿಂತು ಚಿಂತಿಸುತೆ ಪಲ
ವಂದದೆ ಬಗೆನೊಂದು ಹಮ್ಮದಂಬೋಗಿರೆ ಪಾ
ರ್ಥಂ ದಯೆಯಿಂದವನಿರ್ದೆಡೆ
ಗಿಂದುಧರಂ ತಳರ್ದು ತಣ್ಪುವೀಱಿದನಾಗಳ್ ೧೩೬

೧ ಗೆಯ್ವ (ಕ) ೨ ಗಟ್ಟುವ (ಯ) ೩ ಬಂ (ತ)

ಚಂಪಕ.

ಪೊಗೆಯಳಿದಗ್ನಿಯಂತೆ ಮುಗಿಲೋಡಿದ[1] ಭಾಸ್ಕರನಂತೆ ಮಾಯೆ ಮೆಯ್
ದೆಗೆದ ನಿಜಾತ್ಮನಂತಿರೊಱೆಯುರ್ಚಿದ ಕೂರಸಿಯಂತೆ ಕಾಂತಿ ಕೆಯ್
ಮಿಗೆ ಶಬರಾಂಗಮಂ ತೊಱೆದು ಪೂರ್ವನಿಜಾಕೃತಿವೆತ್ತು ಲಂಪಿನಿಂ
ಸೊಗಯಿಸುತಿರ್ದನಾಗಮಶಿರಂ ಪೊಗಟುತ್ತಿರೆ ಚಂದ್ರಶೇಖರಂ ೧೩೭

ಗದ್ಯ

ಇದು ನಿಖಿಲ[2]ಭುವನೈಕವಲ್ಲಭಸುರಾಸುರೇಂದ್ರವರದಕರುಣಾವರಣಪರಮಶಿವಲಿಂಗ ತರುಣಪತಂಗಸಂಗತಮಂಗಳ ಹೃದಯಾರವಿಂದಬಂಧುರ [3]ಸರಸಸಜ್ಜನ[3] ಮಾನಿತೋಭಯಕವಿತಾವಿಚಕ್ಷಣ[4] ಶ್ರೀಷಡಕ್ಷರಿದೇವ ವಿರಚಿತವಾದ ಕಿರಾತರುದ್ರಲೀಲಾಕಥನ ವಿಪುಳಪ್ರಬಂಧದೊಳ್ ಶಬರಶಂಕರಪಾರ್ಥಯುದ್ಧವರ್ಣನಂ ಚತುರ್ಥಾಶ್ವಾಸಂ ಪರಿಸಮಾಪ್ತಂ

೧ ಲೊಡ್ಡದ (ಗ, ಜ, ತ)
೨ ಸಮಸ್ತ (ಚ, ಜ,)
೩-೩ ಸರಸಜನ (ಯ)
೪ ವಿಶಾರದ (ಯ)

# ಪಂಚಮಾಶ್ವಾಸಂ

ಶ್ರೀಸರ್ವಮಂಗಳಾಮುಖ
ಭಾಸುರಪೂರ್ಣೇಂದುರುಚಿಚಕೋರಂ ವಿಶ್ವಾ
ವಾಸಂ ನಿಗಮಸ್ತುತಸುವಿ
ಲಾಸಂ ಮಾೞ್ಕೆಮಗೆ ಸೌಖ್ಯಮಂ ಶಿವಲಿಂಗಂ ೧

ಮಹಾಸ್ರಗ್ಧರೆ
ರವಿಕೋಟಿದ್ಯೋತಮೊತ್ತಂ ತೊಳಗೆ ಶಶಿಕಲಾಸ್ವರ್ಧುನೀಜೂಟನಂಗೋ
ದ್ಭವಭಸ್ಮಾಲಿಪ್ತನಕ್ಷತ್ರಯಕಲಿತನನಂತಾಹಿ[೧]ಭೂಷಂ ಮಹಾಕೃ
ತ್ತಿವಸಾನಂ[೨] ಪಂಚವಕ್ತ್ರಂ ದಶಭುಜನಸಿತಗ್ರೀವನೊಲ್ದೊಪ್ಪಿದಂ ಟಂ
ಕವರಾಭೀತಿತ್ರಿಶೂಲಾದ್ಯುಪಲಸಿತಕರಂ ದಿವ್ಯರೂಪಂ ಮಹೇಶಂ ೨

ಎಳವಳಿಕಿನ ಬೆಳ್ವೆಳಗಂ
ಬೞಲ್ಚಿ ಶಶಿರುಚಿಯೊಳೆರಕವಿಟ್ಟಂದದಿನೇಂ
ತೊಳಗಿದುದೊ ಧವಳಕಿರಣೋ
ಜ್ಜ್ವಳಸದ್ಯೋಜಾತವದನಮದು ಪರಶಿವನಾ ೩

ಎಳನೇಸಱ ಬಿಂಬದ ಕೆಂ
ಬೆಳಗಂ[೩] ತೆಗಟ್ದ[೪]ಲರ್ದ ದಾಸಳದ[೫] ಪೊಸಗೆಂಪಂ[೬]
ಪೞಿಕೆಯ್ದು ವಾಮದೇವೋ
ಜ್ಜ್ವಳವದನಂ ಸೊಗಯಿಸಿರ್ದುದಗಜಾಧವನಾ[೭] ೪

ಭ್ರಮರಾಂಜನಾಭ್ರರುಚಿ ವಿ
ಭ್ರಮಮತಿಸಿತಕುಟಿಲದಂಷ್ಟ್ರಮಕ್ಷಿತ್ರಯಸಂ
ಕ್ರಮಿತಂ ಕರಮೆಸೆದುದಘೋ[೮]
ರಮುಖಂ ಫಣಿಕುಂಡಲೋಜ್ಜ್ವಲಂ ಪುರಹರನಾ ೫

೧ ನಂಗಾಹಿ (ಚ) ೨ ವಿವಾಸಂ (ಚ) ೩ ಬೆಳರಂ (ಗ, ತ) ೪ ತೆಗೆದ (ಚ)
೫ ದಾಸಣದ (ಯ) ೬ ಕೆಂಪಂ (ಕೈಬರೆಹದ ಪ್ರತಿಗಳಲ್ಲಿ) ೭ ವರನಾ (ಚ)
೮ ಸೆದುದು ಘೋ (ಜ)

ಅಲರ್ದ[1] ಪೊಸಕರ್ಣಿಕಾರದ
ಸುಲಲಿತನವಕನಕಕಂಜಕಿಂಜಲ್ಕದ ಮಂ
ಜುಲರುಚಿಯಂ ಪಟುದೆಸೆದುದು
ವಿಲಸಿತತತ್ಪುರುಷವಕ್ತ್ರಮಹಿಕುಂಡಲನಾ ೬

ಎಳಮುತ್ತಿನ ಶಂಖದ ಬೆ
ಳ್ವೆಳಗಂ ಮುಕ್ಕುಳಿಸಿದಂತೆ ತೊಳತೊಳಗುವ ಸೈ
ಪಳವಡೆ ನಯನತ್ರಯಮಂ
ಜುಳಮೀಶಾನಾಸ್ಯವೊಪ್ಪಿದುದು ಶಶಿಧರನಾ ೭

ಮಹಾಸ್ರಗ್ಧರೆ
ಘನತೇಜಂ ರತ್ನಮಾ ರತ್ನದಿಮಧಿಕಕರಂ ಕಾಂಚನಂ ರತ್ನದಿಂ ಕಾಂ
ಚನದಿಂ ತೀವ್ರಾಂಶುಯುಕ್ತಂ ಪಳಚನೆ ಪೊಳೆವೊಳ್ಮಿಂಚುಮಾ ರತ್ನದಿಂ ಕಾಂ
ಚನದಿಂದೊಳ್ಮಿಂಚಿನಿಂದಂ ರವಿರುಚಿ ಪಿರಿದೊಪ್ಪಿರ್ಕುಮಾ ರತ್ನದಿಂ ಕಾಂ
ಚನದಿಂದೊಳ್ಮಿಂಚಿನಿಂದಂ ರವಿರುಚಿಯಿನಳುಂಬಂ ಮಹೇಶಪ್ರಕಾಶಂ ೮

ಚಂಪಕ.
ತುಱುಲಳವಾಂತು ನಿಂದ ಮಿಗಬೇರ[2]ನನಿಕ್ಕಿ ಪೊಣರ್ಕೆಗಾರ್ಪು ಸಂ
ಗಳಿಸಿದಿರಾಂತ ಪಲ್ಲಮಱರಕ್ಕಸನಂ ಸದೆದಣ್ಕೆ ಚುರ್ಚಿ ಬಾಂ
ಬೊಟಲನೊಡರ್ಚಿ ನಲ್ಪೊಗಮನಗ್ಗಿಮೊಗರ್ಗೆ ಸಮಂತು ಬೆಳ್ಗಸಂ
ದಳೆದೆಸೆದಿರ್ದ ಬಾನ್ನವಿರನೊಳ್ವರಿಜಂ ತಳೆದೊಪ್ಪಿ ತೋಱದಂ ೯

ಶ್ರುತಿವೀಥಿ[3] ಮುಗಿದ ಕೆಯ್ಗಳಿ
ನತಿಶಯಮೆನೆ ಪೊಗಟ್ವ ಮಂಗಳಧ್ವನಿ ದಿವಿಜ
ಪ್ರತತಿಯ ಜಯಜಯರುತಿ ಗಣ
ನುತಿನಿನದಂ ದೆಸೆಯನಳುರ್ದದೇಂ ಮುಸುಕಿದುದೋ ೧೦

ಚಂಪಕ.
ವಿತತಸುಗಂಧಿ[4]ಸಾರಸುರಭೀಕೃತದಿಙ್ಮುಖಚಂಚರೀಕಸಂ
ಗತಮಕರಂದಪೂರ್ಣಸುಮನೋಗಣಪಾಣಿವಿಮುಕ್ತಭೂರಿದಿ
ವ್ಯತರುಲತಾಂತವೃಷ್ಟಿ ಸುರಭೇರಿಯ ನಿರ್ಭರನಾದಮುಣ್ಮೆ ಸ
ನ್ನುತಸುರರಾರ್ದುಘೋಷೆಯೆನೆ ವಿಜೃಂಭಿಸಿ ಸೂಸಿದುದೀಶ್ವರಾಂಘ್ರಿಯೊಳ್ ೧೧

೧ ಅಲರ್ದು (ಗ, ತ); ಅಲರ್ವ (ಯ) ೨ ದೇರ (ಯ); ಭೇದ (ಜ)
೩ ಶ್ರುತಿ ವಿತತಿ (ಯ) ೪ ಗಂಧ (ಯ)

ಹರಗಣಮುಂ ಸುರಗಣಮುಂ
ಕಿರಾತವೇಷಮುನಗಲ್ದು ದಿವ್ಯಾಭರಣಾಂ
ಬರಗಂಧಮಾಲಿಕಾಬಂ
ಧುರಮೆಸೆದುದು ಮುನ್ನಿನಂತಿರಭವನ ಪೊರೆಯೊಳ್ * ೧೨

ಚಂಪಕ.
ಉಱಿದು ಪುಳಿಂದಿನೀವಿಹಿತವಿಭ್ರಮಮಂ ಸುರಕಾಮಿನೀಜನಂ
ಬಳಸಿರೆ ತಾನುಮಂತೆ ನಗನಂದನೆ ಹಾರಕಿರೀಟಕುಂಡಲೋ
ಜ್ಜ್ವಳಕಳಕಾಂಚಿ ಕಂಕಣಪದಾಂ<sup>೧</sup>ಗದ ಮುಖ್ಯವಿಭೂಷಣಾಳಿ ಕಣ್
ಗೊಳಿಸಿರೆ ದೇವದೇವನೆಡದೊಳ್ ನೆಲಸಿರ್ದಳುದಾರ<sup>೨</sup>ಶೋಭೆಯಿಂ ೧೩

ಆಗಳ್,

ಚಂಪಕ.
ಬೆಮರ್ವ ಕಳೇವರಂ ಸುರಿವ ಸಂತಸಗಣ್ಬನಿ ತಳ್ತ ಕಂಪಸಂ
ನಿಮಿರ್ದಸೆವಂಗರೋಮತತಿ ಕಣ್ಗೊಳಿಸುತ್ತಿರೆ ತಳ್ವದೆಟ್ದು<sup>೩</sup> ಸಂ
ಭ್ರಮದ ಪೊದಱ್ಕೆಯಿಂ ಮುದದ ಪೆರ್ಚುಗೆ ಸಂದಣಿಗೊಳ್ವಿನಂ ಪದಾ
ಬ್ಜಮುನಮರ್ದೊಪ್ಪೆ ಮೌಳಿ ಮಣಿದಂ ಮಹಿಯಂ ತನು ಸೋಂಕೆ ಪಾಂಡವಂ ೧೪

ವಚನ
ಅಂತೆಱಗಿ ಸರುಜಂ ಸಂಜೀವನಮಂ ಸವಿದಂತೆ, ಬಡವಂ ಕಡವರಂಗಂಡಂತೆ, ಕಡಲೊಳಾಟ್ವಿಂ ತೆಪ್ಪಮನಪ್ಪಿದಂತೆ, ಜಾತ್ಯಂಧಂ ಕಣ್ಬಡೆದಂತೆ ನಿರತಿಶಯಸಂಮುದ<sup>೪</sup>ಮನೊಳಕೊಂಡು ಕರಾರವಿಂದಂಗಳಂ ಪಣೆಯೊಳಮರ್ಚಿ ನಿಂದು;

ಚಂಪಕ.
ಪದತಳದೊಳ್ ತೊಡಂಕಿ ಪರಿದಾಡಿ ಪೊದಱ್ದಿಸೆವಂಗದೇಶದೊಳ್
ಪದೆದುರದಲ್ಲಿ ಸಯ್ತುರಿದು ಮಂಜುಳಕಂಠಮನಪ್ಪಿ ವಕ್ತ್ರಪ
ದ್ಮಮೊಳೆಡೆಗೊಂಡು ಸುತ್ತಿ ಸುಱಿದಾಡಿ ಬೞಲ್ದು ಸರಿತ್ಸುಧಾಂಶುಗಳ್
ಪುದಿದ ತದೀಯಮೌಳಿಯೊಳೆ ವಿಶ್ರಮಿಸಿರ್ದುದು ದೃಷ್ಟಿ ಪಾರ್ಥನಾ ೧೫

ವಚನ
ಅಂತು ಸಡಗರದಿನವನಭವನನಭೀಕ್ಷಿಸಿ,

ಚಂಪಕ.
ಜಯ ಜಗದೀಶ ದೇವ ಜಯ ಚಿನ್ಮಯರೂಪ ಜಯಾದ್ರಿಜಾಕುಚ
ದ್ವಯಹರಿಚಂದನಾಂಕ ಜಯ ನಿರ್ಜಿತಪಾಶ ಜಯಾಗಮಾಂತಸಂ
ಚಯನುತಪಾದಪದ್ಮ ಜಯ ಭೂಧರಧರ್ಮ ಜಯಾಶ್ರಯಾಶಸಂ
ಶ್ರಯನಿಜಫಾಲನೇತ್ರ ಜಯ ನಿರ್ಜರಪೂಜ್ಯ ಜಯಾಂತಕಾಂತಕಾ ೧೬

೧ ವರಾಂ (ಯ) ೨ ಉದಾತ್ತ (ಚ) ೩ ದೇಳ್ವ (ಯ) ೪ ಸಮ್ಮುದಕ (ಯ)
* ಈ ಪದ್ಯವು 'ಯ' ಪ್ರತಿಯಲ್ಲಿಲ್ಲ; ಬಿಟ್ಟು ಹೋದಂತೆ ತೋರುತ್ತದೆ.

ಉತ್ಪಲ.

ಭಕ್ತಕುಟುಂಬಿ ಭಕ್ತಜನವತ್ಸಲ ಭಕ್ತಭವಾದ್ರಿಶಂಬ ಸ
ದ್ಭಕ್ತಸಹಾಯ ಭಕ್ತಸುಖಸಿಂಧುಸುಧಾಕರ ಭಕ್ತಪಾಲನೋ
ದ್ಯುಕ್ತ ನಿರೀಹಭಕ್ತಪರವೋಕ್ಷದ ಭಕ್ತಮನಸ್ಸರೋಜಸಂ
ಸಕ್ತಮರಾಳ ಭಕ್ತಪರಿಷದ್ವಿಪದ[೧]ರ್ಣವಕುಂಭಸಂಭವಾ ೧೭

ಮಹಾಸ್ರಗ್ಧರೆ

ಚಳಚಿತ್ತಂ ಜಾಡ್ಯವೃತ್ತಂ ಚಪಳಮತಿ ಮದಾಂಧಂ ಮಹಾಮೋಹಮೂರ್ಖಾ
ನಿಳನಾಶಾಪಾಶಬದ್ಧಂ ಕುಟಿಲನಧಮನಾಂದೆನ್ನೊಳಾರಯ್ವುದೇಂ ನಿ
ರ್ಮಳಭಕ್ತಿಜ್ಞಾನಭಾಸ್ವದ್ಗುಣಗಣಮನುಮಾನಾಥ ಸರ್ವಾಪರಾಧಂ
ಗಳನೀಗಳ್ ತಳ್ವದೆಂತುಂ ಮಱೆ ಪೊರೆ ಪುರುಳಿಲ್ಲಿಲ್ಲಮೆನ್ನೊಳ್ ಪುರಾರೀ ೧೮

ಚಂಪಕ.

ಅಱಿದಱಿದುಂ ಮತಿಭ್ರಮಿತನಾದ ಮದಾಂಧಕನಾನೆ ಕಂಡು ಕಂ
ಡೆಱಗದ ಖೂಳನಾನೆ ಕುಱಿವಾನಿಸನಾನೆ ಕುಬುದ್ಧಿಯಾನೆ ಕ
ಟ್ಟೞಿಕೆಯ ದುಷ್ಟನಾನೆ ಮಱೆ ದೇವ ಮದೀಯಶತಾಪರಾಧಮುಂ
ಮೆಱೆ ಕರುಣಾಬ್ಧಿ ನಿನ್ನ ಸುಗುಣೋನ್ನತಿಯಂ ಭುವನೈಕವಲ್ಲಭಾ ೧೯

ಕರುಣಿಸು ಕಾಲಸಂಹರ ಕಲಾಪಕಲಾಧರ ಸಾರಸತ್ಕೃಪಾ
ಕರ ಶರಣಾಗತಾದರ ಸುರಾಹಿತಭೀಕರ ಧೀರವಾರಸಾ
ಗರವಿಲಸತ್ಸುಧಾಕರ ಮಹಾಗುಣಬಂಧುರ ಶೂಲಕೃತ್ತ[೨]ಸಿಂ
ಧುರ ಕನಕಾದ್ರಿಕಂದರವಿರಾಜಿತಮಂದಿರ ಕಾಲಕಂಧರಾ ೨೦

ಉತ್ಪಲ.

ದೇವ ಮಹೇಶ ದೇವರಿಪುನಾಶಕ ದೇವ ಗಣೇಶತಾತ ಮ
ದ್ದೇವ ಗಿರೀಶ ದೇವ ಜಿತಪಾಶಿಕ ದೇವ ಹುತಾಶಲೋಚನಾ[೩]
ದೇವ ಸುಭಾವ ದೇವ [೪]ಸುಕಳೇವರ ದೇವ ಸು[೪]ಧರ್ಮಕೋಶ ಸ
ದ್ದೇವ ಮದೀಶ ದೇವ ಗರಳಾಶನ ದೇವ ನಗಾತ್ಮಜೇಶ್ವರಾ ೨೧

ಚಂಪಕ.

ನಿರುಪಮಮೂರ್ತಿ ನಿರ್ಮಳಿನಮೂರ್ತಿ ನಿರರ್ಗಳಮೂರ್ತಿ ಸತ್ಕೃಪಾ
ಕರವರಮೂರ್ತಿ ಭದ್ರಮಯಮೂರ್ತಿ ಭವಾಮಯದೂರಮೂರ್ತಿ ಭಾ
ಸ್ಕರರುಚಿಮೂರ್ತಿ ಭಕ್ತಹಿತಮೂರ್ತಿ ಚರಾಚರಮೂರ್ತಿ ಚಂದ್ರಶೇ
ಖರವರಮೂರ್ತಿ ಚಾರುತರಮೂರ್ತಿ ಸುಮೂರ್ತಿಯ ಮೂರ್ತಿ ಶಂಕರಾ ೨೨

೧ ಪದಾ (ಜ) ೨ ಕೃತ್ತಿ (ಕೈಬರೆಹದ ಪ್ರತಿಗಳಲ್ಲಿ) ೩-೩ ಹುತಾಶನಲೋಚನಾಕ್ಷಯಾ (ಚ)
೪-೪ ವರಪಾಂಡುಕಳೇವರ (ಚ)

ಚಂಪಕ.

ಪರಮ ಪರಾದಿರೂಪ ಪರಮಾತ್ಮ ಪರಾನ್ವಿತ ಪಾಶ[೧]ದೂರ ಚಿತ್
ಪರತರತತ್ತ್ವ ಪಾವನ[೨]ಗುಣಾಶ್ರಯ ಪಾಲಿತವಿಶ್ವ ಭಕ್ತತತ್
ಪರಪರಿಪೂರ್ಣ ಪಾವಕವಿಲೋಚನ ಪನ್ನಗಹಾರ ಸತ್ಪರಾತ್
ಪರ ಪರಮೇಶ ಪಾಲಿಸು ಪರಾಪರಮೋಕ್ಷದ ಪಾರ್ವತೀಶ್ವರಾ ೨೩

ನಿರಘ ನಿರೀಹ ನಿರ್ಭಯ ನಿರಾಶ್ರಯ ನಿಶ್ಚಲ ನಿತ್ಯ ನಿರ್ಮಲಾ
ಚರಣ ನಿರಂತ ನಿರ್ಭವ ನಿರಾಮಯ ನಿರ್ಗುಣ ನಿಸ್ತುಳಪ್ರಭಾ
ವರಣ ನಿರಂಗ ನಿರ್ಮದ[೩] ನಿರಾಕುಲ ನಿಷ್ಕಲ ನೀಲಕಂಠ ನಿ
ರ್ಜರನತ ನಿಷ್ಕಳಂಕ[೪] ಜಯಶಂಕರ ನಿರ್ಜಡ[೫] ಶಾಂಭವೀಧವಾ ೨೪

ಉತ್ಪಲ.

ವ್ಯೋಮಕಚಾಭಿರಾಮ ತತಸಾಮ ಸುಧಾಮ ಸುರಾಮ ಸಜ್ಜನ
ಪ್ರೇಮ ನಿರಾಮಯಾಂಗ ಪರಭೀಮ ಸುನಾಮ ನಿಕಾಮ ನಿರ್ಜರ
ಸ್ತೋಮಲಲಾಮ ಹೇಮನಗಧಾಮ ಜಗತ್ತ್ರಯಸಾರ್ವಭೌಮ ಸು
ತ್ರಾಮಮುಖಾಮರಾರ್ಚ್ಯ ಜಿತಕಾಮ ಸದಾ[೬]ಮಳ ಸೋಮಭೂಷಣಾ ೨೫

ತುಂಗತರಂಗಗಾಂಗಜಲಸಂಗ ಕುರಂಗಧರೋತ್ತಮಾಂಗ ನಿ
ರ್ಭಂಗ ನಿರಂಗ ರುಗ್ಜಿತಪತಂಗ ಸುಧಾಂಗ ಸುಮಂಗಳಾಂಗ ಸ
ಲ್ಲಿಂಗನಿಜಾಂಗ ಪುಂಗವತುರಂಗ[೭] ಭುಜಂಗವಿಭೂಷ ಮರ್ದಿತಾ
ನಂಗ ವಿಹಂಗರಾಜರಥದತ್ತರಥಾಂಗ ಚಿದಂಗನಾಪ್ರಿಯಾ ೨೬

ಚಂಪಕ.

ಧೃತನಗಧರ್ಮ ಧರ್ಮಪರಿಪಾಲ ಕಪಾಲಕರೇಶ ರೇಶಸಂ
ಗತ ಗತಕಾಮ ಕಾಮದ ಕಲಾಪಕಲಾಪ ಸಮಸ್ತಮಸ್ತಕ
ಸ್ಥಿತಪದಸಾರಸಾರಸ[೮] ಕುಮಾರಕುಮಾರ ಸದಾನ ದಾನವಾ
ಹಿತಹಿತ ದೇವದೇವ ಜಯ ವಾಗ್ವರ ವಾಗ್ವರವಂದ್ಯ ಶಂಕರಾ ೨೭

ಶಿವ ಭವ[೯] ಭೀಮ ಕಾಮಮದಮರ್ದಿ ಕಪರ್ದಿ ನಿತಾಂತಶಾಂತ ದಿ
ವ್ಯವರದ ಭವ್ಯಸೇವ್ಯ ಪದಕಿಂಕರಶಂಕರ ಶಂಭು ಶಾಂಭವೀ
ಧವ ಭುವನೇಶ ಪಾಶಹರ ಚಿದ್ಗುಣ ಸದ್ಗುಣನಾಥಯೂಥಬಾಂ
ಧವ ಧವಳಾಂಗಸಂಗತ ಕೃಪಾಕರ ಭೀಕರ ಕಾಲಸಂಹರಾ ೨೮

೧ ನಾಶ (ಯ) ೨ ಪಾಲನ (ಕ, ಜ) ೩ ನಿರ್ಮಲ (ಚ); ನಿಶ್ಚಲ (ಯ) ೪ ಳಾಂಕ (ಗ, ತ)
೫ ನಿರ್ಜರ (ಯ) ೬ ಸುಧಾ (ಗ, ತ) ೭ ಕುರಂಗ (ಚ) ೮ ಸು (ಗ, ಚ, ತ) ೯ ಭವ (ಚ)

ಚಂಪಕ.

ಪುರಹರ ಪೂರ್ಣ ಪುಷ್ಕರಸರಿದ್ಧರ ವಾರ್ಧರವಾಹವಂದ್ಯ ವಾ
ಸರಕರಕೋಟಿತೇಜ ವಲಯೀಕೃತಪನ್ನಗರಾಜ ರಾಜಭಾ
ಸ್ಕರಶಿಖಿನೇತ್ರ ವಿದ್ರುಮಲತಾಭಜಟಾಭರ ಚಾರುಚಂದ್ರಶೇ
ಖರ ಶರಣಾಗು ಶಾಶ್ವತ ಮಹೀಧರಮಂದಿರ ಮಂಗಳಾಕರಾ ೨೯

ಸ್ರಗ್ಧರೆ

ಸರ್ವಾಂತರ್ಯಾಮಿ ಸರ್ವಾತ್ಮಕನಧಿಗತಸರ್ವಾರ್ಥನಾದ್ಯಂತಶೂನ್ಯಂ
ಸರ್ವಜ್ಞಂ ಸರ್ವತತ್ತ್ವಾಧಿಕನನುಪಮಿತಾಖಂಡಿತೈಶ್ವರ್ಯಪೂರ್ಣಂ
ಸರ್ವಾಧಾರಂ ಸ್ವತಂತ್ರಂ ಸಗುಣನಗುಣನಾತ್ಮೇಶ್ವರಂ ನಿತ್ಯತೃಪ್ತಂ
ಸರ್ವೇಶಂ ದೇವ ನೀನೊರ್ವನೆ ವಿಮಲಪರಂಜ್ಯೋತಿ ಸತ್ಯಂ ಕಪರ್ದೀ ೩೦

ಸದ್ಯೋಜಾತಾದಿಪಂಚಾನನದೆ ಪಡೆ[1]ದು ಮಹ್ಯಾದಿಭೂತಂಗಳಂ ತ
ಳ್ತುದ್ಯೋಗಂಬೆತ್ತು ಪಂಚೀಕರಿಸಿ ಬೆರಸುತಯ್ದುಯ್ದು ಭೂತಂಗಳಿಂದಂ
ಪ್ರದ್ಯೋತಾತ್ಮಾಂಗಮಂ ಮುನ್ನೆರೆಪಿ ನೆಗಟ್ದು ತದ್ಭೋಗಮಂ ಚೇತನಾಂತ
ಶ್ಚಿದ್ವ್ಯಕ್ತಂ ಗುಪ್ತಿಯಿಂ ಪ್ರೇರಕನೆನಿಸಿದಪಯ್ ಸೂಕ್ಷ್ಮರೂಪಿಂ ಮಹೇಶಾ ೩೧

ಮತ್ತೇಭ.

ಭವವಾರಾಶಿವಹಿತ್ರಮಲ್ತೆ ಭವದೀಯಂ ದಿವ್ಯನಾಮಂ ಕೃಪಾ
ರ್ಣವ ಮಾಯಾಮಯಮರ್ದನೌಷಧಮೆ ದಲ್ ಭವ್ಯರ್ಗೆ ನಿನ್ನೀ ಗುಣ
ಸ್ತವಮೆಂತುಂ ಭವದಂಘ್ರಿಚಿಂತನಮೆ ಕೇಳ್ ಕೈವಲ್ಯಲಕ್ಷ್ಮೀಸುಖೋ
ತ್ಸವಮಂ ಸಾರ್ಚುವ ದೂತಿ ನಿಕ್ಕುವ[2]ಮಿದಕ್ಕುಂ ಧಾತ್ರಿಯೊಳ್ ಶಂಕರಾ ೩೨

ಮಹಾಸ್ರಗ್ಧರೆ

ಶ್ರುತಿಭಾಮಾವಾಮಸೀಮಂತಮಣಿ ಮುನಿಮನೋಗೇಹಮಧ್ಯಪ್ರಭಾಸಂ
ಗತದೀಪಂ ಮುಕ್ತಿಕಾಂತಾಕರತಳಮುಕುರಂ ಕಾಲಘೋರಾಹಿಗಾರು
ತ್ಮತರತ್ನಂ ಭಕ್ತಚೇತೋವಿಮಳತರ[3]ಸರಃಕಂಜಮಜ್ಞಾನಸಾಂದ್ರಾಂ
ಧತಮಃಪ್ರಧ್ವಂಸಚಂಡದ್ಯುತಿ ಗಡ ಭವದೀಯಾಂಘ್ರಿಪದ್ಮಂ ತ್ರಿಣೇತ್ರಾ[4] ೩೩

ಮತ್ತೇಭ.

ಕ್ಷಿತಿವಾರ್ಯಗ್ನಿಸಮೀರಪುಷ್ಕರರವೀಂದ್ವಾತ್ಮರ್ಕಳೆಂದೆಂಬ ವಿ
ಶ್ರುತಮೂರ್ತ್ಯಷ್ಟಕವಾಂತು ವಿಶ್ವಮಯತಾಸಂಪತ್ತಿಯಂ ತಾಳ್ದು ಭೂ
ರಿತಮುಸ್ಸತ್ತ್ವರಜೋಗುಣಂಬಿಡಿದು ತತ್ತತ್ಕಾರ್ಯಮಂ ಮಾಡುತುಂ
ಸತತಂ ನಿರ್ಗುಣನಿರ್ವಿಕಾರನೆನಿಪಯ್ ಶ್ರೀಶೈಲಜಾವಲ್ಲಭಾ ೩೪

೧ ಪಡೆ (ಯ) ೨ ಲಕ್ಷಣ (ಕ)
೩ ವಿಮಲತರವಿ (ಚ) ೪ ತ್ರಿಣೇತ್ರಂ (ಕ, ಚ, ಜ)

ಮಹಾಸ್ರಗ್ಧರೆ

ಸಕಲಾಧಿಷ್ಠಾತೃ ನೀನೇ ಪ್ರಕೃತಿಮಹದಹಂಕಾರಮುಂ ನೀನೆ ನಿತ್ಯಂ[೧]
ಸಕಲಾತ್ಮಂ ಸೂತ್ರವೈಶ್ವಾನರರಧಿಗತವಿಶ್ವಾತ್ಮನುಂ ತೈಜಸಂ ಪ್ರಾ
ಜ್ಞಕನಾದಂ ನೀನೆ ದೇಹೇಂದ್ರಿಯಮಸುಕರಣಂ ಭೂತಮುಂ ನೀನೆ ತತ್ವಾ
ಕ್ಷಿಕಸಾಕ್ಷಾದ್ಬ್ರಹ್ಮಮುಂ ಸರ್ವಮುಮೆಲೆ ಪೇೞರಾರ್[೨] ನೀನೆ ವಿಶ್ವಾಧಿನಾಥಾ

ವಚನ

ಎಂದು ಪರಮೋತ್ಸವದಿಂ ಸನ್ನುತಿಗೆಯ್ದು ಮತ್ತಮಿರದೆ,

ಮತ್ತೇಭ.

ಅತಿಕೋಪಾತುರನಾಗಿ ಮಾಟ್ಟಿ ತಪಮಂ ನೀಗಾಡಿ ಮುಂಬಿಟ್ಟಿ ಸ
ಕ್ಷತಕಾಯೋಗ್ರವರಾಹಮಂ ಸದೆದದಂ ಕೊಳ್ವಾಸೆಯಿಂದಜ್ಞತಾ
ಸ್ಥಿತಿವೆತ್ತೆಚ್ಚು ಶರಂಗಳಿಂ ಪೊಣರ್ದನಿನ್ನಿಂ ದ್ರೋಹಿಯಾವಂ ಜಗತ್
ಪತಿ ನಿನ್ನಿಂ ಪೆಱನಾವನೀ ಭುವನದೊಳ್ ದೇವಂ ಕ್ಷಮಾಸಂಯುತಂ ೩೬

ವಚನ

ಎಂದು ದೈನ್ಯಂದೋೞ[೩] ಭಕ್ತಿಭರದಿಂ[೩] ಮಗುೞ್ದುಂ ದಂಡಪ್ರಣಾಮಂಗೆಯ್ದು
ಪದಯುಗಮಂ ತೆಗೆದು ಬಿಗಿದಪ್ಪಿ ನೆತ್ತಿಯೊಳ್ ಪೊತ್ತು,

ಚಂಪಕ.

ಮಣಿವ ಮರಲ್ದು ನೋಡುವ ಕಡಂಗುವ ಪೋಗುವ ಸುತ್ತಿ ಬರ್ಪ ರಿಂ
ಗಣಗುಣಿವಾರ್ದು[೪] ಸಾರ್ದು[೫] ನಲಪೆರ್ಚುವ ತೂಗುವ ಬೀಗುವಟ್ಟಿ ಸಂ
ದಣಿಗೊಳೆ ಪಾಡುವಾಡುವ ಕರಂ ನುತಿಗೆಯ್ವ ಪದಾಬ್ಜಪೂಜೆಯಂ
ತಣಿಯದೆ ಮಾಟ್ಪ ಸಂಭ್ರಮಮದೇಂ ಬಗೆಗೊಂಡುದೊ ಪಾಂಡುಪುತ್ರನಾ ೩೭

ಹರಿವಿಧಿಮುನಿಮುನಿನಿಗಮೋ
ತ್ಕರಂ ಕರಂ ಕಾಣದರಸುವೀ ನಿನ್ನ ಪದಾಂ
ಬುರುಹದ್ವಯಮಂ ಕಂಡೆಂ
ಹರ ಹರ[೬] ನೆಱೆ ಧನ್ಯನಾವನೆನ್ನಿಂದನ್ಯಂ[೬] ೩೮

ಪುಟ್ಟಿಂದು ಸಫಲಮಾದುದು
ನೆಟ್ಟನೆ ಮದ್ವಂಶಕುಸುಮಮಲರ್ದುದು ಪೆಱತೇಂ
ಮುಟ್ಟಿದೆನತಿಶಯಪದವಿಯ
ಬಟ್ಟೆಯನೆಲೆ ದೇವದೇವ ನೀನೊಲ್ದುದಱಿಂ ೩೯

೧ ಸತ್ಯಂ (ವ) ೨ ತಾರ್ (ಕ) ೩-೩ ಭಯಭಕ್ತಿ ಭಾರದಿಂ (ಯ) ೪ ವಾರ್ದು (ಜ); ವಾರ್ವ (ಯ) ೫ ಸಾರ್ವ (ಯ) ೬-೬ ನೆರೆದನ್ಯನಾವನೆನ್ನಿಂ ಧನ್ಯಂ (ಗ)

ವಚನ

ಎಂದು ಮತ್ತಮಿಂತು ಕೃತಾರ್ಥತೆಯಂ ತಾಳ್ದು ಸನ್ನುತಿಗೆಯ್ವ ಪಾರ್ಥನ ಸಮು ನ್ನತಭಕ್ತಿಭಾವಕ್ಕೆ ಭವಾನೀರಮಣಂ ಮೆಚ್ಚಿ ಮನಂದಂದು,

ಚಂಪಕ.

ಪದೆದಮರ್ದಪ್ಪಿದಂ ಗುಹಗಜಾಸ್ಯರನಪ್ಪುವ ತೋಳ್ಗಳಿಂದೆ ಮಾ
ಣದೆ ನರನಂ ಮೃಡಂ ಪರಸಿದಂ ನಿಗಮಂಗಳ ಪೆತ್ತ ಬಾಯ್ಗಳಿಂ
ಮುದಮಲರ್ವಂತೆ ಮೆಯ್ದಡಪಿದಂ ವರವೀವ ಕರಾಬ್ಜದಿಂದೆ ನೋ
ಡಿದನಖಿಳಾಘಮಂ ತೆಮರ್ವ ಕಣ್ಗಳಿನಾ ನರನೇಂ ಕೃತಾರ್ಥನೋ ೪೦

ವಚನ

ಅಂತು[೧] ಮನ್ನಿಸಿ ಮತ್ತಮಿರದೆ,

ಉತ್ಪಲ.

ನಿನ್ನ ಕಟೂಕ್ತಿ ಮಂತ್ರಮೆನಗೆಚ್ಚ ಶರಾವಳಿ ಪುಷ್ಪಸಂಚಯಂ
ನಿನ್ನ ಸರೋಷವೀಕ್ಷಣದ ದೀಧಿತಿ ದೀಪಿಕೆಯರ್ಚನೋಚಿತಂ
ನಿನ್ನ ಧನುರ್ಲತಾಹತಿಯ ಬಾಸುಟಿ ಪೂಗಳ ಮಾಲೆಯೊಚ್ಚತಂ
ನಿನ್ನಯೆ ಮುಷ್ಟಿಯುದ್ಧಮದು ಮತ್ಪದಪೂಜೆ ನಿಜಂ ಧನಂಜಯಾ ೪೧

ವಚನ

ಎಂದು ಕೃಪಾಪಾಂಗದಿನಭೀಕ್ಷಿಸಿ,

ಇದು ನಿನ್ನ ವರಶರಾಸನ
ಮಿದು ಶರಮಿದು ಖಡ್ಗಮಿಂತಿದಂ ಪಿಡಿಯೆಂದಾ
ಮದನರಿಪುವಿತ್ತು ಮುಂಕೊಂ
ಡುದನಾವುದು ನಿನ್ನಭೀಷ್ಟಮುದನೊರೆ[೨]ಯೆಂದಂ ೪೨

ವಚನ

ಎಂದು ಮತ್ತಮಿರದೆ,

ನರನಲ್ತೆ ಪೂರ್ವದೊಳ್ ನೀಂ
ಪರಮರ್ಷಿ[೩]ಮುಕುಂದನಂಶಸಂಭವನೆಂದುಂ
ಕರಮೆನ್ನ ಭಕ್ತನಂತಱಿ
ನೆರೆದುದನೆಲೆ ನಿನಗೆ ಕುಡುವುದೆನಗಿದು ಪಿರಿದೇ ೪೩

ವಚನ

ಎನೆ ಮಹೋತ್ಸವಂದಳೆದು ಕೆಯ್ದಾವರೆಗಳಂ ಮುಗಿದು,

೧ ಎಂದು (ಗ) ೨ ನೆರೆ (ಯ)
೩ ಪರಮಋಷಿ (ಕ, ಜ)

ಅರ್ಜುನನು ಶಿವನಿಂದ ಪಾಶುಪತಾಸ್ತ್ರವನ್ನು ಪಡೆಯುವ ದೃಶ್ಯ.



ಕಡಪಾ ಜಿಲ್ಲೆ ಪುಷ್ಪಗಿರಿಯಲ್ಲಿರುವ ಶಿವದೇವಸ್ಥಾನ.

*(By the Courtesy of the Director-General of Archaeological Survey of India)*

ಕರುಣಿಪುದೆನಗೆಲೆ ಕರುಣಾ
ಕರ ಪಾಶುಪತಾಸ್ತ್ರಮಂ ಮಹಾಬ್ರಹ್ಮಶಿರಃ
ಶರಮಂ ಸಮಸ್ತರಿಪುಸಂ
ಹರಮಂ ದಯೆಯಿಂದೆನುತ್ತೆ ಬೇಡುತ್ತಾಗಳ್ ೪೪

ಮತ್ತೇಭ.

ಸರದೊಳ್ ಮಿಂದೆಸಗುತ್ತುಮಾಚಮನಮಂ ಸದ್ಭಕ್ತಿಯಿಂ ಪಾದಪಂ
ಕರುಹಕ್ಕೊಲ್ದೆಱಗಿರ್ದ ಗಾಂಡಿವಿಗೆ ತತ್ತನ್ಮಂತ್ರಪೂರ್ವಂ ಕೃಪಾ
ಭರಿತಂ ಬ್ರಹ್ಮಶಿರೋಸ್ತ್ರಮಂ ಕರುಣಿಸುತ್ತುಂ ಮತ್ತಮಿತ್ತಂ ಗುಣಾ
ಭರಣಂ ಪಾಶುಪತಾಸ್ತ್ರಮಂ ಪದೆಪಿಸಿಂ ಕೊಂಡಾಡೆ ದೇವವ್ರಜಂ ೪೫

ಒರೆದೇಕಾಂತದೊಳೊಳ್ಪಿನಿಂದೆ ನಿಜಭಾಸ್ವತ್ತತ್ತ್ವಮಂ ಮೋಕ್ಷದೊಂ
ದಿರವಂ ನಿನ್ನ ಸಮಸ್ತಕಾರ್ಯಕೆ ಸಹಾಯಂ ಮಾಣದೆನ್ನಂಶಮಾ
ದರವಿಂದಾಂಬಕನಂತರಿಂ ನಿನಗೆ ಕುಂದೆಂದುಂ ವಲಂ ತೋಱದಾಂ
ತರಿಯಂ ಗೆಲ್ದಪೆ ಸೌಖ್ಯಮಕ್ಕುಮೆನುತುಂ ಪೇೞ್ದಿಂ ಭವಾನೀಧವಂ ೪೬

ವಚನ

ಆಗಳ್ ನಿಜೇಷ್ಟಲಾಭಮುದಿತಾಂತಃಕರಣಂ ಪುರಂದರನಂದನಂ ಪುರಹರನ ಪೊರೆಯೊಳೆಸೆವ ಕರುಣಾರಸಭರಿತೆಯಂ ಗಿರಿತನುಜೆಯಂ ಕಂಡು ಸಾಷ್ಟಾಂಗಮೆಱಗಿ ನಿಂದು ಕರಾಂಜಲಿವೆರಸು[೧],

ಉತ್ಪಲ.

ಮಾತೆ ಮಹೀಧ್ರಜಾತೆ ಜಗದಂಬಿಕೆ ಜನ್ಮವಿದೂರೆ ಶಂಭುಸಂ
ಪ್ರೀತೆ ಸದಾಪುನೀತೆ ಶಶಲಕ್ಷ್ಮಕಳಾಧರೆ ಸರ್ವಲೋಕವಿ
ಖ್ಯಾತೆ ಕೃಪಾಸಮೇತೆ ಕರಖಡ್ಗನಿಕೃತ್ತಮದಾಂಧದೈತ್ಯಸಂ
ಘಾತೆ ಭೃತಾಂಗಜಾತೆ ಶರಣಾಗಮರಾರ್ಚಿತಪಾದಪಂಕಜೇ ೪೭

ಮಹಾಸ್ರಗ್ಧರೆ

ತರುಣಾದಿತ್ಯಪ್ರಭಾಭಾಸುರೆ ಭವಹರೆ ಭದ್ರಾಂಗಿ ಭಕ್ತೌಘರಕ್ಷಾ
ಕರೆ ಕಾರುಣ್ಯಾರ್ದ್ರನೇತ್ರಾಂಚಲೆ ಕಲಿಕಲುಷಧ್ವಾಂತವಿಧ್ವಂಸನಾಮೋ
ತ್ಕರೆ ವಿಶ್ವಾರಾಧ್ಯೆ ವಿದ್ಯಾಮಯಿ ವಿವಿಧಮಹಾಭೂತಿಸಂಯುಕ್ತೆ ವಿಶ್ವಂ
ಭರೆ ವೇದಸ್ತುತ್ಯಲೀಲಾಧರೆ ಪೊರೆ ಸತತಂ ಸತ್ಯವಾಣೀ ಮೃಡಾಣೀ ೪೮

೧ ವೆರಸಿ (ಯ)

ಚಂಪಕ.

ಕಮಲಭವಾಂಡಕೋಟಿಗಳನೇಕನಿಜಾಂಶ[1]ದೆ ಪೆತ್ತು ಮೇಣವಂ
ಪ್ರಮುದದಿನೋವಿ ಚಿದ್ಗಗನರೂಪದಿನಾಂತರಬಾಹ್ಯದೊಳ್ ಸಮಾ
ಕ್ರಮಿಸಿ ಮುಸುಂಕಿ ಸಂಹರಿಸುತಂತ್ಯದೊಳದ್ವಯಮಾದ ಬೊಮ್ಮದೊಳ್
ಸಮರಸವಾಳ್ದ ನಿನ್ನಿರವ[2]ನಾರ್ ಸಲೆ ಪೇಟ್ವರೊ[2] ಸರ್ವಮಂಗಳೇ ೪೯

ವಚನ

ಎಂದು ಸಂದಣಿಪಾನಂದದಿಂ ಸನ್ನುತಿಗೆಯ್ವ ಕರ್ಣರಿಪುವನಪರ್ಣೆ ಪೂರ್ಣ ಕೃಪೆಯಿನಭೀಕ್ಷಿಸಿ,

ಉತ್ಪಲ.

ಬಾರೆಲೆ ಪದ್ಮಲೋಚನನ ಮಯ್ದುನ ಪಾಂಡವ ನಿನ್ನ ಭಕ್ತಿವಿ
ಸ್ತಾರಮಿದಿತ್ತುದೆನ್ನ ಬಗೆಗುತ್ಸವಮಂ ಪಿಡಿ ಕೊಟ್ಟಪೆಂ ಭವದ್
ವೈರಿನಿಕಾಯಮಂ ಕ್ಷಣದೊಳರ್ದಿಪ ಬಾಣಮನೆಂದು ಸದ್ಗುಣಾ
ಧಾರೆ ಧರಾಧರೇಂದ್ರಸುತೆಯಿತ್ತಳುದಾರತರಾಂಜನಾಸ್ತ್ರಮಂ ೫೦

ಚಂಪಕ.

ಮೊದಲೊಳಿದೊಂದು ಪತ್ತು ತುಡುವಲ್ಲಿ ಶತಂ ಬಿಡುವಲ್ಲಿ ಸಾಸಿರಂ[3]
ಪದಮಿಡುವಲ್ಲಿ ವೈರಿಶರಸಂಹತಿಯಂ ತಱಿವಲ್ಲಿ ಲಕ್ಷಮು
ಗ್ಗದ ಗತಿಯಲ್ಲಿ ಕೋಟಿ ಸಮರಾಂಕಣದೊಳ್ ಗಣನಾವಿಹೀನಮ
ಪ್ಪುದು ರಿಪುವೃಂದಮಂ ತವಿಸಿ ನಿನ್ನೆಡೆಗೆಯ್ದುಗುಮೀ ಮಹಾಶರಂ ೫೧

ಎಂದೊರೆದು ಕರುಣಿಸುತೆ ಗಿರಿ
ನಂದನೆ ಭುವನೈಕಮಾತೆ ಜಯಮಂ ಪಡೆ ನೀಂ
ಕಂದ ಸಮರಾಂಗಣದೊಳೆನು
ತಂದಮರರ್ ಪೊಗೞೆ ಪರಸಿದಳ್ ಗಾಂಡಿವಿಯಂ ೫೨

ಉತ್ಪಲ.

ಅಂಬರದೊಳ್ ಜಯಧ್ವನಿ ವಿಜೃಂಭಿಸಿದತ್ತು ಪೊದೞ್ದುಘೋಯುಘೋ
ಯೆಂಬ ರವಂ ಸುರಪ್ರಕರದೊಳ್ ನೆಗೞ್ದಿತ್ತು ಮಹಾನಕಸ್ವನಾ
ಡಂಬರಮೊಪ್ಪೆ ಸೂಸಿದುದು ಪೂಮೞೆ ಶಂಕರನಂಘ್ರಿಯೊಳ್ ಸಹ
ಸ್ರಾಂಬಕಸೂನುಗಾದುದು ಮನೋರಥಸಿದ್ಧಿಭವಂ ಮಹೋತ್ಸವಂ ೫೩

ಮತ್ತೇಭ.

ಶಿವಪಾದಾಬ್ಜದ ಸೋಂಕಿನಿಂ ವಿಮಳತೇಜಃಸ್ಫೂರ್ತಿ ಮೆಯ್ವೆರ್ಚೆ ಪೊ
ಣ್ಮುವ ಮಂದಸ್ಮಿತಸಾಂದ್ರಚಂದ್ರಿಕೆ ಪೊದೞ್ದಾಸ್ಯೇಂದು ಕಣ್ಗೊಪ್ಪೆ ಕಾಂ
ತಿವಿಶೇಷಸ್ಫುಟಫುಲ್ಲಲೋಚನಯುಗಂ ಚೆಲ್ವಾಗೆ ಸೌಂದರ್ಯಸಾ
ರವಿರಾಜತ್ತನು ಗಾಡಿವೆತ್ತು ಮೆಱೆದಂ ಗಾಂಡೀವಚಾಪಾಯುಧಂ ೫೪

೧ ಜಾಂಗ (ಚ) ೨-೨ ನಾರರಿವರ್ಸಲೆ (ಯ) ೩ ಸಾವಿರಂ (ಚ)

ವಚನ

ಅಂತೆಸೆದಿರ್ಪಿನಮಾಗಳ್,

ಮತ್ತೇಭ.

ಸುರಲೋಕಕ್ಕಿರದೆಯ್ದಿ ನಿರ್ಜರವರಂಗಾನಂದಮಂ ಸಾರ್ಚಿ ಸಾ
ದರಮಲ್ಲಿಂ ಬಳಿಕೆಯ್ದಿ ಧರ್ಮತನಯಂ ಮುಂತಾದ ಭಾಸ್ವತ್ಸಹೋ
ದರರೊಳ್ ನೀಂ ಬೆರೆದಾಂತ ವೈರಿಗಳನೆಮ್ಮಾ ಬಾಣದಿಂ ಗೆಲ್ದು ಭಾ
ಸುರಸಾಮ್ರಾಜ್ಯಮನಾಳ್ವುದೆಂದು ಗಿರಿಶಂ ಬೀಳ್ಕೊಟ್ಟನಾ ಪಾರ್ಥನಂ ೫೫

ವಚನ

ಅಂತು ಬೀಳ್ಕೊಡಲೊಡನೆ ಮೃಡನಡಿಗಳ್ಗೆ ಪೊಡವಿಯೊಡಲೊರಸೆ ಪೊಡೆಮಟ್ಟು, ಮೃಡಾಣಿಗೋರಂತೆಱಗಿ, ಗುಹಗಣಪಾದಿಗಳ್ಗೆ ಮಣಿದು, ಗಣವರರ್ಗೆ ಕುಂಬಿಟ್ಟು, ದಿವಿಜೇಂದ್ರರಂ ಬಲವಂದು, ವಿನಯವಿನಮಿತನಾಗಿ ತತ್ಕಾರುಣ್ಯಂ ಬಡೆದು;

ಉತ್ಪಲ.

ಜಾನಿಸುತದ್ರಿಜಾಪತಿಯ ಪಾದಪಯೋಜಮನತ್ತಲೆಯ್ದಿದಂ
ಭೂನುತಶೌರ್ಯನರ್ಜುನನವಂ ಪ್ರಮಥಾಮರರೊಂದುಗೂಡಿ ದಿ
ವ್ಯಾನಕರಾವಮುಣ್ಮೆ ವೃಷಭೇಂದ್ರನನೇಱಿ ನಿಜಾಂಗಕಾಂತಿಯಿಂ
ಭಾನುಕರೋತ್ಕರಂ ಮಸುಳೆ ಬಾನ್ಗಡರ್ದೆಯ್ದಿದನಿತ್ತಲೀಶ್ವರಂ ೫೬

ರಂಭೆಯ ಲಾಸ್ಯಮಿಂಬುವಡೆದೊಪ್ಪಿರೆ ಮುಂಗಡೆಯೊಳ್ ವೃಷಧ್ವಜಂ
ಕುಂಭಿನಿ ನೋಟ್ಪಿನಂ ಮಿಳಿರೆ ಕೀರ್ತಿಸುತೆಟ್ತಿರೆ ಚಂಡಕೀರ್ತಿ ಸಂ
ರಂಭದೆ ವಾಣಿಯುಂ ರಮೆಯುಮಿರ್ದೆಸೆ ಢಾಳಿಸೆ ಚಾಮರಂಗಳಂ
ಶಾಂಭವಿ ಬೆನ್ನನೆಟ್ತಿರೆ ವಿಲಾಸದೆ ಬಂದನಹೀಂದ್ರಭೂಷಣಂ ೫೭

ವಚನ

ಅಂತೆಟ್ತಿಂದು ಪರಮಸಂಭ್ರಮದಿನಗಣಿತಮಣಿಗಣಗ್ರಥಿತ ಮುಕುರಮಕರ ತೋರಣದಿನೋರಣಂಬಡೆದೆತ್ತಿದ ಕನಕಕೇತನಂಗಳಿಂ ಕತ್ತುರಿಯ ಸಾರಣೆಯಿಂ ಕುಂಕುಮದ ಕಾರಣೆಯಿಂ ಬಿಡುಮುತ್ತಿನ ರಂಗವಲ್ಲಿಗಳಿಂ ಕೆದರ್ದ ಸುರಕುಜದಲರ ಪೂವಲಿಗಳಿಂ ಸಿಂಗರಂಬೆತ್ತ ರಾಜವೀಥಿಗಳಿಂ ಮಂಗಳತರಮಾಗಿ ಕಣ್ಗೊಳಿಪ ನಿಜ ರಾಜಧಾನಿಯೆನಿಪ ಕೈಲಾಸ[೧]ಪುರವರಮಂ[೧] ಪೊಕ್ಕು, ರತಿ ಪಲರೂಪಾಂತಂತೆಸೆವ ಸುರಸುದತಿಯರ್ ಕಳಸಕನ್ನಡಿವಿಡಿದಿದಿರೆಟ್ತಿರೆ ಮನ್ನಣೆಯ ರುದ್ರಕನ್ಯೆಯರ್ ಶುಭರವದಿಂ ಪೊಂಬರಿಯ[೨]ಣಂಗಳಂ ಪಿಡಿದು ತೊಳತೊಳಪ ರನ್ನದಾರತಿಗಳಂ ಬೆಳಗೆಯುಂ ಮುರಾಂತಕಂ ಮುಂಬರಿದು ಕೆಯ್ಗುಡೆ ವೃಷಭೇಂದ್ರನಿಂದವತರಿಸಿ,

೧–೧ ಪುರವಂ (ಯ) ೨ ಬರಿಯಾ (ಚ)

ಕುಬೇರಂ ಸಾರ್ಚಿದ ರನ್ನವಾವುಗೆಯಂ ಮೆಟ್ಟಿ, ತೊಟ್ಟನೆ ಕಟ್ಟಿದಿರೊಳ್ ಜಯರವ ಮುಖರಮುಖಂ ಚತುರ್ಮುಖಂ ನಿಜಕೀರ್ತಿಯನುಗ್ಘಡಿಸಿ ಪೊಗೞೆ ಸಡಗರಂ ಮಿಗೆ ಮಡದಿಯೊಡನೆಯ್ತಂದು ಸಭಾಮಂಟಪಮಧ್ಯಸ್ಥಿತಮಣಿಪೀಠಮನಲಂಕರಿಸಿ ಗಾಡಿಯಿಂ ಮೂರ್ತಿಗೊಂಡು, ಸಮಸ್ತಸುರವಿಸರಂ ಪರಿವಿಡಿಯಿಂ ನೆರೆದುಚಿತ ಸ್ಥಾನದೊಳ್ ನಿಂದೋಲಗಿಸೆ, ಲೀಲೆ ಮಿಗೆ ಸರ್ವರ್ಗೆ ಸಕಲವರಪ್ರದನೆನಿಸಿ ಪೆರ್ಮೆವೆತ್ತು;

ಮತ್ತೇಭ.

ಪರಮಾನಂದ[1]ಮಯಂ ಪ್ರಸ[1]ನ್ನವದನಂ ಪದ್ಮಾಪ್ತಕೋಟಿಪ್ರಭಾ
ವರಣಂ ಪನ್ನಗಭೂಷಣಂ ತ್ರಿಭುವನಾಧೀಶಂ ತ್ರಿತತ್ತ್ವಾತ್ಮಕಂ
ನಿರಘಂ ನಿಶ್ಚಲನಪ್ರತರ್ಕ್ಯಮಹಿಮಂ ಗೌರೀಶನೊಪ್ಪಿರ್ದನ
ಚ್ಚರಿವೀಱುತ್ತಖಿಳರ್ಗೆ ಸಂತತಕೃಪಾರತ್ನಾಕರಂ ಶಂಕರಂ ೫೮

ಪದಿನಯ್ದನೆಯದಿದೆನಿಸುವ
ಮದನಾರಿಯ ಶಬರಲೀಲೆಯಂ ವಸ್ತುಕಮಾ
ರ್ಗದೊಳೊರೆದೆಂ ಕೆಯ್ಕೊಳ್ವುದು
ಸದಮಳವೃಡಭಕ್ತರೆನಿಪ ವಿಬುಧರ್ ಧರೆಯೊಳ್ ೫೯

ನೆರೆದೇಕಾದಶವರ್ಷದ
ಹರಯ[2]ದೊಳಭವಪ್ರಸಾದಬಲದಿಂ ಕವಿತಾ
ತರುಣಿ ಷಡಕ್ಷರಿದೇವನ
ನೆರವಿಲ್ಲದೆ ವರಯಿಸಿರ್ದಳರಿದೆನೆ ವಿಬುಧರ್ ೬೦

ಚಂಪಕ.

ಬಹುತರಜನ್ಮಕೋಟಿಗಳೊಳಾರ್ಜಿಸಿದುತ್ತಮಪುಣ್ಯದೇೞ್ಗೆಯಿಂ
ಮಹಿಯೊಳೆ ಸತ್ಕವಿತ್ವದಿವಿಷನ್ಮಣಿ ಸಾರ್ಗುಮದೀಗುಮದ್ಭುತಾ
ವಹಸುಖಮಂ ಲಸತ್ಕವಿಗೆ ಸಾರ್ಚುಗುಮುಜ್ಜ್ವಳಕೀರ್ತಿಯಂ ಸದಾ
ಮಹಿತಪರಾರ್ಥಮಂ ಕುಡುಗುಮಿಾಶ್ವರನೊಲ್ಮೆಯನುಂಟುಮಾಡುಗುಂ ೬೧

ಉತ್ಪಲ.

ಸಕ್ಕದಗಬ್ಬಮಂ ಮಿಸುಪ ಕನ್ನಡಗಬ್ಬಮನೊಲ್ದು ಕೋವಿದರ್
ಬೆಕ್ಕಸಮುತ್ತು ಮೆಚ್ಚಿ ಪೊಗೞುತ್ತಿರೆ ಶಂಭುಕೃಪಾವಶೇಷದಿಂ
ಮೊಕ್ಕಳಮಾಗೆ ಸರ್ವರಸಮೊಪ್ಪಿರೆ ಪೇೞ್ದನಶೇಷಕಾವ್ಯಬೃಂ
ದಕ್ಕಿದು ಸಾರಮೆಂದೆನೆ ಷಡಕ್ಷರಿದೇವನದೇಂ ಪ್ರಗಲ್ಭನೋ ೬೨

೧-೧ ಮಯಪ್ರಸ (ಚ) ೨ ಪರಯ (ಚ); ಹರೆಯ (ಯ)

ಚಂಪಕ.

ಪ್ರವಿಮಳರಾಜಶೇಖರವಿಳಾಸಮಹಾಕೃತಿಯಂ ವೃಷಾಧಿರಾ
ಜವಿಜಯಸತ್ಪ್ರಬಂಧಮುಮನೊಪ್ಪುವ ಕನ್ನಡದಿಂ ನಿಮಿರ್ಚಿದಂ
ಭುವನವಿನುತ್ಯವಾಗೆ ಕವಿಕರ್ಣರಸಾಯನಮೆಂಬ ಕಬ್ಬಮಂ
ಪ್ರವಿತತಸಂಸ್ಕೃತೋಕ್ತಿಯೊಳೊಡರ್ಚಿದನಲ್ತೆ ಷಡಕ್ಷರಾಹ್ವಯಂ ೬೩

ಗದ್ಯ

ಇದು ನಿಖಿಲ[೧]ಭುವನೈಕವಲ್ಲಭಸುರಾಸುರೇಂದ್ರವರದಕರುಣಾವರಣಪರಮಶಿವಲಿಂಗ ತರುಣಪತಂಗಸಂಗತಮಂಗಳಹೃದಯಾರವಿಂದಬಂಧುರಸರಸಸಜ್ಜನ[೨]ಮಾನಿತೋಭಯ ಕವಿತಾವಿಚಕ್ಷಣ[೩] ಶ್ರೀಷಡಕ್ಷರಿದೇವ ವಿರಚಿತಮಾದ ಕಿರಾತರುದ್ರಲೀಲಾಕಥನವಿಪುಳ ಪ್ರಬಂಧದೊಳ್ ಶಂಕರ[೪]ಪ್ರಸನ್ನತಾವರ್ಣನಂ[೫] ಪಂಚಮಾಶ್ವಾಸಂ ಪರಿಸಮಾಪ್ತಂ.

## ಶಬರಶಂಕರವಿಳಾಸಂ ಸಮಾಪ್ತಂ

೧ ಸಮಸ್ತ (ಚ, ಜ,) ೨ ಸರಸಜನ (ಯ) ೩ ವಿಶಾರದ (ಯ) ೪-೫ ಪ್ರಸನ್ನವರ್ಣನಂ (ಗ, ಚ, ತ, ಜ)

# ಪರಿಶಿಷ್ಟ ೧

## ಶಬರಶಂಕರವಿಳಾಸದಲ್ಲಿಯ ಪದ್ಯಗಳ ಅಕಾರಾದಿ

[ ಆ = ಆಶ್ವಾಸ, ಪ = ಪದ್ಯಸಂಖ್ಯೆ, ಪು = ಪುಟಸಂಖ್ಯೆ ]

| ಆರಂಭದ ಶಬ್ದಗಳು | ಆ. | ಪ. | ಪು. |
|---|---|---|---|
| **ಅ** | | | |
| ಅಂಗುಟದಿಂ ರಸಾತಳಕೆ | ೪ | ೧೨೯ | ೮೪ |
| ಅಜನಜಡನೆಂದು ನುಡಿವುದು | ೧ | ೧೭ | ೪ |
| ಅಡರ್ದು ಮದೇಭಮಂ | ೧ | ೬೨ | ೧೧ |
| ಅತಿಕೋಪಾತುರನಾಗಿ | ೫ | ೩೬ | ೯೩ |
| ಅತಿಬಳಮೂಕದಾನವ | ೪ | ೨ | ೬೦ |
| ಅತಿರೌದ್ರಾಕಾರದಿಂದುತ್ಕಟಿಸಿ | ೩ | ೬೩ | ೫೮ |
| ಅತಿಸಿತಮೇಕಲಕ್ಷ | ೧ | ೬೭ | ೧೨ |
| ಅತಿಸುಖಿ ನೀಂ | ೨ | ೮೬ | ೩೯ |
| ಅದಿರದಿದಿರಾಂತು | ೩ | ೫೬ | ೫೭ |
| ಅದು ಪಿಂತಾಗಿರೆಮುತ್ತಮೊಂದು | ೪ | ೪೦ | ೬೮ |
| ಅನಲಾಕ್ಷಂ ಭೃತಖಡ್ಗ | ೧ | ೫೮ | ೧೧ |
| ಅನವದ್ಯಂ ನಿರ್ವಿಕಾರಂ | ೨ | ೧೮ | ೨೪ |
| ಅನವದ್ಯನೊಳಪ್ರತಿಮನೊಳ್ | ೪ | ೧೧೮ | ೮೨ |
| ಅಮರ್ದು ನೆಲೆಮೊಲೆ | ೨ | ೫೭ | ೩೪ |
| ಅಂಬರಕೇಶ ಶಂಬರ | ೨ | ೫ | ೨೨ |
| ಅಂಬರದೊಳ್ ಜಯಧ್ವನಿ | ೫ | ೫೩ | ೯೬ |
| ಅರನೇಱಲ್ವಣ್ಣ ಬಣ್ಣಂ | ೩ | ೭ | ೪೭ |
| ಅರರೆ ಭವದೀಯಸಾಹಸ | ೪ | ೫೦ | ೭೦ |
| ಅರುಣೋದಯದರುಣದ್ಯುತಿ | ೨ | ೩೧ | ೨೭ |
| ಅರೆ ಮುಗುಳ್ದಕ್ಷಿಗಳ್ | ೨ | ೭೯ | ೩೮ |
| ಅರೆಯೊಡಲಾದ ಕಾಳಿ | ೩ | ೫ | ೪೬ |
| ಅಱದಱದುಂ ಮತಿಭ್ರಮಿತ | ೫ | ೧೯ | ೯೦ |
| ಅಲರ್ದು ಪೊಸಕರ್ಣಿಕಾರದ | ೫ | ೬ | ೮೮ |
| ಅವಧರಿಪುದಖಿಳನಿರ್ಜರ | ೨ | ೨೬ | ೨೬ |
| ಅವನವನೀಶನೋ | ೨ | ೧೦೮ | ೪೩ |
| ಅವರಿರ್ವರಕಾಳೆಗಮುಂ | ೪ | ೮೪ | ೭೫ |
| ಅವಿಕಳಶಕ್ತಿಯುಕ್ತ | ೧ | ೫ | ೨ |
| ಅಹಿಪತಿ ನಿಜಭಾರಮನೀ | ೨ | ೩೩ | ೨೭ |
| ಅಳಿಕುಲನೀಲಕುಂತಳದ | ೩ | ೧೫ | ೪೮ |
| ಅಳಿಕುಲಮಿಂದ್ರನೀಲಮಣಿ | ೨ | ೪೩ | ೩೧ |
| ಅಳಿಯುಲಿರಂ ಗಿಳಿಪಣ್ಣಂ | ೧ | ೨೩ | ೫ |
| ಅಳ್ಕಿಱದುದು ಮಾನಸಮುಂ | ೪ | ೯೦ | ೭೭ |
| **ಆ** | | | |
| ಆ ಕೆಯ್ ಮುಂಜದಮುನ್ನಂ | ೪ | ೮೨ | ೭೬ |
| ಆ ಕೈಲಾಸದ ಪೂರ್ವ | ೧ | ೫೭ | ೧೦ |
| ಆ ಗಿರಿತಟದಿಂದವನಂ | ೨ | ೧೧೨ | ೪೪ |
| ಆತನಭೀಷ್ಟಮುಂ ಸಲಿಸಿ | ೨ | ೧೧೮ | ೪೫ |
| ಆ ತಪೋಧನನಾವನೆಂಬ | ೨ | ೧೧೫ | ೪೪ |
| ಆವ ಗಿರಿಯಲ್ಲಿ ನಿಮ್ಮ | ೨ | ೨೫ | ೨೫ |
| ಆವನನರ್ಚಿಪರ್ | ೪ | ೧೧೭ | ೮೨ |
| ಆವನ ಮಾಯೆಯಿಂ | ೪ | ೧೧೬ | ೮೨ |
| ಆವಳ ಪಾದಪಂಕಜ | ೪ | ೧೩೪ | ೮೫ |
| **ಇ** | | | |
| ಇಡುವಲೆ ಸಿಡಿವಲೆ | ೩ | ೨೪ | ೫೦ |
| ಇದನಿನ್ನುಂ ಮುಗುಳಿಸೊಮರ್ದು | ೪ | ೧೦೯ | ೮೧ |
| ಇದು ದವಶಿಖಿ | ೩ | ೩೧ | ೫೧ |
| ಇದು ನಿನ್ನ ವರಶರಾಸನ | ೫ | ೪೨ | ೯೪ |
| ಇದು ಪೊಸರೀತಿ | ೧ | ೨೬ | ೫ |
| ಇದು ಸಿರದಲ್ಲಿ ಕೋಡೊಗೆದ | ೪ | ೩ | ೬೦ |
| ಇನಿತೊಂದುರ್ಬಟೆಯೋಂ | ೪ | ೬೫ | ೭೩ |
| ಇನಿಯನೊಳಾದ ಬಲ್ಮೆಳಿಸಿನಿಂ | ೧ | ೪೬ | ೯ |
| ಇನಿವಣ್ಗಳಿರೆ ಬಿಸುಟ್ಟೊಯ್ಯನೆ | ೧ | ೧೮ | ೪ |
| ಇಂದುಧರಸ್ವರೂಪ | ೨ | ೩ | ೨೧ |
| ಇನ್ನಱಯಲ್ಕೆ ಬರ್ಪುದವೆಲೆ | ೪ | ೧೦೬ | ೮೦ |
| ಇಱ ಬರಿಯುಂ ತರಿ ಕೊರಲಂ | ೪ | ೧೫ | ೬೨ |
| ಇಲ್ಲದೊಡಿಲ್ಲೆನ್ನಿತ್ತಪೆನಿಲ್ಲಿಯೆ | ೪ | ೬೪ | ೭೨ |

| ಆರಂಭದ ಶಬ್ದಗಳು | ಆ. | ಪ. | ಪು. |
|---|---|---|---|
| ಬಡಿಯುಡುವಂ ತೊಡಂಕದಿಡು | ೩ | ೫೦ | ೫೬ |
| ಬಱಿದೇಕೆ ಗೞಪಿದಪೆ ನೀಂ | ೪ | ೩೬ | ೬೭ |
| ಬಱಿತುದು ಧೈರ್ಯವಾರ್ಧಿ | ೪ | ೮೯ | ೭೭ |
| ಬಲವಂದು ರುದ್ರಸೂಕ್ತಮ | ೪ | ೧೦೧ | ೭೯ |
| ಬಹುತರ ಜನ್ಮಕೋಟಿ | ೫ | ೬೧ | ೯೮ |
| ಬಳವಪ್ದೋರ್ದಂಡದರ್ಪಂ | ೨ | ೧೫ | ೨೪ |
| ಬಳಸಿಡಿದಿರ್ದ ಮಾಣಿಕದ | ೧ | ೬೯ | ೧೩ |
| ಬಾಂದಳಮಂ ಪಳಂಚಲೆವ | ೧ | ೫೫ | ೧೦ |
| ಬಾಂಬೊೞೆ ತಳ್ತ ಕೆಂಜೆಡೆಯ | ೧ | ೭೪ | ೧೪ |
| ಬಾರೆಲೆ ಪದ್ಮಲೋಚನನ | ೫ | ೫೦ | ೯೬ |
| ಬಿಡದತ್ಯುಗ್ರತಪಂಗಳಂ | ೨ | ೮೫ | ೩೯ |
| ಬೀತುದು ಬಿಂಕಮೋಡಿದುದು | ೪ | ೧೧೩ | ೮೨ |
| ಬಿಮುರ್ವ ಕಳೇವರಂ | ೫ | ೧೪ | ೮೯ |
| ಬೆಂಬಱಿವಿಡಿದಟ್ಟುತ್ತುಂ | ೪ | ೨೪ | ೬೫ |
| ಬೆರಲೆತ್ತಿ ಪೊಗಱ್ದು | ೨ | ೯೨ | ೪೦ |
| ಬೆಸನಮನೇೞನೊತ್ತರಿಸಿ | ೨ | ೯೦ | ೪೦ |
| ಬೆೞಲಾಲಂ ಮತ್ತಿ ಬೇಲಂ | ೩ | ೩೨ | ೫೧ |
| ಬೇಡ ನಿನಗೇಕೆ ಸಾಹಸ | ೪ | ೨೮ | ೬೬ |
| **ಭ** | | | |
| ಭಕ್ತಕುಟುಂಬಿ | ೫ | ೧೭ | ೯೦ |
| ಭಯಭಕ್ತಿಸ್ಪೃಹೆವೆತ್ತು | ೪ | ೧೩೩ | ೮೫ |
| ಭವವಾರಾಶಿವಹಿತ್ರಮಲ್ತೆ | ೫ | ೩೨ | ೯೨ |
| ಭವಸೇವಾಯಾತಲೋಕೇಶ್ವರ | ೧ | ೫೬ | ೧೦ |
| ಭುವನೇಶಂ ಭೂತಿಯುಕ್ತಂ | ೩ | ೧೮ | ೪೯ |
| ಭೃತನಗಧರ್ಮ | ೫ | ೨೭ | ೯೧ |
| ಭಮರಾಂಜನಾಭ್ರರುಚಿ | ೫ | ೫ | ೮೭ |
| **ಮ** | | | |
| ಮಗನೊರ್ವಂ ಪುಟ್ಟೆ | ೧ | ೩೨ | ೬ |
| ಮಂಜಿನ ಪುಂಜಮೊತ್ತರಿಸಿ | ೪ | ೪೪ | ೬೯ |
| ಮಡು ಗಿಡು ಸರು ದರಿ | ೪ | ೨೩ | ೬೫ |
| ಮಣಲ ಲಿಂಗದ ಮಸ್ತಕಾಗ್ರದ | ೪ | ೧೦೮ | ೮೧ |
| ಮಣಿಕೂಟಂ ಮಂಜುಳ | ೨ | ೨೭ | ೨೬ |
| ಮಣಿವ ಮರಲ್ದು ನೋಡುವ | ೫ | ೩೭ | ೯೩ |
| ಮಂಡಿಸಿ ಕಾಕವಾಹನದೆ | ೧ | ೬೩ | ೧೧ |
| ಮದರಸಮೊಕ್ಕುದಿಲ್ಲಿ | ೩ | ೪೬ | ೫೫ |
| ಮನದೊಳೆ ನಿನ್ನ ಚಿಂತನೆ | ೨ | ೧೧೦ | ೪೩ |
| ಮನುಮುನಿವಂದ್ಯ ಮಾನ್ಯ | ೨ | ೬ | ೨೨ |
| ಮರಕತವೇದಿ ಮಾಣಿಕದ | ೧ | ೭೦ | ೧೩ |
| ಮರಗೊಂಬಂ ಮುಱಿದಾಂತು | ೩ | ೫೭ | ೫೭ |
| ಮರಮೆಲ್ಲಂ ಸುರಪಾದಪಂ | ೧ | ೩೭ | ೭ |
| ಮಱುಜವಣಿ ಮಾಣಿಕದ | ೩ | ೩೦ | ೫೧ |
| ಮಱಿಪೊಂದದೆಬ್ಬಿಱದ | ೨ | ೧೦೪ | ೪೨ |
| ಮಲೆವ ಮರಲ್ವ ಱೊಪ್ಪುವ | ೪ | ೧೨ | ೬೨ |
| ಮಾಣದೆ ಮತ್ತೆಱಗಿದನಾ | ೪ | ೮೭ | ೭೭ |
| ಮಾಣಿಸಿ ಕಂಬಲಾಶ್ವತರ | ೧ | ೨೯ | ೬ |
| ಮಾತೆ ಮಹೀಧ್ರಜಾತೆ | ೫ | ೪೭ | ೯೫ |
| ಮಿಗದೇರನ ಮಿಗಮಲ್ಲಿಯ | ೧ | ೩೯ | ೭ |
| ಮಿಗೆ ಮೂಲೋಕಂಗಳಂ | ೨ | ೯ | ೨೩ |
| ಮಿಡಿವಿಲ್ ಮಿಂಟಿ | ೩ | ೨೩ | ೫೦ |
| ಮಿಂದಂತಾಗಿರೆ ಮೆಯ್ಯ್ | ೨ | ೩೯ | ೨೮ |
| ಮಿಸುನಿಯ ಕಾಸೆವೊಲ್ | ೨ | ೫೩ | ೩೩ |
| ಮಿಸುಪಲರ್ಗಣ್ಣ ಕಾಂತಿ | ೧ | ೭೭ | ೧೪ |
| ಮುತ್ತಿದರಮರ್ತ್ಯಲುಬ್ಧಕ | ೪ | ೧೪ | ೬೨ |
| ಮುನಿಕೋಟಿ ಮುಗಿದ | ೩ | ೨೧ | ೪೯ |
| ಮುನಿಗಳ ಬೀಡು | ೨ | ೨೮ | ೨೬ |
| ಮುನ್ನೆಂದುಂ ತಪಮಱಿಯದ | ೨ | ೮೮ | ೪೦ |
| ಮುರಿವ ಮುಳಿದೊತ್ತುವ | ೪ | ೭೬ | ೭೫ |
| ಮುಳಿದಾಂ ನೋೞ್ಪಂದಮಿ | ೪ | ೧೩೦ | ೮೪ |
| ಮುಳಿದು ಗಜಾಸ್ಯ | ೪ | ೪೬ | ೬೯ |
| ಮೂದಲೆವಾತುಗಳ್ ಗಡ | ೪ | ೧೩೧ | ೮೫ |
| ಮೃಗಮದಕೆ ಕರ್ದಮಕೆ | ೨ | ೮೧ | ೩೮ |
| ಮೃಗಮದದಂಗರಾಗ | ೩ | ೧೧ | ೪೭ |
| ಮೊಗಮಿಟ್ಟುದಲ್ಕೆಳಸುಗು | ೨ | ೩೪ | ೨೭ |
| ಮೊದಲೊಳಿದೊಂದು ಪೊತ್ತು | ೫ | ೫೧ | ೯೬ |
| ಮೊರೆದು ಪರಿತಂದು ಮಶಕೋ | ೪ | ೪೫ | ೬೯ |
| ಮೊೞಗಿದುದಭ್ರದೊಳ್ | ೩ | ೨೨ | ೪೯ |
| ಮೊಱಗಂ ಬೃಂಹಿತಮೆಂದು | ೩ | ೩೬ | ೫೩ |
| **ರ** | | | |
| ರಂಭೆಯ ಲಾಸ್ಯಮಿಂಬುವಡೆ | ೫ | ೫೭ | ೯೭ |
| ರವಿಕೋಟಿದ್ಯೋತಮೆತ್ತಂ | ೫ | ೨ | ೮೭ |

# ಪರಿಶಿಷ್ಟ ೨

## ಶಬರಶಂಕರವಿಳಾಸದಲ್ಲಿಯ ಕಠಿಣ ಶಬ್ದಗಳ ಕೋಶ

[ ಸೂಚನೆ: — ಪ್ರತಿ ಶಬ್ದಾರ್ಥದ ಕೊನೆಗೆ ಕೊಟ್ಟ ಅಂಕೆಗಳು ಆಶ್ವಾಸ ಮತ್ತು ಪದ್ಯ ಇವುಗಳನ್ನು ಕ್ರಮವಾಗಿ ಸೂಚಿಸುತ್ತವೆ. ಅಂಕೆಯ ಮುಂದೆ ಒಮ್ಮೊಮ್ಮೆ ಬರುವ 'ವ' ಎಂಬುದು ಆ ಪದ್ಯದ ಮುಂದಿನ ವಚನವನ್ನು ಸೂಚಿಸುತ್ತದೆ. ]

### ಅ

ಅಂಶು – ಕಿರಣ, ಕಾಂತಿ ೧, ೬೧
ಅಕ್ಷರ – ನಾಶರಹಿತವಾದ ೧, ೪
ಅಖರ್ವ – ಬಹಳ ೪, ೨
ಅಗಾಹಿತರತ್ನ – ಇಂದ್ರನೀಲಮಣಿ ೩, ೧೮
ಅಗಿ – ಬಿದರು ೧, ೩೮
ಅಗುರ್ವಿಸು – ಭಯವನ್ನುಂಟುಮಾಡು ೪, ೯
ಅಗ್ಗಿಮೊಗ (ಸಂ. ಅಗ್ನಿಮುಖ) – ದೇವತೆ ೫ ೯
ಅಚ್ಚರಿ – ೧ (ಸಂ) ಅಪ್ಸರಾ; ೨ (ಸಂ) ಆಶ್ಚರ್ಯ ೧, ೪೫
ಅಚ್ಚಿಗ – ವಿಸ್ಮಯ ೪, ೧೭
ಅಜಸ್ರಂ – ಯಾವಾಗಲೂ ೧, ೭
ಅಂಜನ – ಕಾಡಿಗೆ ೫, ೫
ಅಟ್ಟೆ – ತಲೆಹರಿದ ದೇಹ, ಮುಂಡ ೪, ೧೬
ಅಡಗು – ಮಾಂಸ ೩, ೩೯; ಯೋಗ್ಯತೆ ೪, ೪೫
ಅಡರ್ಪು – ನೆಲೆ, ಆಶ್ರಯ ೧, ೮೧ ವ
ಅಣಿಯರಂ – ಅತಿಶಯವಾಗಿ ೧, ೨೫
ಅಂಡಲೆ – ಕಾಟ ೧, ೫೨
ಅಂಡುಗೊಳ್ – ಸಮೀಪಿಸು ೪, ೬ ವ
ಅಣ್ಪು – ಲೇಪನ ೩, ೧೬
ಅಣ್ಮು – ಪೌರುಷದೋರಿ ೪, ೩೯
ಅಧಿಜ್ಯ – ಹೆದೆಯೇರಿಸಿದ ೪, ೨೪
ಅಧ್ವರಿ – ಹೋಮಮಾಡುವವ ೨, ೪೮
ಅನಂತರತ್ನ (ಅನಂತ=ಆಕಾಶ) – ಸೂರ್ಯ ೧, ೧೩
ಅನವದ್ಯ – ದೋಷರಹಿತ ೪, ೧೧೮
ಅನಾಮಯ – ಶುದ್ಧ, ಶಿವ ೨, ೯೮
ಅನಿಶಂ – ಯಾವಾಗಲೂ ೧, ೩೭
ಅನೋಕಹ – ಮರ ೧, ೫೧
ಅಂತಱಿಂ – ಅದುದರಿಂದ ೫, ೪೬
ಅಪಾಂಗ – ಕಡೆಗಣ್ಣು ೨ ೩
ಅಭಿಷಂಗ – ಬೈಗುಳು ೪, ೧೭ ವ
ಅಭ್ಯರ್ಹಿತ – ಸನ್ಮಾನ್ಯ ೪, ೧೧೮
ಅಮರ್ದಾಗು – ಸರಿಯಾಗು ೧, ೧೦
ಅಮರ್ದುಗೆಯ್ಯ – ಅಮೃತಕಿರಣಗಳುಳ್ಳವ, ಚಂದ್ರ ೨, ೩೪
ಅಮೃತ – (೧) ಹಾಲು; (೨) ನೀರು ೧, ೩೩
ಅರಿದು – ಅಶಕ್ಯ, ಆಶ್ಚರ್ಯ ೪, ೫೩
ಅರ್ಗಳ – ದೊಡ್ಡ ೩, ೬೧
ಅರ್ಜುನ – (೧) ಬಿಳಿಯ; (೨) ಅರ್ಜುನನೆಂಬ ೪, ೫೧
ಅರ್ದಿತ – ಸೋಲಿಸಲ್ಪಟ್ಟ ೧, ೫
ಅರ್ದಿಸು – ತಡೆ, ಸೋಲಿಸು ೨, ೯೦
ಅಲಂಪು – ಸೊಗಸು, ವಿಭವ ೧, ೨೮
ಅಲೆ – ಅಲುಗಾಡಿಸು ೧, ೪೭
ಅವಗಾಹಂ – ಮುಳುಗಿ ೨, ೧೦೦
ಅವ್ವಳಿಸು – ಅಡರು ೪, ೮
ಅಸವಸ – ಅವಸರ ೧, ೪೦
ಅಹೀನ – (೧) ಸರ್ಪಶ್ರೇಷ್ಠ, ಹಾವಿನ ಸಂಬಂಧವುಳ್ಳ; (೨) ಶ್ರೇಷ್ಠವಾದ ೧, ೧
ಅಹೀಂದ್ರ – ದೊಡ್ಡ ಹಾವು ೨, ೫೫
ಅಳಱ್ – ಅಂಜು ೨, ೮
ಅಳಲ್ – ದುಃಖ ೧, ೩೧
ಅಳವಾಱು – ಶಕ್ತಿಗುಂದು ೧, ೪೪

ಅಳವಿಗಳೆದ – ಅಳತೆಮೀರಿದ ೧, ೭೯ ವ
ಅಳಿಕ – ಹಣೆ ೧, ೮೧ ವ
ಅಳುಂಬ – ಅತಿಶಯ ೪, ೧೨
ಅಳುರ್ – ಆವರಿಸು, ತುಂಬು ೫, ೧೦
ಅಳುರ್ಕೆ – ಹೆಚ್ಚಳ, ಆಧಿಕ್ಯ ೧, ೬
ಅಳ್ಕಿಱು – ನಡುಗಿಸು ೪, ೯೦
ಅಟ್ಕಱ್ – ಪ್ರೀತಿ ೨, ೮೪

## ಆ

ಆದಂ – ಅಧಿಕವಾಗಿ, ಹೆಚ್ಚಾಗಿ ೪, ೭೦
ಆನಕ – ತಮಟೆ, ಮದ್ದಳೆ ೩, ೨೨
ಆಭೀಳ – ಕಠಿಣ, ಭಯಂಕರ ೨, ೮೬
ಆಮ್ನಾಯ – ವೇದ ೨, ೮೫
ಆಂಪ – ಎದುರಿಸುವ ೪, ೩೪
ಆರ್ – ಗಟ್ಟಿಯಾಗಿ ಒದರು ೪, ೧೪
ಆರಯ್ – ಪರೀಕ್ಷಿಸು, ವಿಚಾರಿಸು ೪, ೨೪ ವ
ಆರ್ಪು – ಪರಾಕ್ರಮ. ಸಾಹಸ ೪, ೧೦
ಆಲವಾಲ – ಗಿಡದ ಸುತ್ತಲೂ ನೀರು ನಿಲ್ಲಲಿಕ್ಕೆ ಮಾಡಿದ ಕಟ್ಟೆ ೧, ೩೫
ಆವಿಲ – ಮಲಿನ ೫. ೧೮
ಆಶಯ – ಭಾವ, ಮನಸ್ಸು ೪, ೧೦೩
ಆಶುಗಮಿತ್ರ – ಬೆಂಕೆ ೨, ೯
ಆಶ್ರಯಾಶ – ಬೆಂಕೆ ೫, ೧೬
ಆಹವ - ಯಜ್ಞ ೪, ೫೬
ಆಳ್ವರಿ – ಅಗಳ್ತೆಯಮೇಲಿನ ಗೋಡೆ ೧, ೫೧

## ಇ

ಇಟ್ಟೆಡೆ – ಇಕ್ಕಟ್ಟಾದಸ್ಥಳ ೪, ೨೩
ಇಡಿಕಿಱು – ತುಂಬು, ತೀವು ೪, ೧೧೨
ಇಂದ್ರಗೋಪ– ಹೊನ್ನೆಯ ಹುಳು ೨, ೪೨ ವ
ಇಂಬು – ಸ್ಥಾನ ೨, ೪೨ ವ

## ಈ

ಈಡಿಱು – ಕೊಂಬಿನಿಂದ ತಿವಿ ೧, ೩೩
ಈಂಟು – ಕುಡಿ ೧, ೭

## ಉ

ಉಚ್ಚಳಿಸು - ಒಳಹೊಕ್ಕು ಪಾರಾಗು ೪, ೧೭
ಉಟಜ – ಪರ್ಣಶಾಲೆ ೨, ೭೪
ಉತ್ಕರ – ಸಮೂಹ ೧, ೩೫
ಉತ್ತಮಾಂಗ – ತಲೆ ೧, ೧೦೯
ಉತ್ಸಂಗ – ತೊಡೆ ೧, ೧
ಉದ್ಗಮ – ಹೂ ೨, ೪೧
ಉಪಾಯನ – ಕಾಣಿಕೆ ೨, ೪೨ ವ
ಉರರೀಕರಿಸು – ಸ್ವೀಕರಿಸು ೧, ೧೪
ಉರ್ಬಟೆ – ಶೌರ್ಯಾತಿರೇಕ ೪, ೬೫
ಉರ್ವಿ – ಹೆಚ್ಚಾಗಿ ೪, ೬೭
ಉಲ್ಬಣ – ಬಲವಾದ ೧, ೨೧
ಉಳ್ಕು – ಮಿಂಚು, ಹೊಳೆ, ೧, ೪೬
ಉರಿಹತ್ತು ೪, ೭೧
ಉಳ್ಪಲರ್ – ಅರೆಬಿರಿದ ಹೂ ೧, ೫೧

## ಋ

ಋಕ್ಷ – (೧) ಕರಡಿ (೨) ನಕ್ಷತ್ರ ೩, ೭೯

## ಎ

ಎಕ್ಕಲ – ಕಾಡಹಂದಿ ೪, ೫
ಎಟ್ಟು – ಸಿಲುಕು ೪, ೩೫
ಎಡ್ಡವಾಗು – ಶೋಭಿಸು ೩, ೭
ಎಂಟಡಿ – ಶರಭ ೨, ೬೫
ಎರೆ – ಬೇಡು ೫, ೪೩
ಎಱಕ – ಬೀಳುವಿಕೆ, ಅವಮಾನ ೪, ೮೯
ಎಸಕ – ಕಾರ್ಯ ೪, ೭೬
ಎಳವಿ – ಸರಿಗೊಳಿಸಿ ೨, ೫೦
ಎಳಸು – ಆಸೆಮಾಡು ೪, ೬೯

## ಏ

ಏಳದಂಗೆಯ್ – ನಿಂದಿಸು, ತಿರಸ್ಕರಿಸು ೪, ೩೦ ವ

## ಒ

ಒಚ್ಚತಂ – (೧) ಸಂಪೂರ್ಣವಾಗಿ, (೨) ಸಂತೋಷದಿಂದ ೨, ೮೯; ಆಶೆಮಾಡಿ ೪, ೬೭
ಒಟ್ಟಜೆ – ಶೌರ್ಯ, ಪರಾಕ್ರಮ ೪, ೬ ವ
ಒಱಲ್ದು – ಪ್ರೀತಿಪಟ್ಟು ೨, ೪೬

ಒಲ್ - ಪ್ರೀತಿಸು, ಇಚ್ಛಿಸು ೧, ೧೮
ಒಸಗೆ – ಉತ್ಸವ, ಸಂತೋಷ ೨, ೪೨ ವ
ಒಳಱು – ಆರ್ಭಟಿಸು, ಗರ್ಜಿಸು ೪, ೬೦
ಒಳ್ಪರಿಜು (ಒಳ್+ಪರಿಜು) – ಸುಂದರ ಕಾಯ ೫-೯

## ಓ

ಓಲ (ಓಲಾಡುವಿಕೆ) – ತೂಗಾಟ; ಸಂತೋಷ ೧, ೪೩
ಓವು – ರಕ್ಷಿಸು, ಕಾಪಾಡು ೧, ೨೫
ಓಸರಿಸು – ಹಿಂದೆಗೆ, ಓರೆಯಾಗು ೪, ೫೯

## ಔ

ಔರ್ವ – ಬಡಬಾಗ್ನಿ ೧, ೩೦

## ಕ

ಕಂಕೇಲ್ಲಿ – ಅಶೋಕೆ ೨, ೪೭ ವ
ಕಜ್ಜಲ – ಕಾಡಿಗೆ ೩, ೧೮
ಕಟ – ಹಣೆಯ ಮುಂಭಾಗ ೨, ೫೯
ಕಟಕ-(೧) ಕಡಗ (೨) ಬೆಟ್ಟದ ತಪ್ಪಲು ೧, ೧; ಹೆದೆ ೩, ೫೨; ಕುಂಡಲ, ಕಡಗ ೪, ೧
ಕಟಕಿ – ಅಪಹಾಸ್ಯ ೪, ೩೩
ಕಟ್ಟೞಿಕೆಯ – ಸುಪ್ರಸಿದ್ಧವಾದ ೫, ೧೫
ಕಟ್ಟುವಗ್ಗ – ಕಟ್ಟುವ ಹಗ್ಗ ೪, ೧೩೫
ಕಡಂಗಿ – ರಭಸದಿಂದ ನಿಲ್ಲಿಸಿ ೧, ೨೯
ಕಡಂಗು – ಪ್ರಯತ್ನಿಸು, ಉತ್ಸಾಹಪಡು ೧, ೨೯
ಕಡವರ – ನಿಧಿ ೫, ೧೪ ವ
ಕಡೆಗಣ್ಚು – ಅಲಕ್ಷ್ಯಮಾಡು ೧, ೨೯
ಕಣ್ಬೊಲಂದಪ್ಪು – ಕಣ್ಣಿಗೆ ಕಾಣದಂತಾಗು ೩, ೩೫ ವ
ಕತ – ಕಾರಣ, ನೆವ ೪, ೬೯
ಕದಿರ್ – ಕಿರಣ, ಕಾಂತಿ ೧, ೪೫
ಕನಲ್ – ಸಿಟ್ಟಾಗು ೨, ೪೨ ವ
ಕಬಂಧ – (೧) ನೀರಿನಿಂದ ಕೂಡಿದ್ದು (೨) ಮುಂಡ ೨, ೫೨
ಕಮಲಾಕರಹಿಮಕರ – ಸರೋವರವೆಂಬ ಚಂದ್ರ ೨, ೪೨ ವ
ಕಂಪಿಡಿದ - ಸುವಾಸನೆಯುಳ್ಳ ೨, ೩೯
ಕಂಬಲಾಶ್ವತ – ಕಂಬಲ – ಅಶ್ವತ ಎಂಬ ಇಬ್ಬರು ನಾಗ (ಸರ್ಪ)ರು. (ಇವರು ಕುಂಡಲ ರೂಪದಿಂದ ಈಶ್ವರನ ಕಿವಿಯಲ್ಲಿ ಸದಾ ಹಾಡುತ್ತಿರುವರಂತೆ) ೧, ೨೯
ಕಂಬು – ಶಂಖ ೨, ೫
ಕರುತ್ತು – ಗುರಿಯಿಟ್ಟು ೪, ೬
ಕರೇಣು – ಹೆಣ್ಣಾನೆ ೩, ೪೨
ಕರ್ಣಿಕಾರ – ಬೆಟ್ಟದಾವರೆ ೧, ೩೫
ಕರ್ದಮ – ಕೆಸರು ೨, ೮೧
ಕಷೋಪಲ – ಒರೆಗಲ್ಲು ೨, ೪೨ ವ
ಕಲಾಪ – ಉಡಿದಾರ ೩, ೧೫; ಚಂದ್ರ ೫, ೨೦; ಆಭರಣ ೫, ೨೭
ಕಲಾಪಿ – ನವಿಲು ೨, ೫
ಕವರ್ – ಸುಲಿ, ಅಪಹರಿಸು ೧, ೩೨
ಕಳಧೌತ – (೧) ಭಂಗಾರ, (೨) ಬೆಳ್ಳಿ ೧, ೫೪
ಕಳಂಬ – ಬಾಣ ೪, ೫೨
ಕಳಿಂದಜಾ – ಕಾಳಿಂದಿ, ಯಮುನಾನದಿ ೧, ೨
ಕಳೇವರ – ಮೈ, ದೇಹ ೧, ೪೨
ಕಱಿಲೆ – ಎಳಬಿದುರು ೩, ೩೭
ಕಾಂಡ – ಬಾಣ ೪, ೨೪ ವ
ಕಾಯ್ತು – ಕಾಯಿಬಿಟ್ಟ ೨, ೪೩
ಕಾದಲೆ – ಪ್ರಿಯತಮೆ ೪, ೬೭
ಕಾಂತ – ಮನೋಹರ ೨, ೪೨ ವ
ಕಾಯ್ಪು – ಸಿಟ್ಟು ೪, ೭
ಕಾಲಕ್ಷ್ವೇಳ - ಹಾಲಾಹಲವಿಷ ೨, ೧೦
ಕಾಲಾಧ್ವ – ಆಗ್ನೇಯ ೧, ೫೮
ಕಾವ್ಯ – ಶುಕ್ರಾಚಾರ್ಯ ೨, ೧೬
ಕಾಹಳಿಕಾ – ಕಹಳೆ ೨, ೪೨ ವ
ಕಾಟ್ಸುರಂ – ಕಾಡ ನದಿಯಂತೆ ೧, ೧೦
ಕಿಂಜಲ್ಕ -ಹೂವಿನ ಕೇಸರ ೫, ೬
ಕಿಟ – ಹಂದಿ ೪, ೫ ವ
ಕಿತವ – ಮೋಸಗಾರ ೨, ೧೧೧
ಕಿತ್ತಡಿ – ಋಷಿ ೨, ೮೩
ಕಿಂನರಿ – (೧) ವಾದ್ಯವಿಶೇಷ (೨) ಕಿಂನರಸ್ತ್ರೀ ೨, ೪೦

ಕಿಬ್ಬರಿ – ಪಕ್ಕೆ ೩, ೫೧
ಕಿರಿ – ಹಂದಿ ೪, ೧೯
ಕುಡು – ಕೊಂಕಾದ ೪, ೧೬
ಕುತ್ತುಱು – ಹೊದರು ೪, ೨೩
ಕುನುಂಗು – ಮೈ ಕುಗ್ಗಿಸು, ಜಪ್ಪಿಸು ೪, ೭೩
ಕುಂಬಿಡು – ಪೊಡಮಡು ೫, ೫೪
ಕುಂಭಿ – ಆನೆ ೨, ೫
ಕುರುಜು – ಬಿದಿರಿನ ಮಂಟಪ ೨, ೪೨ ವ
ಕುವಾರಿ – (೧) ಭೂಮಿಯ ಮೇಲಿನ ನೀರು, (೨) ಕೆಟ್ಟ ನೀರು ೧, ೨೨
ಕುಶೆ – ದರ್ಭೆ ೨, ೧೦೮
ಕುಶೇಶಯ – ನೀರಿನಲ್ಲಿರುವಂತಹದು ಕಮಲ ೨, ೪
ಕೂವಕಂಬ (ಸಂ. ಕೂಪಸ್ತಂಭ) – ಹಡಗದ ಪಟಸ್ತಂಭ ೨, ೪೪
ಕೃಚ್ಛ್ರ – ಕಠಿಣ ತಪಸ್ಸು ೪, ೧೨೬
ಕೃತ್ತ – ಕತ್ತರಿಸಲ್ಪಟ್ಟ ೫, ೨೦
ಕೆಂಗಣ್ವಕ್ಕಿ – ಕೋಗಿಲೆ ೨, ೪೨ ವ
ಕೆಂಗಲಿಪ – ಕೆಂಪೇರುವ ೪, ೧೨
ಕೆಣಕು – ಸೆಣಸು, ಸಿಟ್ಟಿಗೆಬ್ಬಿಸು ೪, ೧೦
ಕೆನ್ನೀರ್ – ನೆತ್ತರು ೪, ೨೨
ಕೆಯ್ಗಣ್ಮು – ಉಂಟಾಗು ೧, ೪೮
ಕೆಪ್ಪುರ್ – ಕೆರವು, ಚಪ್ಪಲಿ ೩, ೨೭
ಕೇಣ – ಮತ್ಸರ ೪, ೧೦
ಕೇಣಂಬಡೆದು – ಸಾವಕಾಶವಾಗಿ ೪, ೮೭
ಕೇಳಿಕೆ – (೧) ಪ್ರಸಿದ್ಧಿ (೨) (ಸ. ಕೇಲಿಕಾ) ನುಡಿಸುವಿಕೆ ೧, ೭೯ ವ
ಕೊಕ್ಕರಿಸು – ಬೆದರಿಸು ೪, ೧೩
ಕೊಡಂಕೆ – ಕಿವಿ ೨, ೪೦
ಕೊಣಕಿಡು – ಜಿಗಿ, ಹಾರು ೩, ೫೧
ಕೊಣಸು – (ಚಿಗರೆ) ಮರಿ ೨, ೪೦
ಕೊನರ್ – ಚಿಗುರು ೨, ೪೩
ಕೊಪ್ಪು – ಬಿಲ್ಲಿನ ಕೊನೆ, ಕೋಟಿ ೪, ೨೪ ವ
ಕೊಳುಗುಳ – ರಣಭೂಮಿ ೨, ೫೨
ಕೋದಂಡಕೋಟಿ – ಬಿಲ್ಲಿನ ತುದಿ ೪, ೧೭ ವ
ಕೋಡು – ದಾರಪೋಣಿಸಿ ೨, ೬೪
ಕೌಶಿಕ – ಗೂಗೆ ೧, ೨೦
ಕೌಸುಂಭ – ಕುಸುಬೆಯ ಹೂವಿನ ೧, ೭೨ ವ
ಕ್ಷಣರುಚಿ – ಮಿಂಚು ೧, ೭೮ ವ
ಕ್ಷ್ಮಾಧರ – ಪರ್ವತ ೧, ೭

## ಖ

ಖಲೀನ – ಕಡಿವಾಣ ೨, ೩೮

## ಗ

ಗಂಡಿಕೆ – ಪರಾಕ್ರಮ, ಶಕ್ತಿ ೩, ೫೪
ಗಱುವೂ – ಕೇದಗೆ ೩, ೩
ಗಾಂಗ – ಗಂಗಾನದಿಯ ೨, ೨೬
ಗಾಡಿ – ಸೊಬಗು ೫, ೫೪
ಗಾಂಪ – ಹೆಡ್ಡ, ಎಗ್ಗ ೧, ೨೪
ಗಾರುತ್ಮತರತ್ನ – ಗರುಡಮಣಿ ೫, ೩೩
ಗಾವರಿಪ – ಝೇಂಕರಿಸುವ ೨, ೫೮
ಗಿರಿಕಾ – ಇಲಿ ೧, ೬೪
ಗುಣ – (೧) ದಾರ, (೨) ಸದ್ಗುಣ ೧, ೧೬
ಗುಣಿ – (೧) ಬಟ್ಟೆ, (೨) ಸದ್ಗುಣಿ ೧, ೧೬
ಗೆಂಟು – ದೂರ ೨, ೧೦೭
ಗೇಣ್ – ಕತ್ತಿ ೩, ೧೬
ಗೈರಿಕ – 'ಜಾಜು' ಎಂಬ ಕೆಂಪು ಮಣ್ಣು ೩, ೪
ಗೋಕರ್ಣ – ಸರ್ಪ ೪, ೧

## ಘ

ಘನರಸ – (೧) ಮೇಘಜಲ, (೨) ಶ್ರೇಷ್ಠವಾದ ರಸ ೧, ೨೨
ಘೃಣಿ – ತೇಜಸ್ಸು ೧, ೭೦

## ಚ

ಚಕ್ರಾನಿಲ – ಸುಂಟರಗಾಳಿ ೨, ೪೨ ವ
ಚಂಚರೀಕ – ತುಂಬಿ ೫, ೧೧
ಚಂದ್ರಕಿ – ನವಿಲು ೧, ೫೯
ಚುಚರ್ಯ – ಸುಡು ೨, ೯
ಚೊಲ್ಲೆಯ – ತುರುಬಿನ ಕೊನೆ ೩, ೧೦
ಚೌದಂತ – ಐರಾವತ ೩, ೪೪

## ಜ

ಜಡ – (೧) ನೀರು (೨) ಮಾಂದ್ಯ ೧, ೪೨
ಜನ್ಯ – ಯುದ್ಧ ೪, ೧೨೭
ಜಾತರೂಪ – ಬಂಗಾರ ೧, ೭೮ ವ
ಜಾಯಿಲ – ನಾಯಿ ೪, ೧೦
ಜೀಮೂತವಾಹ – ಇಂದ್ರ ೨, ೪೨ ವ
ಜೊನ್ನ (ಸಂ) ಜೋತ್ಸ್ನಾ – ಬೆಳ್ದಿಂಗಳು ೧, ೨೪

## ಟ

ಟಂಕ – ಒಂದು ಆಯುಧ ೫, ೨
ಟೊಣೆ – ತಪ್ಪಿಸಿಕೊಳ್ಳು, ಮೋಸಮಾಡು ೪, ೧೦

## ಡ

ಡಗೆ – ಮೋಸ ೪, ೭೬
ಡವಕೆ – ಪೀಕದಾನಿ, ಕಾಳಂಜಿ ೧, ೭೮
ಡಿಂಡೀರ – ನೊರೆ ೧, ೩೦
ಡೊಕ್ಕರ – ಗುದ್ದು ೪, ೭೫

## ತ

ತಂಗದಿರ್‌ಗಲ್ – ಚಂದ್ರಕಾಂತ ಶಿಲೆ ೧, ೫೦
ತಟಿದಂಗನೆ – ಮಿಂಚೆಂಬ ಸ್ತ್ರೀ ೧, ೪೨
ತನು – ಸಣ್ಣ ೨, ೮೬
ತರಕ್ಷು – ಹುಲಿ ೩, ೨೮
ತರದಿಂ – ಕ್ರಮವಾಗಿ ೧, ೪೮
ತಱಸಂದು – ನಿಶ್ಚಯಿಸಿ ೪, ೯೮
ತವಿಸು – ಕಡಿಮೆ ಮಾಡು, ನಾಶಮಾಡು ೪, ೨೪ ವ
ತಳರ್ – ಹೋಗು ೨, ೪೨ ವ
ತಳವೆಳಗಾಗು – ತಳಮಳಿಸು, ಬೆರಗಾಗು ೪, ೧೧೪
ತಳ್ವದೆ – ತಡಮಾಡದೆ ೧, ೪೭
ತಳ್ಪಂಕ – ತಲ್ಲಣ, ಭೀತಿ ೨, ೨ ವ
ತಾರ್ಕ್ಷ್ಯ – ಗರುಡ ೪, ೧೩೨
ತಿಬ್ಬಂ – ತೀವ್ರವಾಗಿ ೪, ೪೦
ತುಂಗಭದ್ರೆ – (೧) ಅತ್ಯಂತ ಮಂಗಲಸ್ವರೂಪೆ (೨) ನದಿಯ ಹೆಸರು ೧, ೩
ತುಂಡ – ಬಾಯಿ ೪, ೧೬
ತುರೀಯ – ಪರಬ್ರಹ್ಮಸ್ಥಿತಿಯಲ್ಲಿರುವಂತಹ ೨, ೯೮
ತುಱುಗಿ – ಗುಂಪಾಗಿ ೪, ೧೭ ವ
ತುಱಿಲ್ – ಪರಾಕ್ರಮ ೫, ೯
ತೆಗಟ್ – ನಿಂದಿಸು ೧, ೧೫
ತೆಮರ್ವ – ನಾಶಗೊಳಿಸುವ ೫, ೪೦
ತೊಂಗಲ್ – ಗೊಂಚಲು ೨, ೪೦
ತೊಂಡುಗೆಡೆ – ಚಪ್ಪರಿಸು ೧, ೫೨
ತೋಡಿಲ್ಲದ – ಅಪಮಾನವಾದ ೪, ೨೪ ವ
ತ್ವಿಡ್ – ಪ್ರಕಾಶ ೨, ೨೩

## ದ

ದಂಡೆ – ' ಬಿಲುವಿಡಿದು ನೂಕುವ ಕರಂ ' ೪, ೫೯
ದಿವಿಷನ್ಮಣಿ – ಚಿಂತಾಮಣಿ ೫, ೬೧
ದೂವೆ (ಸಂ. ಧೂಮ) – ಹೊಗೆ ೨, ೪೮
ದೇವರ – ಮಯ್ದುನ ೨, ೧೧೫
ದೋರ್ಬಲ – ಭುಜಬಲ ೪, ೨೭
ದ್ವಿಶಿರ – ಭೇರುಂಡ ೨, ೬೫

## ಧ

ಧರ್ಮ – ಧನುಸ್ಸು ೪, ೧೬
ಧನಂಜಯ – ಅಗ್ನಿ ೪, ೪೪
ಧೀವರ – ಜಾಲಗಾರ ೪, ೧೦

## ನ

ನಗ – ಗಿಡು ೧, ೩೫
ನಣ್ಪು – ಪ್ರೀತಿ ೨, ೩೯
ನವಿರ್ – ಕೂದಲು ೪, ೧೧೨
ನಾಕಿ – ದೇವತೆ ೧, ೩೨
ನಾನಲ್ – ಗಲಗಿನ ಜುಡುಪು ೪, ೨೩
ನಾರಾಚ – ಉದ್ದವಾದ ಬಾಣ ೩, ೨೩
ನಿಕುಂಜ – ಜುಡುಪು ೩, ೩೫ ವ
ನಿಕ್ಕುವಂ – ನಿಶ್ಚಯ ೫, ೩೨
ನಿಗ್ಗವ – (ಆನೆಯ) ದಂತ ೩, ೨೭
ನಿಚೋಳ – ಕುಪ್ಪಸ ೩, ೯
ನಿತಂಬ – (ಪರ್ವತದ) ಇಳಕಲು ೪, ೨
ನಿತಾಂತ – ಅತಿಶಯ ೫, ೨೮
ನಿಮಿರ್ – ನಿಗುರಿಸು, ಎತ್ತು ೪, ೬ ವ

ನಿಮಿರ್ಚು – ರಚಯಿಸು ೧, ೨೬; ಉಂಟುಮಾಡು ೨, ೫೦
ನಿರೀಹ – ಆಶಾರಹಿತ ೫, ೧೭
ನಿರ್ಝರ – ಪರ್ವತದೊಳಗಿನ ನೀರಿನ ಝರಿ ೧, ೩೫
ನಿರ್ವಹಣ – (೧) ಹೊತ್ತುಕೊಂಡು ಹೋಗುವುದು (೨) ಪೂರ್ಣಮಾಡುವುದು ೧, ೪೪
ನಿಲುಂಬು – ಗುಂಪುಕೂಡು ೨, ೪೨ ವ
ನಿಶಿತ (ನಿಶಾತ) – ಹದನ, ಹರಿತ ೪, ೧೯
ನಿಷಂಗ – ಬತ್ತಳಿಕೆ ೨, ೨೯
ನಿಷ್ಕೃತಿ – ಪರಿಹಾರ ೪, ೧೨೬
ನಿಸ್ತುಲ – ಅಸಮಾನ ೧, ೩೦
ನಿಳಿಂಪ – ದೇವತೆ ೩, ೨೨
ನೀಟ್ಕರಿಸಿ – ಬಿಚ್ಚಿ, ಉದ್ದಮಾಡಿ ೨, ೭೧
ನೆಗಟ್ – ಮಾಡು, ರಚಿಸು ೧, ೧೫
ನೆಱನಂ – ಧೊಪ್ಪೆಂದು ೪, ೨೫

## ಪ

ಪಕ್ಕಜಲ್ಲಿ – ಎಡಬಲಗಳಲ್ಲಿ ಇಳಿಬಿಟ್ಟ ಗೊಂಡೆ ೩, ೧೬
ಪಗಿನ – ಗಿಡಗಳ ರಸ, ಅಂಟು ೨, ೪೨ ವ
ಪಗಿಲ್ತ – ಭಯಪಟ್ಟ ೩, ೧೫
ಪಗಿಲ್ತು – ಅಂಟಿಕೊಂಡು ೪, ೭೪
ಪಟ – ಗುಡಿ, ಪತಾಕೆ ೧, ೩೬
ಪಟಲ – ಸಮೂಹ ೨, ೪೨ ವ
ಪಟ್ಟಳಿ – ಪಟಾವಳಿ ? ರೇಶ್ಮೆ ? ೩, ೯
ಪಟ್ಟು – ಮಲಗಿ ೨, ೪೦
ಪಡಂಗು – ಹಡಗು ೧, ೩೪
ಪಡಲಿಡು – ಬೀಳು ೪, ೭
ಪಡಿ – (ಸಂ.) ಪ್ರತಿ ೪, ೯೭
ಪಡಿ – ಬಾಗಿಲ ಕದ ೪, ೧೧೨
ಪಣೆ – ಕಾಡಮೃಗಗಳು ವಾಸಿಸುವ ಸ್ಥಾನ ೪, ೩೩ ವ
ಪಂಡಿತವಕ್ಕಿ – ಗಿಳಿ ೧, ೫೨
ಪತಂಗ – ಸೂರ್ಯ ೫, ೨೬
ಪತ್ತುಗೆ – ಒಟ್ಟುಗೂಡುವಿಕೆ, ಹೊಂದಿಕೆಯಾಗುವುದು ೧, ೮೧ ವ
ಪದ – ಪತಾಕೆ, ನಿಶಾನಿ ೨, ೬
ಪದವಿಲ್ – ಹದಕ್ಕೆ ಬಂದ ಬಿಲ್ಲು ೩, ೪
ಪದಂಗೊಳಿಪ – ಹದಮಾಡುವ ೨, ೪೨ ವ
ಪದವೆತ್ತ – ಸರಿಯಾದ ೧, ೭೬
ಪದೆದು – ಪ್ರೀತಿಪಟ್ಟು ೧, ೧೨
ಪನ್ನತಿಕ್ಕೆ – ಪರಾಕ್ರಮ ೪, ೧೦೪
ಪಯಶ್ಚರ – ಮೀನು ೪, ೧೧೦
ಪಯ್ಸರಿಸು – ಜಾರು ೪, ೭೩
ಪರದ – ವ್ಯಾಪಾರಿ ೨, ೪೨ ವ
ಪರಾಭೂತಿ – ಸೋಲು ೪, ೯೫
ಪರಿಕಲಿಸು – ವಿಸ್ತಾರವಾಗು ೨, ೪೨ ವ
ಪರಿಜು – ರೂಪು, ಆಕಾರ ೧, ೭೧ ವ
ಪಱುಮುಱು – ಆನಂದ, ಸಂತೋಷ ೩ ೩೫ ವ
ಪರಿಸ – (ಸಂ.) ಪರುಷ ೩, ೩೦
ಪರಿಸರ – ಸಮೀಪ ೨, ೭೮ ವ
ಪರುಟವಿಸು – ಬಿತ್ತರಿಸು ೪, ೨೯
ಪಱಮೆ – ತುಂಬಿ ೩, ೩೫ ವ
ಪಲ್ಲಮುಱು – ಆನೆ ೩, ೪೩
ಪಲ್ಲಣ – ಜೀನು ೨, ೩೮
ಪಳಂಚು – ತಾಕು ೧, ೪೭
ಪಱಿವಾತು – ವೇದ ೨, ೧೨
ಪಱಿಕೆಯ್ – ಕೀಳುಮಾಡು, ನಿಂದಿಸು ೧, ೧೯
ಪಾಂಡು – ಬಿಳಿಯ ೧, ೩೦
ಪಾರ್ – ಸಮುಯುನಿರೀಕ್ಷಣೆಮಾಡು ೧, ೬೫
ಪಾಱುಗೆಯ್ತ – ಚಂಚಲವೃತ್ತಿ ೧, ೩೧
ಪಾಱುಂಬಳೆ – ಚಕ್ರ ೨, ೫೯
ಪಾಸಱೆ – ಹಾಸುಗಲ್ಲು ೨, ೩೨
ಪಿಂಗಚಕ್ಷು – ದುರ್ಯೋಧನ ೩, ೨೯
ಪಿಡಿ – ಹೆಣ್ಣಾನೆ ೩, ೪೩
ಪಿಸುಣಾಡು – ಚಾಡಿಹೇಳು, ಪ್ರಕಟಮಾಡು ೧, ೫೦
ಪಿಹಿತ – ಮುಚ್ಚಲ್ಪಟ್ಟ ೨, ೫೬
ಪೀಲಿ – ನವಿಲುಗರಿ ೩, ೯
ಪುಂಖ – ಬಾಣದ ಹಿಂಭಾಗ, ಕೆಯ್ಪೊಡೆ ೪, ೪೨

ಪುಂಗವ – ವೃಷಭ ೫, ೨೬
ಪುರುಡಿಸು – ಮೀರಿಸಬಗೆ ೪, ೪೧
ಪುಷ್ಕರ – ಆಕಾಶ ೫, ೨೯
ಪುಳಿಂದ – ಬೇಡ ೩, ೬೩ ವ
ಪುೞಿಲ್ (ಸಂ. ಪುಲಿನ) – ಉಸುಕು ೧, ೩೪
ಪುೞುವಚ್ಚೆ – ಹುಳುವಿನ ಹಸುರುಬಣ್ಣದ ರೆಕ್ಕೆ ೩, ೯
ಪೂಣ್ – ಪ್ರತಿಜ್ಞೆಮಾಡು ೨, ೯೧ ವ
ಪೃಥು (ಳ) – ಬಹಳ, ದೊಡ್ಡ ೨, ೮೫
ಪೆಳಱ್ – ಹೆದರು ೧, ೩೯
ಪೇರಡಿ – ನಾಯಿ, ಸೊಣಗ ೩, ೨೩
ಪೊಗರ್ – ಪ್ರಕಾಶ ೪, ೧೯
ಪೊಂಗು – (ಮೆಯ್) ಹಿಗ್ಗಿಸು ೪, ೧೨
ಪೊಡರ್ – ಶೋಭಿಸು, ಸ್ಫುರಿಸು ೩, ೧೩
ಪೊಡರ್ಪು – ಪ್ರಸಿದ್ಧಿ ೧, ೩೪; ಶಕ್ತಿ ೨, ೯೪
ಪೊಡೆ – ಹೊಟ್ಟೆ ೪, ೭೯
ಪೊಣರ್ – ಜೋಡು ೧, ೪೬
ಪೊಣರ್ಕೆ – ಹೋರಾಟ ೪, ೮೬
ಪೊದೞ್ – ಪ್ರಕಟವಾಗು, ಹುಟ್ಟು ೧, ೧೦
ಪೊರೆ (ಹೊರೆ) – ಸಮೀಪ ೫, ೧೨
ಪೊರೆಯೇಱು – ಆನಂದದಿಂದ ಉಬ್ಬು ೧, ೭೯ ವ
ಪ್ರಕೃತಿ – ಸ್ವಭಾವ ೧, ೪೪
ಪ್ರಣಿಧಿ – ಗೂಢಚರ ೩, ೩೭
ಪ್ರತಿಮಾನ – ಆನೆಯ ದಂತವೆರಡರ ನಡುವಿನ ಭಾಗ ೩, ೪೨
ಪ್ರಪತ್ತಿಯಿಂ – ಶರಣಾಗತನಾಗಿ ೨, ೧೧೭
ಪ್ರಭಂಜನ – ಬಿರುಗಾಳಿ ೨, ೪
ಪ್ರಸ್ಫುರಿತ – ಚೆದರಿಸಿದ ೪, ೨೯
ಪ್ರಾಂಚತ್ – ಶೋಭಿಸುವ ೪, ೧೦೯

## ಬ

ಬಂಕ – ಮೂಲೆ ೧, ೬೭
ಬಂಚರ – ವೀಣೆ, ತಂಬೂರಿ ೨, ೪೨ ವ
ಬರಿ – ಪಕ್ಕೆ ೪, ೧೫
ಬಱಿ – ಬತ್ತು, ಹಿಂಗು ೪, ೮೯
ಬರ್ಹ – ನವಿಲುಗರಿ ೨, ೬೫
ಬಲಾಹಕ – ಮೇಘ ೪, ೨೯
ಬವರಿವರಿ – ಸುತ್ತುವರಿ ೪, ೧೭ ವ
ಬೞಿಲ್ – ಜೋಲು, ಸಡಿಲು ೩, ೭
ಬೞಲ್ಚು – ಸೋರಿಸು, ಹಿಂಡು ೫, ೩
ಬಾಗಿಲ್ವಾಡ – ಪುರದ್ವಾರ, ಗೋಪುರ ೧, ೬೧
ಬಾಯ್ದೆರೆ – ತುಟಿ ೨, ೪೨ ವ
ಬಾಳೆ – ಮೀನು ೨, ೫೧
ಬಿದಿರ್ಚು – ಬಿಚ್ಚು, ತಪ್ಪಿಸು ೪, ೧೦
ಬಿನ್ನಣ – ಜಾಣತನ ೪, ೧೦
ಬಿಸಕಾಂಡ – ತಾವರೆಯ ದೇಟು ೩, ೪೪
ಬಿತ್ತು – ಬೀಜ ೨, ೪೨ ವ
ಬೀ – ತೀರು, ಒಣಗು ೪, ೮೯
ಬೀಡೆವಿರಿ – ಬಿರಿ ೨, ೪೨ ವ
ಬೂತಾಟ – ಮೋಸ ೪, ೯೭
ಬೆಕ್ಕಸಮುತ್ತು – ಅತ್ಯಾಶ್ಚರ್ಯಪಟ್ಟು ೫, ೬೨
ಬೆಚ್ಚ – ಬೆಸೆದ ೨, ೧೦೨
ಬೆಸನ – ಆಜ್ಞೆ ೨, ೪೨ ವ; ವ್ಯಸನ ೨, ೯೦
ಬೆಳ್ಪಳಿಸು – ಕಳವಳಿಸು ೪, ೧೧೩
ಬೆಳ್ವಾರ – ಬಲೆ ೩, ೨೫
ಬೇವಸ – ಚಿಂತೆ, ದುಮ್ಮಾನ ೪, ೯೧

## ಭ

ಭಂಗ – (೧) ಕೇಡು, ಅವಮಾನ (೨) ಸಮುದ್ರದ ತೆರೆ ೧, ೩೨
ಭರಿಕೆಯ್ – ಸೊಂಡಿಲು ೩, ೫೮
ಭರ್ಮ – ಭಂಗಾರ ೧, ೫೫
ಭವಾಮಯ – ಭವವೆಂಬ ರೋಗ ೫, ೨೨
ಭಾಜನ – ಪಾತ್ರ ೪, ೧೨೫
ಭುಜಂಗ – ವಿಟ ೨, ೪೨ ವ
ಭೃಂಗಾರ – ಕಲಶ ೧, ೭೯ ವ
ಭೃತ – ಧರಿಸಿದ ೧, ೫೮; ರಕ್ಷಿಸಿದ ೫, ೪೭
ಭೇಕ – ಕಪ್ಪೆ ೧, ೧೩
ಭೋಗಿ (ಹೆಡೆಯುಳ್ಳದ್ದು) – ಸರ್ಪ ೧, ೮೨
ಭ್ರಾಜಿಷ್ಣು – ಪ್ರಕಾಶವುಳ್ಳ ೧, ೧
ಭ್ರುಕುಟಿ – ಹುಬ್ಬುಗಂಟು ೪, ೨೧

## ಮ

ಮಡಲ್ - ಪಸರಿಸು, ಹಬ್ಬು ೪, ೧೧೨
ಮನೋಗದ - ಚಿಂತೆ, ದುಃಖ ೪, ೧೧೩
ಮರಂದರಸ - ಮಕರಂದರಸ ೨, ೩೯
ಮರಲ್ - ಮರಳು, ಹಿಂದಿರುಗು ೪, ೧೨
ಮರುತ್ - ದೇವತೆಗಳು ೨, ೪೩
ಮರೆ-ಚಿಗರೆ ೩, ೨೮
ಮಱುಂಜವಣಿ - ಸಂಜೀವನ ವನಸ್ಪತಿ ೩. ೩೦
ಮರ್ಚು - ಮೆಚ್ಚು ೨, ೪೭
ಮಲ್ಲಱಿಗೊಳ್-ತಳಮಳಿಸು, ಬೆದರು ೨, ೨ ವ
ಮಶಕ - ನೊರಜು, ಸೊಳ್ಳೆ ೪, ೪೫
ಮಸಕ - ಪ್ರಭಾವ, ಪ್ರಬಲತೆ, ೨, ೨ ವ
ಸಿಟ್ಟು ೪, ೩೮
ಮಸಗು - ಆವರಿಸು ೧, ೪೦
ಮಹಿತ - ಯೋಗ್ಯವಾದ ೨, ೨೬
ಮಾಣಿಸು - ನಿಲ್ಲಿಸು ೧, ೨೯
ಮಾತಂಗ - ಆನೆ ೨, ೫೫
ಮಾಧವ - ವಸಂತ; ವಿಷ್ಣು ೧, ೨
ಮಾನ - ಅಳತೆ ೩, ೫೩
ಮಾಮಸಕ - ಸಂಭ್ರಮ ೩, ೫೫
ಮಾರ್ಗಣ - ಬಾಣ ೪, ೧೯
ಮಿಗದೇರ - ವಾಯು ೧, ೩೯
ಮಿಗಬೇರ ( ಸಂ. ಮೃಗವೈರ=ವ್ಯಾಘ್ರ ) - ವ್ಯಾಘ್ರಾಸುರ ೫, ೯
ಮಿಡಿ - ಹಿಮ್ಮಡ ೪, ೧೭ ವ
ಮಿಹಿರ - ಸೂರ್ಯ ೨, ೬
ಮಿಳಿರ್ - ತೂಗಾಡು ೩, ೪೨
ಮಿಳ್ಳಿಱ - ಅತ್ತಿಂದಿತ್ತ ಚಲಿಸು ೩, ೬೨
ಮುಡುಪು - ಭುಜದ ಮೇಲ್ಭಾಗ ೪, ೭೯
ಮೂಡಿಗೆ - ಬತ್ತಳಿಕೆ ೪, ೨೪ ವ
ಮೃಗಮದ - ಕಸ್ತೂರಿ ೨, ೮೧
ಮೇಚಕಿತ - ಕಪ್ಪಾದ ೨, ೫೩
ಮೊಕ್ಕಳ - ಬಹಳ, ವೆಗ್ಗಳ ೪, ೧೧

## ಯ

ಯಮಿ - ತಪಸ್ವಿ ೪, ೧೦೩

## ರ

ರಜನೀ - ಅರಸಿಣ ೨, ೪೨ ವ
ರತ್ನಗರ್ಭೆ - ಭೂದೇವಿ ೨, ೪೨ ವ
ರಥಂತರ - ವೇದದೊಳಗಿನ ಶಿವಸ್ತವನಮಂತ್ರ ೧, ೭೯ ವ
ರಥಾಂಗ - ಚಕ್ರವಾಕ ೧, ೫೩; ಚಕ್ರ ೫, ೨೬
ರಸನೆ - ನಾಲಗೆ ೧, ೨೧
ರಸಾರುಹ - ಮರ ೨, ೪೨ ವ
ರಸಾಲ - ಮಾವು ೨, ೪೨ ವ
ರಾಕಾ - ಪೂರ್ಣ ೧, ೪
ರಿಂಗಣ - ನೃತ್ಯ ೫, ೩೭
ರುಕ್ - ಪ್ರಕಾಶ ೫, ೨೬
ರುರು - (೧) ಚಿಗರೆ (೨) ಋಷಿಯ ಹೆಸರು ೩, ೨೯
ರೇಶ - ಕುಬೇರ ೫, ೨೭
ರೋಮಶ - ಬಹಳ ಕೂದಲುಳ್ಳ ೧, ೬೬
ರೋಲಂಬ - ತುಂಬಿ ೨, ೫

## ಱ

ಱೊಪ್ಪು - ಗರ್ಜಿಸು ೪, ೧೨

## ಲ

ಲತಾಂತ - ಹೂ ೨, ೬೩
ಲಾಸ್ಯ - ನರ್ತನ ೨, ೪೬
ಲುಬ್ಧಕ - ಬೇಡ ೪, ೧೪
ಲುಲಾಯ - ಕೋಣ ೩, ೪೬
ಲುಳಿ - ಚಳಕ ೪, ೮೦

## ವ

ವನ್ಯ - ಕಾಡಿನ ೨, ೪೨ ವ
ವಪ್ರ - ಪರ್ವತದ ತಪ್ಪಲು ೧, ೭
ವಪ್ರಕ್ರೀಡೆ-ಆನೆ, ಹೋರಿ ಮುಂತಾದುವುಗಳ ತಲೆಯಿಂದೆ ಹಾಯುವ ಆಟ ೧, ೭
ವಲ್ಲಕಿ - ವೀಣೆ ೧, ೭೯ ವ
ವಸ್ತುಕ - ಚಂಪು ೫, ೫೯

ವಹಿತ್ರ – ಹಡಗ ೫, ೩೨
ವಳಕ್ಷ – ಬಿಳಿಯಬಣ್ಣ ೧, ೬೫
ವಾರ – ಸಮೂಹ ೫, ೨೦
ವಾರ್ಧರ – ಮೋಡ ೧, ೩೫
ವಾಸಿ – ಪಂತ, ಪಣ ೪, ೩೬
ವಿಕಚ – ಅರಳಿದ ೨, ೪೨
ವಿತರ್ದಿ – ಕಟ್ಟೆ, ಜಗಲಿ ೧, ೭೦
ವಿದ್ರುಮಲತಾಭ – ಹವಳದ ಬಳ್ಳಿಯಂತೆ ಶೋಭಿಸುವ ೫, ೨೯
ವಿಧುಂತುದ – ರಾಹು ೩, ೩೯
ವಿಶಿಖ – ಬಾಣ ೪, ೧೨೮
ವಿಸಟಂಬರಿ – ಯಥೇಷ್ಟವಾಗಿ ಹರಿ ೧, ೭೭
ವಿಸರ – ಸಮೂಹ ೨, ೪೨ ವ
ವೃಂತ – ಬೀಸಣಿಕೆ ೩, ೬೪
ವೈಶ್ವಾನರ – ಅಗ್ನಿದೇವತೆ ೫, ೩೫

## ಶ

ಶಣ – ಸಣಬು ೩, ೨೫
ಶಂಬ – ವಜ್ರ ೫, ೧೭
ಶಂಬರವಿಪಕ್ಷ – ಮದನ ೨, ೫
ಶರಭಂಗ – (೧) ಬಾಣದ ತುಣಕು (೨) ನೀರಿನಸತೆರೆ ೨ – ೫೨
ಶಾಖಾಚರ – ಕಪಿ ೪, ೭೫
ಶಾಖಾಮೃಗ – ಕಪಿ ೧, ೧೫
ಶಾಲ – ಕೋಟೆಯ ಗೋಡೆ ೧, ೫೪
ಶಿಖಾವಹ – ಬೆಂಕಿ ೨, ೪೨ ವ
ಶಿಲೀಮುಖ – (೧) ಬಾಣ (೨) ತುಂಬಿ ೨, ೫೨
ಶೈಲಾದಿ – ನಂದೀಶ್ವರ ೨, ೨ ವ
ಶೈವಲ – ಹಾವಸೆ ೩, ೪೨
ಶ್ಮಶ್ರು – ಮೀಸೆ, ಗಡ್ಡ ೪, ೩೯

## ಷ

ಷಂಡ [illegible] ೂಹ ೧, ೮೧

## ಸ

ಸಂರಂಭ ( ಸೌರಂಭ ) – ಸಂಭ್ರಮ, ರೋಷ ೪, ೧೫ ವ
ಸಂವರ್ತ – ಪ್ರಳಯ ೪, ೧೭ ವ
ಸಂಶ್ರಯ – ಆಶ್ರಯ ೫, ೧೬
ಸಂಕ್ರಂದನ (= ಇಂದ್ರ ) ವೈರಿ – ರಾಕ್ಷಸ· ೪, ೨೦
ಸಂಗಳಿಸಿದ – ಕೂಡಿಕೊಂಡ ೨, ೪೨ ವ
ಸಂಚುವೆತ್ತ – ಕಲಾಪೂರ್ಣವಾದ ೩, ೩೫ ವ
ಸತ್ತ್ವ – ಪ್ರಾಣಿ ೪, ೭
ಸದರ – ಸುಲಭ ೪, ೬೧
ಸದ್ವೃತ್ತ – (೧) ದುಂಡಾದ (೨) ಒಳ್ಳೆಯ ವರ್ತನವುಳ್ಳ ೧, ೨೮
ಸಂದೃಪ್ತ – ಮತ್ತ ೩, ೫೭
ಸಪತ್ನ – ಹಗೆ ೪, ೬೯
ಸಬ್ಬವಕಾರ – ಮೇಳದವ ೩, ೨
ಸಮದಂಡಿಯೊಳ್ – ಸರಿಜೋಡಿಯಾಗಿ ೪,೬೬
ಸರವಿ – ಹಗ್ಗ ೨, ೮೧
ಸರಳಿಸು – ಜಿಗಿ, ಹಾರು ೩, ೪೮
ಸರಿ – ಮಳೆ ೪, ೬೨
ಸವಗ – ಕವಚ ೨, ೧೦೮
ಸವಿಧ – ಸಮೀಪದ ೨, ೬೬
ಸಾಧ್ವಸ – ಭಯ ೪, ೬೨
ಸಾಮಜ – ಆನೆ ೨, ೪೬
ಸಾರಮೇಯ – ನಾಯಿ ೩, ೨೫
ಸಾರಸಾರಸ – ಕಮಲ ೫, ೨೭
ಸಾರ್ಕೆ – ಸಮೀಪ ೨, ೧೪
ಸಿಡುಂಬು – ಮುಳ್ಳು ಕಂಟ ೪, ೨೩
ಸಿತಗ – ಕ್ಷುಲ್ಲಕ ೨, ೮೬
ಸುಂಟಿಡು – ಸುತ್ತು ೨, ೬೮
ಸುತ್ರಾಮ – ಇಂದ್ರ ೫, ೨೫
ಸುಪರ್ವ – ದೇವತೆ ೪, ೨
ಸುಬಗ – ಸುಂದರ ೧, ೨೬
ಸುಮನ (ಸ್) – (೧) ದೇವತೆಗಳು (೨) ಹೂ ೧, ೨೮
ಸುರಾಧ್ವ – ಆಕಾಶ ೨, ೩೮

ಸುಸಿಲಾಸೆ – ಕಾಮೇಚ್ಛೆ ೧, ೨೭
ಸೂಡು – ತಲೆಮೇಲೆ ಹಾಕು ೪, ೬೨
ಸೂಟ್ – ಸರತಿ, ಸಮಯ ೧, ೭೯ ವ
ಸೆಡೆ – ಅಳ್ಕು, ಭಯಪಡು ೪, ೪೫
ಸೆಲಂದಿ – ಜೇಡರ ಹುಳ ೨, ೭೩
ಸೈರಿಭ – ಕೋಣ ೩, ೨೮
ಸ್ಫಟಿ – ಹೆಡೆ ೪, ೭೮
ಸ್ವರ್ಧುನೀ – ದೇವಗಂಗೆ ೫, ೨

## ಹ

ಹಮ್ಮದ – ಮೂರ್ಛೆ ೨, ೧೦
ಹರಿ – ಇಂದ್ರ, ವಿಷ್ಣು ೩, ೪೦
ಹರಿನ್ಮಣಿ – ಪಚ್ಚೆ ೧, ೩೮
ಹಾಲಾಹಲ – ವಿಷ ೧, ೩೧
ಹೃಷೀಕ – ಇಂದ್ರಿಯ ೨, ೯೦



# ಶುದ್ಧಿಪತ್ರಿಕೆ



| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೬ | ೨೭ | ನೀಡಿರಿ | ನೀಡಿಱಿ |
| ೧೧ | ೬, ೭ | ಚಂ।ದ್ರಿಕೆ | ಚಂ।ದ್ರಕಿ |
| ೧೪ | ೩೦ | ತೋರೆ | ತೋಱೆ |
| ೧೮ | ೨೬ | ತ್ರಯಾ | ತ್ರಯಿಾ |
| ೨೨ | ೧೨, ೧೪ | ಹೇ।ರಂಭ | ಹೇ।ರಂಬ |
| ೨೯ | ೧೭ | ಮಂಜರಿ | ಮಂಜರೀ |
| ,, | ೨೫ | ಕಾತೊಱಗುವ | ಕಾಯ್ತೊಱಗುವ |
| ೩೦ | ೭ | ಬೀಡೆವರಿ | ಬೀಡೆವಿರಿ |
| ,, | ೧೫ | ಸರಿಯೂಡಿನ | ಸರಿಯೂದಿನ |
| ೪೩ | ೫ | ಮರ್ತ್ಯಕಳ | ಮರ್ತ್ಯರ್ಕಳ |
| ೬೧ | ೮ | ಬಿಯದರ್ | ಬಿಯದರ |
| ೭೪ | ೨೨ | ದೊಡಲನದರ | ದೊಡಲನದಱ |
| ೭೮ | ೪ | ಬಳಿಕಲರ್ದುದು | ಬೞಿಕಲರ್ದುದು |
| ೮೨ | ೧೫ | ತಿಳವೊಳ | ತಿಳಿವೊಳ |
| ೮೫ | ೨೪, ೨೫ | ಕೆಯ್।ಗೆಟ್ಟುವ | ಕೆ।ಯ್ಗೆಟ್ಟುವ |
| ೯೫ | ೧೨ | ನಂತರಿಂ | ನಂತಱಿಂ |
| ೧೧೭ | ೩೦ | ಸುಂಟಿಡು | ಸುಂಕಿಡು |